ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪಿಎಚ್.ಡಿ

ಅಧ್ಯಯನದ ಮಹಾಪ್ರಬಂಧ

# ಹರಿದಾಸ ಸಾಹಿತ್ಯಕ್ಕೆ ಮಾಧ್ವಯತಿಗಳ ಕೊಡುಗೆ

ಸಂಶೋಧನ ವಿದ್ಯಾರ್ಥಿ

ರಮಾನಂದ ಕೆ. ವಿ.

ಮಾರ್ಗದರ್ಶಕರು

ಡಾ|| ಅನಂತ ಪದ್ಮನಾಭರಾವ್



ಎಂ.ಇ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ

ಬೆಂಗಳೂರು

೨೦೦೮–೨೦೦೯




ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪಿಎಚ್.ಡಿ

ಅಧ್ಯಯನದ ಮಹಾಪ್ರಬಂಧ

# ಹರಿದಾಸ ಸಾಹಿತ್ಯಕ್ಕೆ ಮಾಧ್ವಯತಿಗಳ ಕೊಡುಗೆ

ಸಂಶೋಧನ ವಿದ್ಯಾರ್ಥಿ

**ರಮಾನಂದ ಕೆ. ವಿ.**



ಮಾರ್ಗದರ್ಶಕರು

**ಡಾ॥ ಅನಂತಪದ್ಮನಾಭರಾವ್**





ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ

ಬೆಂಗಳೂರು

೨೦೦೮-೨೦೦೯

# ಪ್ರಮಾಣ ಪತ್ರ

ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೦೮-೦೯ನೇ ಸಾಲಿನ ಪಿಎಚ್.ಡಿ ಪದವಿಗಾಗಿ ಬೆಂಗಳೂರಿನ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ "ಹರಿದಾಸ ಸಾಹಿತ್ಯಕ್ಕೆ ಮಾಧ್ವ ಯತಿಗಳ ಕೊಡುಗೆ" ಎಂಬ ಮಹಾಪ್ರಬಂಧವನ್ನು ಶ್ರೀ ರಮಾನಂದ ಕೆ.ವಿ. ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ.

ಪ್ರಸ್ತುತ ಮಹಾಪ್ರಬಂಧವು ವಿದ್ಯಾರ್ಥಿಯ ಸ್ವಂತ ಬರಣಿಗೆಯಾಗಿದ್ದು ಈ ಮೊದಲು ಇವರು ಯಾವುದೇ ಪದವಿಗಾಗಿ ಸಾದರಪಡಿಸಿಲ್ಲವೆಂದು ಹಾಗೂ ಈ ಮಹಾಪ್ರಬಂಧದ ಯಾವುದೇ ಭಾಗವನ್ನು ಬೇರೆಲ್ಲೂ ಪ್ರಕಟಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ : 24.4.2009
ಸ್ಥಳ : ಬೆಂಗಳೂರು

24.4.2009
(ಅನಂತಪದ್ಮನಾಭರಾವ್)
ಮಾರ್ಗದರ್ಶಕರು
Principal
Vijaya Pre-University College
Jayanagar, Bangalore-11.

# ದೃಢೀಕರಣ ಪತ್ರ

ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೦೮-೦೯ನೇ ಸಾಲಿನ ಪಿಎಚ್.ಡಿ ಪದವಿಗಾಗಿ ಬೆಂಗಳೂರಿನ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಎಂ.ವಿ.ಸೀ ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ "ಹರಿದಾಸ ಸಾಹಿತ್ಯಕ್ಕೆ ಮಾಧ್ವ ಯತಿಗಳ ಕೊಡುಗೆ" ಎನ್ನುವ ಮಹಾಪ್ರಬಂಧವನ್ನು ಡಾ. ಅನಂತಪದ್ಮನಾಭರಾವ್ ಅವರ ಮಾರ್ಗ ದರ್ಶನದಲ್ಲಿ ಸಿದ್ಧಪಡಿಸಿದ್ದೇನೆ.

ಪ್ರಸ್ತುತ ಮಹಾಪ್ರಬಂಧವು ನನ್ನ ಸ್ವಂತ ಬರವಣಿಗೆಯಾಗಿದ್ದು ಈ ಮೊದಲು ಬೇರೆ ಯಾವುದೇ ಪದವಿಗಾಗಿ ಸಾದರ ಪಡಿಸಿಲ್ಲವೆಂದು ಹಾಗೂ ಈ ಮಹಾಪ್ರಬಂಧದ ಯಾವುದೇ ಭಾಗವನ್ನು ಬೇರೆಲ್ಲೂ ಪ್ರಕಟಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ರಮಾನಂದ. ಕೆ.ವಿ.
(ರಮಾನಂದ ಕೆ.ವಿ.)
ಸಂಶೋಧನ ವಿದ್ಯಾರ್ಥಿ

ದಿನಾಂಕ : 24-04-2009
ಸ್ಥಳ : ಬೆಂಗಳೂರು

## ಪರಿವಿಡಿ

ಅಧ್ಯಾಯ - ೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಹರಿದಾಸ ಸಾಹಿತ್ಯಕ್ಕೆ ಚಾಲನೆ ದೊರೆತದ್ದೇ ಯತಿಗಳಿಂದ. ಯತಿವರೇಣ್ಯರಾದ ಶ್ರೀಪಾದರಾಜರೇ ಕನ್ನಡ ಕೀರ್ತನೆಯಲ್ಲಿ ಹರಿಯನ್ನು ಸ್ತುತಿಸಿದ ಆದ್ಯರು. ಸಂಸ್ಕೃತ ಪಂಡಿತರಾದರೂ, ವೈಷ್ಣವ ತತ್ವಗಳನ್ನು ಕನ್ನಡ ಭಾಷೆಯಲ್ಲಿ ಪ್ರತಿಪಾದಿಸಿದ ಅವರ ಕನ್ನಡಾಭಿಮಾನ ಮೆಚ್ಚುವಂತದ್ದು. ಕೀರ್ತನೆ, ಉಗಾಭೋಗ, ಸುಳಾದಿ, ವೃತ್ತನಾಮ ಮತ್ತು ದಂಡಕವೆಂಬ ಹೊಸ ಪ್ರಕಾರಗಳನ್ನು ಕನ್ನಡಕ್ಕೆ ಪರಿಚಯಿಸುವುದರ ಮೂಲಕ ಹರಿದಾಸ ಸಾಹಿತ್ಯ ಪ್ರವರ್ತಕರೆನಿಸಿದರು. ಶ್ರೀಪಾದರಾಜರ ನಂತರ ಅವರ ಶಿಷ್ಯರಾದ ವ್ಯಾಸರಾಯರು ತಮ್ಮ ಗುರುಗಳು ಪ್ರಾರಂಭಿಸಿದ ಕೀರ್ತನ ಕೈಂಕರ್ಯಕ್ಕೆ ಒಂದು ಸುವ್ಯವಸ್ಥೆಯನ್ನು ಕಲ್ಪಿಸಿ ದಾಸಕೂಟದ ಮೇಲ್ವಿಚಾರಕರಾದರು. ಮಾಧ್ವ ಪಂಥದ ಬೋಧನೆ ಚಿಂತನೆಗಳೆಲ್ಲಾ ಸಂಸ್ಕೃತ ಭಾಷೆಯಲ್ಲಿ ಅಭಿವ್ಯಕ್ತವಾಗುತ್ತಿದ್ದ ಸಂದರ್ಭದಲ್ಲಿ ಕನ್ನಡದಲ್ಲಿ ಕೀರ್ತನೆ, ಸುಳಾದಿ ಮತ್ತು ಉಗಾಭೋಗಗಳನ್ನು ರಚಿಸಿ ಹರಿದಾಸ ಸಾಹಿತ್ಯಕ್ಕೆ ಮನ್ನಣೆ ದೊರೆಕಿಸಿಕೊಟ್ಟರು. ಪುರಂದರದಾಸರು, ಕನಕದಾಸರು, ವಾದಿರಾಜರು ಮುಂತಾದ ಉತ್ತಮ ಶಿಷ್ಯರನ್ನು ಕನ್ನಡಕ್ಕೆ ನೀಡಿದ ಇವರು, ವ್ಯಾಸಕೂಟದಷ್ಟೇ ಪ್ರಾಮುಖ್ಯವನ್ನು ದಾಸಕೂಟಕ್ಕೂ ನೀಡಿ, ಅನೇಕ ದಾಸರಿಗೆ ಅಂಕಿತೋಪದೇಶ ನೀಡಿ ಹರಿದಾಸ ಸಾಹಿತ್ಯವನ್ನು ಬೆಳೆಸಿದರು.

ಹರಿದಾಸ ಸಾಹಿತ್ಯಕ್ಕೆ ಶ್ರೇಷ್ಠವಾದ ಕೃತಿಗಳನ್ನು ಸಲ್ಲಿಸಿದ ಯತಿತ್ರಯರಲ್ಲಿ ವಾದಿರಾಜರು ಮೂರನೆಯವರು. ಶ್ರೀಪಾದರಾಜರು ಮತ್ತು ವ್ಯಾಸರಾಜರ ಹಾದಿಯನ್ನೇ ಅನುಸರಿಸಿ ಕನ್ನಡ, ಸಂಸ್ಕೃತ ಎರಡು ಭಾಷೆಗಳಲ್ಲಿ ಕೃತಿ ರಚನೆ ಮಾಡಿದರು. ಮಧ್ವತತ್ವದ ಸಿದ್ಧಾಂತವನ್ನು ಕೀರ್ತನೆ, ಸುಳಾದಿ, ಉಗಾಭೋಗಗಳಲ್ಲಿ ಸರಳವಾಗಿ ಪ್ರತಿಪಾದಿಸಿದರು. ಅಲ್ಲಿಗೆ ಅವರು ತೃಪ್ತರಾಗದೆ, ವೈಕುಂಠವರ್ಣನೆ, ಲಕ್ಷ್ಮಿ ಶೋಭಾನೆ, ಹರಿಸರ್ವೋತ್ತಮ ಸಾರ, ಗುಂಡಕ್ರಿಯೆ, ಸ್ವಪ್ನಪದ ಮೊದಲಾದ ದೀರ್ಘಕೃತಿಗಳನ್ನು ರಚಿಸಿದರು. ತ್ರಿಪದಿ, ಷಟ್ಪದಿ, ಸಾಂಗತ್ಯ, ಏಳೆ ಮೊದಲಾದ ಜಾನಪದ ಲಯಗಳ ಮೂಲಕ ಹಾಡನ್ನು ಜನರ ಹತ್ತಿರ ತರಲು ಪ್ರಯತ್ನಿಸಿದರು. ಹೀಗೆ ಹಾಡು ಬರಿಯ ರಂಜನೆಯಾಗದೆ ಬೋಧಪ್ರದವೂ ಆಗಲೆಂದು ಹಾಡಿನ ಲಯದಲ್ಲಿ ತತ್ವವನ್ನು

ಬೆರೆಸಿದರು. ಕಥನ ಕಲೆಯನ್ನು ಪರಿಚಯಿಸಿದರು. ಸಾಹಿತ್ಯ ಮತ್ತು ಶಾಸ್ತ್ರ ಎರಡರಲ್ಲೂ ತಾವು ಸಿದ್ಧಹಸ್ತರೆಂದು ನಿರೂಪಿಸಿದರು. ಮುಂದೆ ವಾದಿರಾಜರ ಸುಳಾದಿಗಳು, ದೀರ್ಘಕೃತಿಗಳಿಂದ ಪ್ರೇರಣೆಗೊಂಡ ವಿಜಯದಾಸರು, ಜಗನ್ನಾಥದಾಸರು ಮೊದಲಾದ ಹರಿದಾಸರುಗಳು ಮಧ್ವ ಸಿದ್ಧಾಂತದ ತತ್ವಗಳನ್ನು ತ್ಮಮ ಕೃತಿಗಳಲ್ಲಿ ಸೊಗಸಾಗಿ ನಿರೂಪಿಸಿದರು.

ಶ್ರೀಪಾದರಾಜರು, ವ್ಯಾಸರಾಜರು ಮತ್ತು ವಾದಿರಾಜರು ಈ ಹರಿದಾಸ ಸಾಹಿತ್ಯವನ್ನು ಬೆಳೆಸಿ, ಪೋಷಿಸಿದ ಪ್ರಮುಖ ಯತಿಗಳು. ದಾಸ ಸಾಹಿತ್ಯದಲ್ಲಿ ಈ ಮೂವರನ್ನು ಯತಿತ್ರಯರೆಂದೇ ಗುರುತಿಸಲಾಗುತ್ತದೆ. ಈ ಮೂವರು ಯತಿಗಳಲ್ಲಿ ಹಲವಾರು ಸಮಾನ ಅಂಶಗಳನ್ನು ಗುರುತಿಸಬಹುದು. ಈ ಯತಿಗಳೆಲ್ಲರೂ ಅರಸರುಗಳಿಗೆ ರಾಜಗುರುಗಳಾಗಿ, ಮಾರ್ಗದರ್ಶಕರಾಗಿ ರಾಜಾಶ್ರಯವನ್ನು ಪಡೆದಿದ್ದರು. ರಾಜರುಗಳು ಯತಿಗಳ ಸೇವೆಗೆ ಪ್ರತಿಯಾಗಿ ರಾಜಮರ್ಯಾದೆ, ಗೌರವಗಳನ್ನು ತೋರಿ, ಅನೇಕ ಬಳುವಳಿ, ದಾನ – ದತ್ತಿಗಳನ್ನು ನೀಡಿದರು. ಹೀಗೆ ಸ್ವೀಕರಿಸಿದ ದಾನ ದತ್ತಿಗಳನ್ನು ಸಮಾಜಸೇವೆಗಾಗಿಯೇ ಬಳಸಿದ ಉದಾರ ಮನೋಭಾವದ ಯತಿಗಳಿವರು. ಧಾರ್ಮಿಕ ವರ್ಚಸ್ಸಿನ ಜೊತೆಗೆ ರಾಜಕೀಯ ವರ್ಚಸ್ಸನ್ನೂ ಹೊಂದಿದ್ದ ಈ ಯತಿಗಳು ಒಂದು ರೀತಿಯಲ್ಲಿ ದಂಡಾಧಿಕಾರಿಗಳು ಆಗಿದ್ದರು. ಶ್ರೀಪಾದರಾಜ, ವಾದಿರಾಜ, ವ್ಯಾಸರಾಜ ಹೀಗೆ ಇವರ ಹೆಸರಿನೊಂದಿಗೆ 'ರಾಜ' ಎಂಬ ಪದ ಬೆಸೆದುಕೊಂಡಿದೆ. ಇವರ ಮಠಗಳಿಗೆ ಇಂದಿಗೂ 'ಸಂಸ್ಥಾನ'ವೆಂದೇ ಕರೆಯುತ್ತಾರೆ. ಹೀಗೆ ಈ ಮೂವರು ಯತಿತ್ರಯರು ಕೇವಲ ಧಾರ್ಮಿಕ ಮುಖಂಡರುಗಳಾಗಿರದೇ ಅಂದಿನ ಕಾಲದಲ್ಲಿ ರಾಜಕೀಯವಾಗಿ ಪ್ರಭಾವಿ ವ್ಯಕ್ತಿಗಳಾಗಿದ್ದು, ಇವರ ಜೀವನದಲ್ಲಿ ರಾಜತ್ವದ ಛಾಯೆಯನ್ನು ಗುರುತಿಸಬಹುದಾಗಿದೆ.

ವ್ಯಾಸರಾಯರ ಶಿಷ್ಯರಾದ ವಿಜಯೀಂದ್ರತೀರ್ಥರು ಸಂಸ್ಕೃತದಲ್ಲಿ ೧೦೪ ಕೃತಿಗಳನ್ನು ರಚಿಸಿದ್ದಾರೆ. ಅವುಗಳ ಪೈಕಿ ೬೨ ಕೃತಿಗಳು ಲಭ್ಯವಿದೆ. ಇಷ್ಟು ದೊಡ್ಡ ಸಂಖ್ಯೆಯ ಕೃತಿಗಳು ವಿಜಯೀಂದ್ರ ತೀರ್ಥರನ್ನು ಬಿಟ್ಟರೆ, ಬೇರೆ ಯಾವ ಮಾಧ್ವ ಯತಿಗಳೂ ರಚಿಸಿಲ್ಲ. ಸಂಸ್ಕೃತದಲ್ಲಿ ಅಪಾರ ಪಾಂಡಿತ್ಯ ಹೊಂದಿದ್ದರೂ 'ವಿಜಯೀಂದ್ರರಾಮ' ಎಂಬ ಅಂಕಿತದಲ್ಲಿ ಇವರು ಕನ್ನಡ ಕೀರ್ತನೆಗಳನ್ನು ರಚಿಸಿ ಹರಿದಾಸ ಸಾಹಿತ್ಯವನ್ನು ಬೆಳೆಸಿದರು. ವಿಜಯೀಂದ್ರರ ಪ್ರಶಿಷ್ಯರಾದ

ರಾಘವೇಂದ್ರತೀರ್ಥರು ಕನ್ನಡದಲ್ಲಿ ಬರೆದಿರುವ ಒಂದೇ ಒಂದು ಕೀರ್ತನೆ ಮಾತ್ರ ಲಭ್ಯವಿದ್ದರೂ, ರಾಘವೇಂದ್ರರನ್ನು ಕುರಿತಂತೆ ಮುನ್ನೂರಕ್ಕೂ ಹೆಚ್ಚು ಕನ್ನಡ ಕೃತಿಗಳು ದೊರೆಯುತ್ತವೆ. ಇವರು ಪುರಂದರರು ಮತ್ತು ವಿಜಯದಾಸರ ನಡವಿನ ಕಾಲದಲ್ಲಿ ಒಂದು ಸೇತುವೆಯಂತಿದ್ದು, ವ್ಯಾಸಕೂಟ ಮತ್ತು ದಾಸಕೂಟದವರಿಗೆ ಚೈತನ್ಯವನ್ನು ನೀಡಿದರು. ಇವರ ಪ್ರೇರಣೆಯಿಂದಲೇ ಸ್ಥಗಿತವಾಗಿದ್ದ ಹರಿದಾಸ ಸಾಹಿತ್ಯ ತುಂಗಾತೀರ ಪ್ರದೇಶದಲ್ಲಿ ಪುನಶ್ಚೇತನ ಪಡೆಯಿತು. ವ್ಯಾಸತತ್ವಜ್ಞರು ತಮ್ಮ ಯತ್ಯಾಶ್ರಮದ ಪೂರ್ವದಲ್ಲಿಯೇ ಹರಿದಾಸರಾಗಿದ್ದು 'ವಾಸುದೇವ ವಿಠಲ' ಎಂಬ ಅಂಕಿತನಾಮದಿಂದ ಕೀರ್ತನೆಗಳನ್ನು ರಚಿಸಿದ್ದರು. ಯತ್ಯಾಶ್ರಮವನ್ನು ಸ್ವೀಕರಿಸಿದ ಮೇಲೆಯೂ ವಾಸುದೇವವಿಠಲ ಅಂಕಿತದಲ್ಲಿಯೇ ತಮ್ಮ ಕೀರ್ತನೆಗಳನ್ನು ಮುಂದೆವರೆಸಿದರು. ವೇಣಿ ಸೋಮಪುರದಲ್ಲಿ ಗೋಪಾಲಕೃಷ್ಣನ ದೇವಾಲಯವನ್ನು ನಿರ್ಮಿಸಿ, ಅದನ್ನು ಹರಿದಾಸ ಕೇಂದ್ರವನ್ನಾಗಿ ಮಾಡಿ ದಾಸ ಸಾಹಿತ್ಯವನ್ನು ಬೆಳೆಸಿದರು.

ಹರಿದಾಸ ಪರಂಪರೆಯನ್ನು ಬೆಳೆಸಿ ಪೋಷಿಸಿದ ಪ್ರಮುಖ ಯತಿಗಳಲ್ಲಿ ವಿದ್ಯಾರತ್ನಾಕರತೀರ್ಥರು ಪ್ರಮುಖರು. ವ್ಯಾಸರಾಯರ ನಂತರ ಬಂದ ಯತಿಗಳಲ್ಲಿ, ವ್ಯಾಸರಾಜರು ತೋರಿದ ಕನ್ನಡ ಭಾಷಾಭಿಮಾನ ಕ್ರಮೇಣ ಕಡಿಮೆಯಾಗುತ್ತಾ ಬಂದು ಶಾಸ್ತ್ರಾಧ್ಯಯನ ಮತ್ತು ಸಂಸ್ಕೃತ ಪಾಂಡಿತ್ಯಕ್ಕೆ ಮಾತ್ರ ಮೀಸಲಾದವು. ವಿದ್ಯಾಕಾಂತತೀರ್ಥರು ಮತ್ತು ವಿದ್ಯಾರತ್ನಾಕರತೀರ್ಥರು ಮತ್ತೆ ಪ್ರಾರಂಭಿಸಿದ ಕೀರ್ತನೆಗಳ ರಚನೆ, ವಿದ್ಯಾಪ್ರಸನ್ನತೀರ್ಥರಿಂದ ಮತ್ತಷ್ಟು ವಿಸ್ತಾರವಾಯಿತು. ವಿದ್ಯಾಪ್ರಸನ್ನತೀರ್ಥರು ಸುಮಾರು ಮುನ್ನೂರು ಕೀರ್ತನೆಗಳನ್ನು ರಚಿಸಿದ್ದಾರೆ. ತಾವು ರಚಿಸಿದ ಕೀರ್ತನೆಗಳನ್ನು ತಾವೇ ಸ್ವತಃ ಹಾಡಿ ಇತರರಿಗೂ ಹಾಡುವುದನ್ನು ಕಲಿಸುತ್ತಿದ್ದ ಇವರ ಹಾಡುಗಳು ಬಹಳ ಬೇಗ ಜನ ಮನ್ನಣೆಯನ್ನು ಪಡೆಯಿತು. ಲೌಕಿಕ ವಿಷಯಗಳಿಗೆ ಆಧ್ಯಾತ್ಮಿಕ ಲೇಪನ ನೀಡಿ ಕೃತಿಗಳನ್ನು ರಚಿಸುವುದು ವಿದ್ಯಾಪ್ರಸನ್ನತೀರ್ಥರ ವೈಶಿಷ್ಟ್ಯ. ಆತ್ಮವಿಮರ್ಶೆ, ಭಕ್ತಿ, ತತ್ವ, ಸಮಾಜಚಿಂತನೆ, ಸಂಪ್ರದಾಯದ ಹಾಡುಗಳು ಹೀಗೆ ಇವರ ಕೃತಿಗಳು ವಿಶಾಲ ಹರಹನ್ನು ಪಡೆದಿದೆ. ಇವುಗಳ ಜೊತೆಗೆ 'ಕೂಡಿಟ್ಟ ಕೈ' ಮತ್ತು 'ಜಿಹ್ವಾಚಾಪಲ್ಯ' ಎಂಬ ಎರಡು ನಾಟಕಗಳನ್ನೂ ಸಹ ರಚಿಸಿದ್ದಾರೆ. ಧಾರ್ಮಿಕ ಚಿಂತನೆಗಳು ಮತ್ತು ಆಚರಣೆಗಳು ಶಿಥಿಲವಾಗುತ್ತಿದ್ದ ಸಂದರ್ಭದಲ್ಲಿ ಶ್ರೀಪಾದರಾಜರ, ವ್ಯಾಸರಾಜರ ದಾಸ ಪರಂಪರೆಯನ್ನು ಉಳಿಸಿ ಬೆಳೆಸಿದ ಕೀರ್ತಿ ವಿದ್ಯಾಪ್ರಸನ್ನತೀರ್ಥರಿಗೆ

ಸಲ್ಲುತ್ತದೆ. ಈ ಎಲ್ಲಾ ದೃಷ್ಟಿಯಿಂದ ಹರಿದಾಸ ಸಾಹಿತ್ಯ ಚರಿತ್ರೆಯಲ್ಲಿ ಸ್ಮರಣೀಯರಾಗಿದ್ದಾರೆ. ಉಡುಪಿಯ ಸೋದೆ ಮಠದ ವಿಶ್ವೇಂದ್ರತೀರ್ಥರು, ಸಾಗರಕಟ್ಟೆ ಮಠದ ಪ್ರದ್ಯುಮ್ನತೀರ್ಥರೂ ಸಹ ಕನ್ನಡದಲ್ಲಿ ಕೀರ್ತನೆಗಳನ್ನು ರಚಿಸಿ ದಾಸ ಸಾಹಿತ್ಯವನ್ನು ಬೆಳೆಸಿದರು.

ಶ್ರೀಪಾದರಾಜರು ಕನ್ನಡದಲ್ಲಿ ಮೊದಲು ಕೀರ್ತನೆಗಳನ್ನು ರಚಿಸಿ ದಾಸಸಾಹಿತ್ಯ ಪ್ರವರ್ತಕರೆನಿಸಿದರು. ವ್ಯಾಸರಾಯರಂತಹ ಶ್ರೇಷ್ಠ ಶಿಷ್ಯರನ್ನು ನೀಡಿದರು. ಅವರು ಮುಳುಬಾಗಿಲಿನಲ್ಲಿ ಮಠ ಸ್ಥಾಪಿಸಿದಂದಿನಿಂದ ಇಂದಿನವರೆಗೆ ದಾಸ ದೀಕ್ಷೆ ಸ್ವೀಕರಿಸಿದ ದಾಸರಿಗೆ ಹರಿದಾಸಕೇಂದ್ರವಾಗಿದೆ. ಅಲ್ಲದೆ ಪವಿತ್ರ ತೀರ್ಥಕ್ಷೇತ್ರವೂ ಆಗಿದೆ. ಇಲ್ಲಿ ಹರಿದಾಸರಿಗೆ ಪೂಜಾಕಾಲದಲ್ಲಿ ಕೀರ್ತನೆಗಳ ಸೇವೆಗೆ ಅವಕಾಶ ಕಲ್ಪಿಸುವುದರ ಜೊತೆಗೆ ಅವರಿಗೆ ಗೌರವ, ಪುರಸ್ಕಾರ ಸೂಕ್ತ ಸಂಭಾವನೆಯನ್ನು ನೀಡುತ್ತಾ ಬಂದಿದೆ. ಶ್ರೀಪಾದರಾಜರು ಪ್ರಾರಂಭಿಸಿದ ಈ ಕೀರ್ತನ ಕೈಂಕರ್ಯವನ್ನು ಕ್ರಮಬದ್ಧಗೊಳಿಸಿದ ವ್ಯಾಸರಾಯರು, ಪುರಂದರದಾಸರು, ಕನಕದಾಸರಂತ ಅನೇಕ ದಾಸಶ್ರೇಷ್ಠರಿಗೆ ಹರಿದಾಸ ದೀಕ್ಷೆ ನೀಡುವ ಮೂಲಕ 'ದಾಸಕೂಟದ' ನಿರ್ಮಾತೃಗಳೆನಿಸಿದರು. ಶ್ರೀವ್ಯಾಸರಾಯರ ತರುವಾಯ ಅವರ ಮಠಕ್ಕೆ ವ್ಯಾಸರಾಯಮಠವೆಂಬ ಹೆಸರೇ ರೂಢಿಗೆ ಬಂದು ಪ್ರಸಿದ್ಧಿಪಡೆಯಿತು. ಶ್ರೀವ್ಯಾಸರಾಯರ ಪರಂಪರೆಯಲ್ಲಿ ಬಂದ ವಿದ್ಯಾಸಿಂಧುತೀರ್ಥರು, ವಿದ್ಯಾನಿಧಿತೀರ್ಥರು ಪೂಜಾಕಾಲದಲ್ಲಿ ದಾಸರಿಂದ ಕೀರ್ತನೆಗಳನ್ನು ಹೇಳಿಸುತ್ತಿದ್ದರು. ವಿದ್ಯಾಕಾಂತತೀರ್ಥರು, ವಿದ್ಯಾರತ್ನಾಕರ ತೀರ್ಥರು, ವಿದ್ಯಾಪ್ರಸನ್ನತೀರ್ಥರು ಸ್ವತಃ ಹರಿದಾಸರಾಗಿದ್ದು ಅನೇಕ ಕೀರ್ತನೆಗಳನ್ನು ರಚಿಸುವುದರೊಂದಿಗೆ, ಇತರ ಹರಿದಾಸರನ್ನು, ದಾಸಸಾಹಿತ್ಯವನ್ನು ಪೋಷಿಸಿ ಬೆಳೆಸಿದರು. ರಾಯರಮಠ, ಉತ್ತರಾಧಿಮಠ, ಉಡುಪಿಯ ಮಠ ಹೀಗೆ ಎಲ್ಲಾ ಮಾಧ್ವಮಠಗಳಲ್ಲಿಯೂ ಹರಿದಾಸ ಸಾಹಿತ್ಯಕ್ಕೆ ಇಂದಿಗೂ ಪ್ರೋತ್ಸಾಹ ದೊರೆಯುತ್ತಿದೆ. "ಈ ಮಠಾಧಿಪತಿಗಳ ಪ್ರೋತ್ಸಾಹ ಕಾರಣದಿಂದ ದೇವರ ಪೂಜೆಯ ಕಾಲದಲ್ಲಿ ಸುಪ್ರಭಾತ, ಆರತಿ, ಶಯನ, ಸಂಗೀತ ಸೇವೆಗಳ ಸಂದರ್ಭದಲ್ಲಿ ಕನ್ನಡ ಹಾಡುಗಳನ್ನು ಹಾಡಲು ಹರಿದಾಸರಿಗೆ ಅವಕಾಶವಾಯಿತು. ಕೆಲವು ಮಠಗಳಲ್ಲಿ ಮತ್ತು ದೇವಾಲಯಗಳಲ್ಲಿ ಅಷ್ಟಾವಧಾನ ಸೇವೆ ಮಾಡುವಾಗ ವೇದಶಾಸ್ತ್ರ, ಪುರಾಣ, ಗದ್ಯ, ಜ್ಯೋತಿಷ್ಯ, ಸಂಗೀತ ಮೊದಲಾದ ಸೇವೆಗಳ ಜೊತೆಗೆ 'ಉಗಾಭೋಗ ಸೇವಾಪ್ರಿಯ, ಉಗಾಭೋಗ ಸೇವಾಮವಧಾರಯ', 'ಸುಳಾದಿ ಸೇವಾಪ್ರಿಯ, ಸುಳಾದಿ ಸೇವಾಮವಧಾರಯ' ಎಂದು ಉಗಾಭೋಗ, ಸುಳಾದಿಗಳನ್ನು ಹಾಡುವ

ಪದ್ಧತಿ ಬಂತು".೧ ನರ್ತನ ಸೇವೆ, ಹರಿವಾಣ ಸೇವೆಗಳಲ್ಲಿ ದಾಸರ ಪದಗಳನ್ನೇ ಹಾಡುತ್ತಿದ್ದರು. ಹೀಗೆ ೧೯ನೇ ಶತಮಾನದ ವೇಳೆಗೆ ಕೀರ್ತನೆಯು ಸ್ಪಷ್ಟ ರೂಪವನ್ನು ಪಡೆದು ಕ್ರಮಬದ್ಧವಾಯಿತು. ಕನ್ನಡದ ಹಾಡುಗಳನ್ನು ಹಾಡುವ ಹರಿಭಜನ ಪದ್ಧತಿಯು ಒಂದು ಸಂಪ್ರದಾಯವಾಯಿತು. ದೇವಾಲಯ, ಮಠಗಳಲ್ಲಿ ಅಧಿಕೃತವಾದ ಮಾನ್ಯತೆಯನ್ನು ಪಡೆಯಿತು.

ಒಟ್ಟಾರೆ ಶ್ರೀಪಾದರಾಜರಿಂದ ಹಿಡಿದು ಪ್ರದ್ಯುಮ್ನತೀರ್ಥರವರೆಗೆ ಅಂದರೆ ಹದಿನೈದನೇ ಶತಮಾನದಿಂದ ಇಪ್ಪತ್ತನೇ ಶತಮಾನದವರೆಗೆ ವಿವಿಧ ಕಾಲ ಘಟ್ಟದಲ್ಲಿ ಇದ್ದ ಕೆಲವು ಮಾಧ್ವಯತಿಗಳು ಸ್ವತಃ ಕನ್ನಡದಲ್ಲಿ ಕೀರ್ತನೆಯನ್ನು ರಚಿಸಿ, ಹರಿದಾಸ ಸಾಹಿತ್ಯವನ್ನು ಪೋಷಿಸಿದ ಬೆಳೆಸಿದರು. ಇಂತಹ ಯತಿಗಳ ಕನ್ನಡ ಸೇವೆಯನ್ನು ಮಾತ್ರ ಇಲ್ಲಿ ದಾಖಲಿಸುವ ಪ್ರಯತ್ನ ಮಾಡಲಾಗಿದೆ. ಅಲ್ಲದೆ ಇತ್ತೀಚಿನ ಕೆಲವು ಯತಿಗಳು ಕನ್ನಡದಲ್ಲಿ ಕೀರ್ತನೆಗಳನ್ನು ರಚಿಸಿದ್ದರೂ ಅವುಗಳಿಂದ ಹೆಚ್ಚು ಸಾಹಿತ್ಯಕ ಮೌಲ್ಯಗಳನ್ನು ಅಪೇಕ್ಷಿಸುವಂತಿಲ್ಲ.

ಈ ಅಧ್ಯಯನದಲ್ಲಿ ಒಟ್ಟು ಹತ್ತು ಅಧ್ಯಾಯಗಳಿವೆ. ಈ ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿಯನ್ನು ಕುರಿತು ಚರ್ಚಿಸಲಾಗಿದೆ. ಎರಡನೇ ಅಧ್ಯಾಯದಲ್ಲಿ ಹರಿದಾಸ ಸಾಹಿತ್ಯದ ಹಿನ್ನಲೆ, ಪ್ರೇರಣೆ ಹಾಗೂ ಯತಿಗಳ ಜೀವನವನ್ನು ಕುರಿತು ಚರ್ಚಿಸಲಾಗಿದೆ. ಮೂರನೇ ಅಧ್ಯಾಯದಲ್ಲಿ ಯತಿಗಳು ಹರಿದಾಸರಾಗುವ ಮುಂಚಿನ ಜೀವನದಲ್ಲಿ ನಡೆದ ತಪ್ಪು- ಒಪ್ಪುಗಳನ್ನು, ನಾನಾ ರೀತಿಯಲ್ಲಿ ಭಗವಂತನಲ್ಲಿ ನಿವೇದಿಸಿಕೊಂಡು ಆತ್ಮಶೋಧನೆ ಮಾಡಿಕೊಂಡಿದ್ದಾರೆ. ಅದನ್ನು ಕುರಿತು ಚರ್ಚಿಸಲಾಗಿದೆ. ನಾಲ್ಕನೇ ಅಧ್ಯಾಯದಲ್ಲಿ ಹರಿದಾಸ ಯತಿಗಳ ಭಕ್ತಿಯ ಸ್ವರೂಪವನ್ನು ಅವರ ಆರಾಧನಾ ವೈವಿಧ್ಯಗಳ ಹಿನ್ನಲೆಯಲ್ಲಿ ಅಧ್ಯಯನ ಮಾಡಲಾಗಿದೆ. ಐದನೇ ಅಧ್ಯಾಯದಲ್ಲಿ ರಾಮಾಯಣ, ಮಹಾಭಾರತ, ಭಾಗವತ, ವೇದ, ಉಪನಿಷತ್ತುಗಳನ್ನು ಆಳವಾಗಿ ಅಧ್ಯಯನ ಮಾಡಿಕೊಂಡಿದ್ದ ಯತಿಗಳು ಅದರಲ್ಲಿ ಬರುವ ಕತೆಗಳನ್ನು ದ್ವೈತ ಸಿದ್ಧಾಂತಕ್ಕೆ ಅಳವಡಿಸಿ, ತತ್ವಗಳನ್ನು ಸರಳವಾಗಿ ನಿರೂಪಿಸಿ ಸಾಮಾನ್ಯರಿಗೆ ತಲುಪಿಸಿದರು. ಹೀಗೆ ಯತಿಗಳು ಕನ್ನಡದಲ್ಲಿ ಪ್ರತಿಪಾದಿಸಿರುವ ದ್ವೈತಸಿದ್ಧಾಂತವನ್ನು ಕುರಿತು ಅಧ್ಯಯನ ಮಾಡಲಾಗಿದೆ.

ಆರನೇ ಅಧ್ಯಾಯದಲ್ಲಿ ಯತಿಗಳು ನೀಡಿದ ಸಾರ್ವತ್ರಿಕ ಉಪದೇಶವನ್ನು ಕುರಿತು

ಚರ್ಚಿಸಲಾಗಿದೆ. ಹರಿದಾಸರಿಗಿದ್ದ ಸ್ವಾತಂತ್ರ್ಯ ಯತಿಗಳಿಗೆ ಇರಲಿಲ್ಲ. ಭಾಷೆ, ಆಹಾರ, ಉಡುಗೆ, ತೊಡುಗೆ, ಜೀವನಕ್ರಮ ಇವುಗಳಲ್ಲಿ ಅನೇಕ ಪರಿಮಿತಿಗಳಿದ್ದವು. ಸಂಸಾರದಿಂದ ದೂರ ಉಳಿದ ಯತಿಗಳು ಸಮಾಜವನ್ನು ತೆರೆದ ಕಣ್ಣಿನಿಂದ ನೋಡಲು ಸಾಧ್ಯವಾಗಲಿಲ್ಲ. ಹಾಗಾಗಿ ಇವರ ಕೃತಿಗಳಲ್ಲಿ ಸಮೃದ್ಧ ಜೀವನಾನುಭವ ನಿರೀಕ್ಷಿಸಲು ಸಾಧ್ಯವಿಲ್ಲ. ಆದರೂ ಈ ಎಲ್ಲಾ ಕಟ್ಟುಪಾಡು ಚೌಕಟ್ಟುಗಳ ನಡುವೆಯೂ ಒಬ್ಬ ಮನುಷ್ಯ ಸಮಾಜದಲ್ಲಿ ಹೇಗೆ ಸನ್ಮಾರ್ಗದಲ್ಲಿ ನಡೆದು ಸತ್ಪ್ರಜೆಯಾಗಿ ಬಾಳಬೇಕೆಂಬುದನ್ನು ಸಾಕಷ್ಟುಕಡೆ ಚರ್ಚಿಸಿದ್ದಾರೆ. ಯತಿಗಳ ಇಂತಹ ಸಾರ್ವತ್ರಿಕ ಸಂದೇಶ ಕೃತಿಗಳಲ್ಲಿರುವ ಲೋಕನೀತಿಯನ್ನು ಕುರಿತು ಚರ್ಚಿಸಲಾಗಿದೆ.

ಏಳನೇ ಅಧ್ಯಾಯದಲ್ಲಿ ಆದ್ಯ ಪ್ರವರ್ತಕರಾದ ಶ್ರೀಪಾದರಾಜರು ಭಗವಂತನ ಪೂಜಾ ಸಮಯದಲ್ಲಿ ಆತ್ಮನಿವೇದನೆಗೆಂದು ಕೀರ್ತನೆ, ಸುಳಾದಿ, ಉಗಾಭೋಗಗಳನ್ನು ರಚಿಸಿದರು. ಮುಂದೆ ಅದು ಕ್ರಮ ಕ್ರಮವಾಗಿ ವಿಸ್ತಾರವಾಗುತ್ತಾ ಹೋಯಿತು. ಕೀರ್ತನೆ, ಸುಳಾದಿ, ಉಗಾಭೋಗಗಳು ತೀರ ಸಣ್ಣ ರಚನೆಗಳಾಗಿದ್ದು ಅವುಗಳ ವ್ಯಾಪ್ತಿ ಸೀಮಿತವಾದ್ದರಿಂದ, ಅದರಲ್ಲಿ ರಾಮಾಯಣ, ಮಹಾಭಾರತ, ಭಾಗವತ, ಪುರಾಣ, ಐತಿಹ್ಯದಲ್ಲಿ ಬರುವ ಸಂಪೂರ್ಣ ಕಥನವನ್ನು ತರಲು ಸಾಧ್ಯವಾಗಲಿಲ್ಲ. ಹಾಗಾಗಿ ಶ್ರೀಪಾದಾರಾಜರು ವೃತ್ತನಾಮ, ದಂಡಕದಂತಹ, ದೀರ್ಘಕೃತಿಗಳನ್ನು ರಚಿಸಿದರು. ಮುಂದೆ ಬಂದ ವಾದಿರಾಜರು ಶ್ರೀಪಾದರಾಜರ ಹಾದಿಯಲ್ಲೇ ನಡೆದುದಲ್ಲದೆ ಅದನ್ನು ಮತ್ತಷ್ಟು ವಿಸ್ತರಿಸಿದರು. ಏಳೆ, ತ್ರಿಪದಿ, ಷಟ್ಪದಿ, ಸಾಂಗತ್ಯ ಮೊದಲಾದ ಜಾನಪದ ಲಯಗಳ ಮೂಲಕ ಹಾಡನ್ನು ಜನರ ಹತ್ತಿರ ತರಲು ಪ್ರಯತ್ನಿಸಿದರು. ಹಾಡು ಬರಿಯ ರಂಜನೆಯಾಗದೆ ಬೋಧಪ್ರದವೂ ಆಗಲೆಂದು ಹಾಡಿನ ಲಯದಲ್ಲಿ ತತ್ವವನ್ನು ಬೆರೆಸಿದರು. ಕಥನಕಲೆಯನ್ನು ಪರಿಚಯಿಸಿದರು. ಸಾಹಿತ್ಯ ಮತ್ತು ಶಾಸ್ತ್ರ ಎರಡರಲ್ಲೂ ತಾವು ಸಿದ್ಧಹಸ್ತರೆಂದು ತೋರಿಸಿದರು. ವೈಕುಂಠವರ್ಣನೆ, ಹರಿಸರ್ವೋತ್ತಮಸಾರ, ಲಕ್ಷ್ಮೀಶೋಭಾನೆ, ಗುಂಡಕ್ರಿಯೆ, ಅವತಾರತ್ರಯ ಸುವ್ವಾಲಿ ಮುಂತಾದ ದೀರ್ಘಕೃತಿಗಳನ್ನು ರಚಿಸಿದರು. ಇವು ನಿರ್ದಿಷ್ಟವಾದ ವಿಷಯವೊಂದನ್ನು ಕುರಿತು ಬರೆದ ಕಿರುಕಾವ್ಯಗಳು ಹೀಗೆ ಶ್ರೀಪಾದರಾಜರು, ವಾದಿರಾಜರು, ವಿದ್ಯಾಪ್ರಸನ್ನತೀರ್ಥರು ರಚಿಸಿರುವಂತಹ ದೀರ್ಘಕೃತಿಗಳನ್ನು ಕುರಿತು ಇಲ್ಲಿ ಅಧ್ಯಯನ ಮಾಡಲಾಗಿದೆ.

ಎಂಟನೇ ಅಧ್ಯಾಯದಲ್ಲಿ ಸಾಹಿತ್ಯ ವಿಶ್ಲೇಷಣೆಯನ್ನು ಮಾಡಲಾಗಿದೆ. ವಚನ ಸಾಹಿತ್ಯವಾಗಲಿ, ಹರಿದಾಸ ಸಾಹಿತ್ಯವಾಗಲಿ ಉದ್ದೇಶಪೂರ್ವಕವಾಗಿ ರಚನೆಯಾದದ್ದಲ್ಲ. ಆಧ್ಯಾತ್ಮಿಕ ತಳಹದಿಯ ಮೇಲೆ ತತ್ವಪ್ರಚಾರಕ್ಕೆಂದು ತನ್ಮಯರಾಗಿ ತಮ್ಮ ಅಂತರಂಗದ ಅನುಭವಗಳನ್ನು ಜನಸಾಮಾನ್ಯರ ಆಡು ನುಡಿಗಳಲ್ಲಿ ನೇರವಾಗಿ ಅಭಿವ್ಯಕ್ತಿಸಿರುವುದರಿಂದ ಅವು ಸಾಹಿತ್ಯದ ಅನೇಕ ಲಕ್ಷಣಗಳನ್ನು ಪಡೆದುಕೊಂಡಿದೆ. ಆದ್ದರಿಂದಲೇ ಅವುಗಳನ್ನು ಕನ್ನಡ ಸಾಹಿತ್ಯದ ಒಂದು ಪ್ರಕಾರವಾಗಿ ಪರಿಗಣಿಸಲಾಗಿದೆ. ಹರಿದಾಸರು ಯಾರು ತಾವು ಕವಿಗಳಾಗಬೇಕೆಂದು ಆಶಿಸಿದವರಲ್ಲ. ಜೀವನದಲ್ಲಿ ತಮಗಾದ ಅನುಭವಗಳನ್ನು ಸಹಜವಾಗಿ ಅಭಿವ್ಯಕ್ತಿಸಿದರು. ತಮ್ಮ ತಪ್ಪು ಒಪ್ಪುಗಳನ್ನು ಭಗವಂತನಲ್ಲಿ ಆತ್ಮೀಯವಾಗಿ ನಿವೇದಿಸಿಕೊಂಡರು. ತಮ್ಮ ಆತ್ಮವಿಮರ್ಶೆ ಮಾಡಿಕೊಂಡರು. ಭಗವಂತನನ್ನು ಹಲವು ಬಗೆಗಳಲ್ಲಿ ನಾನಾ ರೀತಿಗಳಲ್ಲಿ ಆರಾಧಿಸಿದರು. ತಾವು ನಂಬಿದ ದ್ವೈತ ಸಿದ್ಧಾಂತವನ್ನು ಸರಳವಾಗಿ ಪ್ರಾದೇಶಿಕ ಭಾಷೆಯಲ್ಲಿ ನಿರೂಪಿಸಿ ಸಾಮಾನ್ಯರಿಗೂ ತಲುಪಿಸಿದರು. ತತ್ವ, ಶಾಸ್ತ್ರಗಳನ್ನು ಸಾಹಿತ್ಯ ಮಾಡಿದ್ದು ಇವರ ವೈಶಿಷ್ಟ್ಯ. ಪ್ರತಿಯೊಬ್ಬ ಮನುಷ್ಯನೂ ಸದಾಚಾರಿಯಾಗಿ ಸನ್ಮಾರ್ಗದಲ್ಲಿ ಶಾಂತಿಯಿಂದ, ನೆಮ್ಮದಿಯಿಂದ ಬಾಳಬೇಕೆಂಬ ಅಮೂಲ್ಯ ಸಂದೇಶವನ್ನು ನೀಡಿದರು. ಇವರ ಭಾವಾಭಿವ್ಯಕ್ತಿಯಲ್ಲಿ ಕಂಡುಬರುವ ಭಾಷೆಯ ಸೊಬಗು, ಛಂದೋವೈವಿಧ್ಯ ಈ ರಚನೆಗಳಿಗೆ ಸಾಹಿತ್ಯದ ಶೋಭೆಯನ್ನು ತಂದುಕೊಟ್ಟಿದೆ. ಈ ಎಲ್ಲಾ ವಿಶಿಷ್ಟ ಲಕ್ಷಣಗಳನ್ನು ಕುರಿತು ಇಲ್ಲಿ ಅಧ್ಯಯನ ಮಾಡಲಾಗಿದೆ.

ಒಂಬತ್ತನೇ ಅಧ್ಯಾಯದಲ್ಲಿ ಯತಿಗಳಾದ ಶ್ರೀಪಾದರಾಜರಿಂದ ಪ್ರಾರಂಭವಾದ ಹರಿದಾಸ ಸಾಹಿತ್ಯ ಇಪ್ಪತ್ತನೇ ಶತಮಾನದವರೆಗೆ ಅನೇಕ ಮಾಧ್ವಯತಿಗಳ ಸಂಘಟನೆ ಪ್ರೋತ್ಸಾಹದಿಂದ ಬೆಳೆದಿದೆ. ಇಂದಿಗೂ ಜೀವಂತವಾಗಿದ್ದು ಬೆಳೆಯುತ್ತಿರುವ ಪ್ರಮುಖ ಸಾಹಿತ್ಯ ಪ್ರಕಾರಗಳಲ್ಲಿ ಒಂದಾಗಿದೆ. ಈ ವಿಚಾರಗಳನ್ನು ಕುರಿತು ಚರ್ಚಿಸಿ ಸಮಾರೋಪ ಮಾಡಲಾಗಿದೆ.

ಒಟ್ಟಾರೆ ಹರಿದಾಸಸಾಹಿತ್ಯದ ಪ್ರಾರಂಭದಿಂದ ಇಂದಿನವರೆಗೆ, ಅದರ ವಿವಿಧ ಘಟ್ಟಗಳಲ್ಲಿ ಮಾಧ್ವ ಯತಿಗಳು ನೀಡಿದ ಪ್ರೇರಣೆ ಮತ್ತು ಮಾರ್ಗದರ್ಶನ ಉಲ್ಲೇಖನೀಯ. ಯತಿಧರ್ಮದ ಚೌಕಟ್ಟಿನಲ್ಲಿ ಧಾರ್ಮಿಕ ಮತ್ತು ತಾತ್ವಿಕ ಗ್ರಂಥಗಳ ಅಧ್ಯಯನ, ವ್ಯಾಖ್ಯಾನ, ಟೀಕೆ, ಟಿಪ್ಪಣೆ

ಮೊದಲಾದ ಸಂಸ್ಕೃತ ಶಾಸ್ತ್ರಾಧ್ಯಯನದಲ್ಲಿ ತೊಡಗಿಕೊಂಡಿದ್ದ ಯತಿವರೇಣ್ಯರು, ಈ ಎಲ್ಲಾ ಕಟ್ಟುಪಾಡುಗಳ ನಡುವೆ ಸ್ವತಃ ಕನ್ನಡದಲ್ಲಿ ಕೀರ್ತನೆಗಳನ್ನು ರಚಿಸುವ ಮೂಲಕ ಹಾಗೂ ಕೀರ್ತನೆಗಳನ್ನು ರಚಿಸುವ ಹರಿದಾಸರಿಗೆ ಪ್ರೇರಣೆ ಪ್ರೋತ್ಸಾಹಗಳನ್ನು ನೀಡುವುದರ ಮೂಲಕ ಹರಿದಾಸ ಸಾಹಿತ್ಯವನ್ನು ಮುನ್ನಡೆಸಿಕೊಂಡು ಬಂದರು. ಇಂತಹ ಯತಿಗಳ ಕನ್ನಡ ಸೇವೆಯನ್ನು ಮತ್ತು ಅದರ ವೈಶಿಷ್ಟ್ಯಗಳನ್ನು ಗುರುತಿಸಿ ಅಧ್ಯಯನ ಮಾಡಲಾಗಿದೆ. ಹರಿದಾಸ ಸಾಹಿತ್ಯವನ್ನು ಪ್ರಾರಂಭಿಸಿ ಇಂದಿನವರೆಗೆ ಜೀವಂತವಾಗಿ ಉಳಿಸಿ ಧಾರ್ಮಿಕ ಜಾಗೃತಿಯನ್ನು ಮೂಡಿಸಿ ತಮ್ಮ ಕನ್ನಡ ಪ್ರೇಮದ ಮೂಲಕ ದಾಸ ಸಾಹಿತ್ಯವನ್ನು ಬೆಳೆಸಲು ಪ್ರೇರಣೆ ನೀಡಿದ ಮಾಧ್ವಯತಿಗಳಿಗೆ ಐತಿಹಾಸಿಕವಾಗಿ ಮಹತ್ವದ ಸ್ಥಾನವಿದೆ ಎಂಬುದನ್ನು ಮರೆಯುವಂತಿಲ್ಲ. ಅದು ಸ್ಥಾಪಿತವಾದರೆ ಈ ಅಧ್ಯಯನದ ಉದ್ದೇಶ ಈಡೇರಿದಂತೆಯೇ.

## ಅಧ್ಯಾಯ ೧ ಅಡಿಟಿಪ್ಪಣೆಗಳು

೧. ಡಾ. ಅನಂತಪದ್ಮನಾಭರಾವ್, 'ಹತ್ತೊಂಬತ್ತನೇ ಶತಮಾನದ ಹರಿದಾಸ ಸಾಹಿತ್ಯ', ಪು – ೨೩

ಅಧ್ಯಾಯ - ೨

# ಹಿನ್ನಲೆ ಮತ್ತು ಪ್ರೇರಣೆ

ಹರಿದಾಸ ಸಾಹಿತ್ಯದ ಪ್ರಾರಂಭದ ಕಾಲವನ್ನು ಕುರಿತಂತೆ ಹಲವಾರು ಚರ್ಚೆಗಳು ನಡೆದಿವೆ. ಅಚಲಾನಂದ ವಿಠಲರು ಮೊದಲ ಹರಿದಾಸರೆಂದು ಒಂದು ಅಭಿಪ್ರಾಯವಾದರೆ, ಮಧ್ವಾಚಾರ್ಯರು ಮತ್ತು ನರಹರಿತೀರ್ಥರಿಂದ ದಾಸಕೂಟವು ಮೊದಲಾಯಿತೆಂದು, ಮತ್ತೊಂದು ವಾದವಿದೆ. ಬೇಲೂರು ಕೇಶವದಾಸರು, ಹುಲಗೂರು ಕೃಷ್ಣಾಚಾರ್ಯರು, ಡಾ॥ ಕೆ. ಎಮ್. ಕೃಷ್ಣರಾಯರು ಕಟಪರಾಳ ಕೃಷ್ಣರಾಯರು, ಗೋರಬಾಳ ಹನುಮಂತರಾಯರು ಮೊದಲಾದವರು ಹರಿದಾಸ ಸಾಹಿತ್ಯದ ಮೂಲವನ್ನು ಶೋಧಿಸಲು ಪ್ರಯತ್ನಿಸಿದ್ದಾರೆ. ಹರಿದಾಸ ಪರಂಪರೆಗೆ ಅಚಲಾನಂದರಾಗಲಿ, ನರಹರಿತೀರ್ಥರಾಗಲಿ ಆದ್ಯರು ಅಥವಾ ಮುಖ್ಯ ಪ್ರವರ್ತಕರಲ್ಲವೆಂದೂ, ಶ್ರೀ ಶ್ರೀಪಾದರಾಜರೇ ಐತಿಹಾಸಿಕವಾಗಿ ಮುಖ್ಯ ಪ್ರವರ್ತಕರೆಂದೂ ಡಾ॥ ಜಿ. ವರದರಾಜರಾವ್, ಡಾ॥ ಟಿ. ಎನ್. ನಾಗರತ್ನ, ಡಾ॥ ಶ್ರೀನಿವಾಸಹಾವನೂರು ಮೊದಲಾದ ವಿದ್ವಾಂಸರು ಸಮರ್ಥಿಸಿದ್ದಾರೆ.

ಶ್ರೀಪಾದರಾಜರೇ ಕನ್ನಡ ಕೀರ್ತನೆಯಲ್ಲಿ ಹರಿಯನ್ನು ಸ್ತುತಿಸಿದ ಆದ್ಯರು. ಸಂಸ್ಕೃತಬಾರದ ಸಾಮಾನ್ಯರಿಗೆ ತತ್ವಗಳ ಅರಿವು ಮೂಡಿಸಬೇಕಾದರೆ ಅದನ್ನು ಅವರ ಮಾತೃಭಾಷೆಯಲ್ಲೇ ಹೇಳುವ ಅಗತ್ಯವನ್ನು ಮನಗೊಂಡಿದ್ದರು. "ಧರ್ಮ, ಶಾಸ್ತ್ರ, ಸಾಹಿತ್ಯ ಇವು ಇರುವುದು ಕೇವಲ ಆತ್ಮೋದ್ಧಾರಕ್ಕಾಗಿ ಅಲ್ಲ ಲೋಕೊದ್ಧಾರವೂ ಇದರಿಂದ ಆಗಬೇಕು'. ಆದರೆ ಸಂಸ್ಕೃತ ಜ್ಞಾನವಿಲ್ಲದ ಪಾಮರರಿಗೆ ಇದನ್ನು ತಲುಪಿಸುವ ಬಗೆಯಾದರೂ ಹೇಗೆ? ಸಂಸ್ಕೃತ ಬಾರದ ಮುಮುಕ್ಷುಗಳಿಗೆ ಇದರಿಂದ ವಂಚನೆಯಾಗುವುದಿಲ್ಲವೆ ಎಂದು ಶ್ರೀಪಾದರಾಜರು ಆಳವಾಗಿ ಚಿಂತಿಸಿರಬೇಕು. ಈ ಕಾಲಕ್ಕಾಗಲೇ ವಚನಸಾಹಿತ್ಯ ತನ್ನ ಕನ್ನಡತನದ ಸೊಗಡಿನೊಂದಿಗೆ ಜನಸಾಮಾನ್ಯರನ್ನು ಆಕರ್ಷಿಸಿತ್ತು. ಸಂಸ್ಕೃತವನ್ನೇ ನಂಬಿ ನೆಚ್ಚಿ ಕುಳಿತರೆ ವೈಷ್ಣವ ಸಮಾಜ ಅಜ್ಞಾನದಲ್ಲಿಯೇ ಉಳಿದು ಬಿಡುವ ಸಾಧ್ಯತೆಯನ್ನು ಮನಗಂಡ ಶ್ರೀಪಾದರಾಯರು ದೇಸೀ ಭಾಷೆಗೆ ಮನ್ನಣೆ ನೀಡಿದರು. ಕನ್ನಡದಲ್ಲಿ ಕೀರ್ತನೆಗಳನ್ನು ರಚಿಸಲು ಆರಂಭಿಸಿದರು. ಉಗಾಭೋಗ, ಸುಳಾದಿ, ವೃತ್ತನಾಮಗಳನ್ನು ದಂಡಕಗಳನ್ನು ಕನ್ನಡದಲ್ಲಿ ಹಾಡಿದರು. ಕನ್ನಡ

ಹರಿದಾಸ ಸಾಹಿತ್ಯಕ್ಕೆ ಅಡಿಪಾಯ ಹಾಕಿದರು".೧

ಹೀಗೆ ಶ್ರೀಪಾದರಾಜರಿಂದ ಪ್ರಾರಂಭವಾದ ಹರಿದಾಸ ಸಾಹಿತ್ಯ ವ್ಯಾಸರಾಜ ಮತ್ತು ವಾದಿರಾಜರಿಂದ ಸಮೃದ್ಧಿಯಾಗಿ ಬೆಳೆದು, ಪುರಂದರ ಮತ್ತು ಕನಕದಾಸರಿಂದ ಔನ್ನತ್ಯ ಪಡೆಯಿತು. ವಿಜಯನಗರದ ಉಚ್ಛ್ರಾಯ ಕಾಲದಲ್ಲಿ ಉನ್ನವಾಗಿ ಬೆಳೆದ ಹರಿ ದಾಸಸಾಹಿತ್ಯ ಅದರ ಪತನದೊಂದಿಗೆ ಇಳಿಮುಖವಾದರೂ ಕಾಖಂಡಿಕಿಯ ಮಹಿಪತಿರಾಯರು ಮತ್ತು ಅವರ ಮಗ ಕೃಷ್ಣದೇವರಾಯರುಗಳಿಂದ ಜೀವಂತವಾಗಿತ್ತು. ಮತ್ತೆ ಕನ್ನಡ ಹರಿದಾಸ ಸಾಹಿತ್ಯ ವಿಜಯದಾಸರಿಂದ ಪುನರುಜ್ಜೀವನ ಪಡೆಯಿತು. ಮುಂದೆ ಅವರ ಶಿಷ್ಯ ಪ್ರಶಿಷ್ಯರುಗಳಿಂದ ನಿರಂತರವಾಗಿ ರಚಿತವಾದ ಕೀರ್ತನೆ, ಸುಳಾದಿ, ಉಗಾಭೋಗಗಳಿಂದ ಕನ್ನಡ ಹರಿದಾಸ ಸಾಹಿತ್ಯ ಸಮೃದ್ಧವಾಗಿ ಬೆಳೆಯಿತು. "ಗೋಪಾಲದಾಸರು, ಹೆಳವನಕಟ್ಟೆ ಗಿರಿಯಮ್ಮ, ಜಗನ್ನಾಥದಾಸರು, ಪ್ರಸನ್ನ ವೆಂಕಟದಾಸರು, ಹರಪನಹಳ್ಳಿ ಭೀಮವ್ವನೇ ಮೊದಲಾದ ನೂರಾರು ಹರಿದಾಸರು ರಚಿಸಿದ ಸಾವಿರಾರು ಕೃತಿಗಳಿಂದ ಸಂಪನ್ನವಾಯಿತು. ಮೋಹನವಿಠಲ, ಶ್ರೀದ ವಿಠಲ, ಶ್ರೀಶವಿಠಲ, ವರದೇಂದ್ರ ವಿಠಲ, ಏರಿವೆಂಕಟರು, ಇಂದಿರೇಶ ವಿಠಲರು, ಪ್ರಸನ್ನ ಶ್ರೀನಿವಾಸರೇ ಮೊದಲಾದ ಹರಿದಾಸರಿಂದ ಹರಿದಾಸ ಸಾಹಿತ್ಯ ಸ್ತೋತ್ರ ಇಂದಿಗೂ ಜೀವಂತವಾಗಿದ್ದು, ಇಪ್ಪತ್ತನೇ ಶತಮಾನದಲ್ಲಿ ನಿರಂತರವಾಗಿ ಕೃತಿ ರಚನೆ ನಡೆದು, ಈ ಇಪ್ಪತ್ತೊಂದನೇ ಶತಮಾನಕ್ಕೂ ಸಾಗಿಬಂದಿದೆ".೨

### ೨.೧ ಶ್ರೀಪಾದರಾಯರು (೧೪೦೪ – ೧೫೦೨) :

ಶ್ರೀಪಾದರಾಜರ ಜೀವನವನ್ನು ಸಮಗ್ರವಾಗಿ ಚಿತ್ರಿಸುವ ಯಾವ ಗ್ರಂಥವೂ ನಮಗೆ ಈವರೆಗೆ ಲಭ್ಯವಾಗಿಲ್ಲ. ಅವರ ಸಮಕಾಲೀನರೂ ಹಾಗೂ ನೇರ ಶಿಷ್ಯರೂ ಆದ ವ್ಯಾಸರಾಯರು ರಚಿಸಿರುವ ಕೀರ್ತನೆಗಳು ಮತ್ತು 'ಪಂಚರತ್ನ ಮಾಲಾಸ್ತುತಿ', ವಿಜಯದಾಸರೇ ಮೊದಲಾದ ಹರಿದಾಸರ ಕೀರ್ತನೆಗಳು, ಶ್ರೀಪಾದರಾಜ ಮಠದ ಯತಿಪರಂಪರೆಯಲ್ಲಿ ಬರುವ ಶ್ರೀನಿಧಿತೀರ್ಥರು ರಚಿಸಿರುವ 'ಶ್ರೀಪಾದರಾಜಾಷ್ಟಕಂ', ಭೀಮಾಚಾರ್ಯರು ರಚಿಸಿದ 'ಶ್ರೀಪೂರ್ಣಭೋಧ ಗುರುವಂಶ ಕಲ್ಪತರು' ಈ ಕೆಲವು ಮೂಲಗಳಿಂದ ಶ್ರೀಪಾದರಾಯರ ಜೀವನವನ್ನು ತಿಳಿಯುವ ಪ್ರಯತ್ನ ಮಾಡಬೇಕು. ಈ ಮೇಲಿನ ಕೃತಿಗಳಲ್ಲಿಯೂ ಅವರು

ಯತ್ಯಾಶ್ರಮ ಸ್ವೀಕಾರ ಮಾಡಿದ ನಂತರದ ಮಾಹಿತಿಗಳು ದೊರಕುತ್ತವೆ. ಅವರ ಬಾಲ್ಯದ ಬಗ್ಗೆಯಾಗಲೀ, ಅವರ ಸಂಪೂರ್ಣ ಜೀವನವನ್ನು ಕುರಿತಂತ ನಿಖರ ಮಾಹಿತಿಗಳು ಎಲ್ಲಿಯೂ ದೊರೆಯುವುದಿಲ್ಲ. ಹರಿದಾಸ ವಿದ್ವಾಂಸರು ಅಲ್ಲಿ-ಇಲ್ಲಿ ಕೇಳಿ ಬಂದ ವಿಚಾರಗಳನ್ನು ದಾಖಲಿಸಿದ್ದಾರೆ. ಒಟ್ಟಾರೆ ನಮಗೆ ಲಭ್ಯವಿರುವ ಮಾಹಿತಿಗಳಿಂದ ಹರಿದಾಸ ವಿದ್ವಾಂಸರ ನಂಬಿಕೆ, ಊಹೆ, ಅಭಿಪ್ರಾಯಗಳಿಂದ ಶ್ರೀಪಾದರಾಯರ ಜೀವನವನ್ನು ಹೀಗೆ ಸಂಗ್ರಹಿಸಬಹುದು.

ದ್ವೈತ ಮತ ಸ್ಥಾಪಕರಾದ ಶ್ರೀ ಮಧ್ವಾಚಾರ್ಯರಿಗೆ ನಾಲ್ಕು ಮಂದಿ ನೇರ ಶಿಷ್ಯರು. ಪದ್ಮನಾಭತೀರ್ಥರು, ನರಹರಿತೀರ್ಥರು, ಮಾಧವತೀರ್ಥರು ಮತ್ತು ಅಕ್ಷೋಭ್ಯತೀರ್ಥರು ಈ ನಾಲ್ವರಲ್ಲಿ ಪದ್ಮನಾಭತೀರ್ಥರ ಪರಂಪರೆಯಲ್ಲಿ ಏಳನೆಯ ಪೀಠಾದಿಪತಿಗಳು ಶ್ರೀ ಸ್ವರ್ಣವರ್ಣತೀರ್ಥರು, ಇವರು ತಮಿಳುನಾಡಿನ ಶ್ರೀರಂಗದಲ್ಲಿ ಮಾಧ್ವಮಠದ ಪೀಠಾಧಿಕಾರಿಯಾಗಿದ್ದರು. ಇವರೇ ಶ್ರೀಪಾದರಾಜರ ಗುರುಗಳು. ಒಮ್ಮೆ ಸ್ವರ್ಣವರ್ಣತೀರ್ಥರು ಶ್ರೀರಂಗದಿಂದ ಶ್ರೀರಂಗಪಟ್ಟಣಕ್ಕೆ ಕಾವೇರಿಯ ಸ್ನಾನಕ್ಕೆಂದು ಬಂದವರು, ಹಾಗೆಯೇ ಪುರುಷೋತ್ತಮ ತೀರ್ಥರ ಪ್ರಸಿದ್ಧಿಯನ್ನು ಕೇಳಿ ಅವರನ್ನು ಸಂದರ್ಶಿಸಲೆಂದು ಅಬ್ಬೂರಿಗೆ ಬಂದರಂತೆ, ದಾರಿಯಲ್ಲಿ ಬರುವಾಗ ಬಹಳ ಚುರುಕಾಗಿ ಓಡಾಡುತ್ತಿದ್ದ, ಲಕ್ಷ್ಮಿನಾರಾಯಣನೆಂಬ ಬಾಲಕನನ್ನು ನೋಡಿ ಅವನನ್ನು ತಮ್ಮ ಶಿಷ್ಯನನ್ನಾಗಿ ಮಾಡಿಕೊಳ್ಳಲು ಬಯಸುತ್ತಾರೆ. ಅಬ್ಬೂರಿಗೆ ಬಂದು ಪುರುಷೋತ್ತಮತೀರ್ಥರ ಬಳಿ ಓಡಾಡುತ್ತಿದ್ದ ತೇಜಸ್ವಿ ಬಾಲ ಯತಿಗಳಾದ ಬ್ರಹ್ಮಣ್ಯತೀರ್ಥರನ್ನು ಕಂಡು ಅಂತಹ ಚುರುಕಾದ ಬಾಲಕನೊಬ್ಬ ತಮ್ಮ ಸಂಸ್ಥಾನಕ್ಕೂ ಲಭ್ಯವಾದರೆ ಒಳ್ಳೆಯದೆಂದು ಹೇಳಿ, ಹಾಗೆಯೇ ತಾವು ದಾರಿಯಲ್ಲಿ ಕಂಡ ಆ ಬಾಲಕನ ಬಗ್ಗೆ ವಿವರಿಸುತ್ತಾರೆ. ಸ್ವರ್ಣವರ್ಣತೀರ್ಥರ ಮನಸ್ಸನ್ನು ಸೆಳೆದಿರುವ ಆ ಬಾಲಕ ತಮ್ಮ ಶಿಷ್ಯನಾದ ಬ್ರಹ್ಮಣ್ಯತೀರ್ಥರ ಪೂರ್ವಾಶ್ರಮದ ಚಿಕ್ಕಮ್ಮನ ಮಗ ಲಕ್ಷ್ಮಿನಾರಾಯಣನೇ ಇರಬೇಕೆಂದು ಗ್ರಹಿಸಿ, ಆ ಹುಡುಗನನ್ನು ಕೂಡಲೇ ಕರೆತರಬೇಕೆಂದು ಗಿರಿಯಮ್ಮ – ಶೇಷಗಿರಿ ಆಚಾರ್ಯ ದಂಪತಿಗಳಿಗೆ ಆಜ್ಞೆ ಮಾಡುತ್ತಾರೆ. ಮಗನೊಂದಿಗೆ ಮಠಕ್ಕೆ ಬಂದ ದಂಪತಿಗಳ ಮನಸ್ಸನ್ನು ಒಲಿಸುವಲ್ಲಿ ಯಶಸ್ವಿಯಾದ ಪುರುಷೋತ್ತಮತೀರ್ಥರು, ಬಾಲಕ ಲಕ್ಷ್ಮಿನಾರಾಯಣನನ್ನು ಸ್ವರ್ಣವರ್ಣತೀರ್ಥರಿಗೆ ಒಪ್ಪಿಸುತ್ತಾರೆ. ಇದರಿಂದ ಸಂತೋಷಗೊಂಡ ಸ್ವರ್ಣವರ್ಣತೀರ್ಥರು ಲಕ್ಷ್ಮಿನಾರಾಯಣ ಹಾಗೂ ಅವರ ತಂದೆ-ತಾಯಿಗಳಾದ ಗಿರಿಯಮ್ಮ-

ಶೇಷಗಿರಿ ಆಚಾರ್ಯ ದಂಪತಿಗಳೊಂದಿಗೆ ಶ್ರೀರಂಗಕ್ಕೆ ಬರುತ್ತಾರೆ. ಇಂದಿಗೂ ರಾಮನಗರ ಜಿಲ್ಲೆ ಚೆನ್ನಪಟ್ಟಣ ತಾಲ್ಲೂಕಿನಲ್ಲಿರುವ ಅಬ್ಬೂರಿನಲ್ಲಿ ಶ್ರೀ ಬ್ರಹ್ಮಣ್ಯತೀರ್ಥರ ಬೃಂದಾವನವಿದೆ. ಅಲ್ಲಿಯೇ ಸಮೀಪದ ಗುಡ್ಡದಲ್ಲಿ ಪುರುಷೋತ್ತಮ ತೀರ್ಥರ ಗುಹೆಯಿದೆ. "ಶ್ರೀಪಾದರಾಜರು ಮತ್ತು ಶ್ರೀಬ್ರಹ್ಮಣ್ಯತೀರ್ಥರ ಮಾತೆಯರು ಸಹೋದರಿಯರಾದ ಪ್ರಯುಕ್ತ ಶ್ರೀಪಾದರಾಜರು ತಮ್ಮ ಬಾಲ್ಯವನ್ನು ಈ ಅಬ್ಬೂರಿನಲ್ಲಿಯೇ ಕಳೆದರೆಂದು ಭಾವಿಸುವುದು ಸೂಕ್ತವಾಗಿದೆ.",

ಸ್ವರ್ಣವರ್ಣತೀರ್ಥರು ಬಾಲಕ ಲಕ್ಷ್ಮಿನಾರಾಯಣನೊಂದಿಗೆ ಶ್ರೀರಂಗಕ್ಕೆ ಬಂದ ಮೇಲೆ ಅಲ್ಲಿ ಅವನಿಗೆ ಬ್ರಹ್ಮೋಪದೇಶವಾಯಿತು. ಅನಂತರ ಅವನ ವಿದ್ಯಾಭ್ಯಾಸವೂ ನಡೆಯಿತು. ಕ್ಷಿಪ್ರದಲ್ಲಿಯೇ ಶ್ರೀಗಳು ಲಕ್ಷ್ಮಿನಾರಾಯಣನಿಗೆ ಸಂನ್ಯಾಸ ದೀಕ್ಷೆಯನ್ನು ಕೊಟ್ಟು ತಮ್ಮ ಉತ್ತರಾಧಿಕಾರಿಯಾಗಿ ಘೋಷಿಸಿದರು. ಅಂದಿನಿಂದ ಬಾಲಕ ಲಕ್ಷಿನಾರಾಯಣನು ಲಕ್ಷ್ಮಿನಾರಾಯಣ ತೀರ್ಥರಾದರು. ಅವರನ್ನು ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ರಾಯಮಠದ ಪರಂಪರೆಯ ವಿಭುದೇಂದ್ರತೀರ್ಥರಲ್ಲಿಗೆ ಕಳುಹಿಸಿಕೊಟ್ಟರು. ಲಕ್ಷ್ಮಿನಾರಾಯಣ ತೀರ್ಥರು ಶ್ರೀಗಳಿಂದ ಸಮಸ್ತ ದ್ವೈತ ಸಿದ್ಧಾಂತವನ್ನು ಕಲಿತು, ಬಹಳ ಬೇಗನೆ ಗುರುಹಿರಿಯರ ಗೌರವ, ಆದರ, ವಿಶ್ವಾಸಗಳಿಗೆ ಪಾತ್ರರಾದರು. ಒಮ್ಮೆ ವಿಭುದೇಂದ್ರತೀರ್ಥರು ತಮ್ಮ ಶಿಷ್ಯರೊಡನೆ ರಾಯಚೂರು ಜಿಲ್ಲೆಯಲ್ಲಿರುವ ಕೊಪ್ಪವೆಂಬ ನರಸಿಂಹಕ್ಷೇತ್ರದಲ್ಲಿರುವಾಗ ಉತ್ತರಾಧಿಮಠದ ಅಂದಿನ ಶ್ರೀಗಳಾದ ಶ್ರೀರಘುನಾಥತೀರ್ಥರೂ ಅಲ್ಲಿಗೆ ಬಂದಿದ್ದರು. ವಿಭುದೇಂದ್ರರು ತಮ್ಮ ಶಿಷ್ಯರಾದ ಲಕ್ಷ್ಮಿನಾರಾಯಣನನ್ನು ಪರಿಚಯಿಸಿ, ತಮ್ಮ ಶಿಷ್ಯರ ವಿದ್ಯಾಪರಿಶ್ರಮವನ್ನು ಅವಲೋಕಿಸಿ ಆಶೀರ್ವದಿಸಬೇಕೆಂದು ಕೋರಿದರು. ಮಾರನೆಯ ದಿನವೇ ಕೊಪ್ರದಲ್ಲಿ ಯತಿದ್ವಯರ ಸಮ್ಮುಖದಲ್ಲಿ ವಿದ್ವಾಂಸರ ಸಭೆಯೊಂದು ನಡೆಯಿತು. ಆ ಸಭೆಯಲ್ಲಿ ರಘುನಾಥತೀರ್ಥರು ಟೀಕಾಚಾರ್ಯರ 'ನ್ಯಾಯಸುಧೆ'ಯಲ್ಲಿನ ಒಂದು ವಾಕ್ಯವನ್ನು ಲಕ್ಷ್ಮಿನಾರಾಯಣ ತೀರ್ಥರ ಮುಂದಿರಿಸಿ ವ್ಯಾಖ್ಯಾನಿಸಲು ಹೇಳಿದರು. ಲಕ್ಷ್ಮಿನಾರಾಯಣತೀರ್ಥರು ವ್ಯಾಕ್ಯಾರ್ಥದ ನೆಪದಲ್ಲಿ ಸಮಗ್ರ ಗ್ರಂಥವನ್ನೇ ವಿನೂತನ ರೀತಿಯಲ್ಲಿ ವಿದ್ವತ್‌ಪೂರ್ಣವಾಗಿ ವ್ಯಾಖ್ಯಾನಮಾಡಿ ತಮ್ಮ ಪ್ರತಿಭೆಯನ್ನು ಪ್ರದರ್ಶಿಸಿದರು. ಬಾಲಯತಿಗಳ ವಿದ್ವತ್ತನ್ನು ಮತ್ತು ಸೌಜನ್ಯವನ್ನು ಕಂಡು ಸಂತೋಷಗೊಂಡ ರಘುನಾಥತೀರ್ಥರು ಮೆಚ್ಚುಗೆ ಸೂಸಿ, ನಾವು ಶ್ರೀಪಾದರಾದರೆ, ನೀವು 'ಶ್ರೀ ಪಾದರಾಜರೇ ಸರಿ' ಎಂದು ಹೊಗಳಿದರು. ಈ

ಘಟನೆಯಲ್ಲಿ ಭೀಮಾಚಾರ್ಯ ವಿರಚಿತ 'ಶ್ರೀ ಪೂರ್ಣಬೋಧ ಗುರುವಂಶ ಕಲ್ಪತರು' ಎಂಬ ಗ್ರಂಥದಲ್ಲಿ ನಿರೂಪಿಸಲಾಗಿದೆ. ರಘುನಾಥತೀರ್ಥರು 'ಶ್ರೀಪಾದಾ ಏವಭೋ ವಯಮ್ ಯೂಯಂ ಶ್ರೀಪಾದರಾಜಾಸ್ತು ಪಾಂಡಿತ್ಯಾತಿಶಯಾನ್ವಿತಾಃ' ಎಂಬುದಾಗಿ ಹೇಳಿದರೆಂದು ಉಲ್ಲೇಖಿಸಲಾಗಿದೆ. ಅಂದಿನಿಂದ ಲಕ್ಷ್ಮಿನಾರಾಯಣ ತೀರ್ಥರು ಶ್ರೀಪಾದರಾಜರೆಂದೇ ಖ್ಯಾತಿ ಪಡೆದರು. ಅವರ ಸಂಸ್ಥಾನವೂ ಸಹ ಶ್ರೀಪಾದರಾಜಮಠವೆಂದೇ ಪ್ರಸಿದ್ಧಿ ಪಡೆಯಿತು.

ಹೀಗೆ ಕೆಲವು ಕಾಲ ಸಂಚಾರಕ್ಕೆಂದು ತಮ್ಮ ಗುರುಗಳಾದ ವಿಭುದೇಂದ್ರ ತೀರ್ಥರೊಂದಿಗೆ ತೆರಳಿದ್ದ ಶ್ರೀ ಪಾದರಾಜರು ದ್ವೈತ ವೇದಾಂತ ಸಮಸ್ತವನ್ನು ಕರತಲಾಮಲಕ ಮಾಡಿಕೊಂಡು, ಸ್ವರ್ಣವರ್ಣತೀರ್ಥರಲ್ಲಿಗೆ ಬಂದರು. ಕಾಲಾನಂತರದಲ್ಲಿ ಸ್ವರ್ಣವರ್ಣತೀರ್ಥರು ಬೃಂದಾವನಸ್ಥರಾಗಲು, ತರುವಾಯ ಶ್ರೀಪಾದರಾಜರು ಸಂಸ್ಥಾನದ ಅಧಿಕಾರವನ್ನು ವಹಿಸಿಕೊಂಡರು. ಸ್ವಲ್ಪಕಾಲ ಶ್ರೀರಂಗದಲ್ಲಿಯೇ ಇದ್ದರು. ಶ್ರೀರಂಗದ ರಂಗನಾಥಸ್ವಾಮಿ ಅವರ ಆರಾಧ್ಯದೈವ, ಸರ್ವ ಸಮರ್ಪಣ ಭಾವದಿಂದ ರಚಿಸಿರುವ 'ಕಂಗಳಿದ್ಯಾತಕೋ ಕಾವೇರಿ ರಂಗನ ನೋಡದ' ಎಂಬ ಕೀರ್ತನೆ ರಂಗನಾಥನನ್ನು ಕುರಿತದ್ದೇ ಆಗಿದೆ. 'ರಂಗವಿಠಲ' ಎಂಬ ಅಂಕಿತದಿಂದಲೇ ಕೀರ್ತನೆಗಳನ್ನು ರಚಿಸಿದರು. ಶ್ರೀರಂಗದಿಂದ ಸಂಚಾರ ಹೊರಟ ಶ್ರೀಪಾದರಾಜರು ಕೋಲಾರ ಜಿಲ್ಲೆಯ ಮುಳಬಾಗಿಲಿಗೆ ಬಂದರು. ಅಲ್ಲಿಯೇ ನರಸಿಂಹತೀರ್ಥದ ಸನ್ನಿಧಿಯಲ್ಲಿ ಮಠವನ್ನು ಸ್ಥಾಪಿಸಿದರು. ಆ ಸಮಯಕ್ಕೆ ಮುಳಬಾಗಿಲು ವಿಜಯನಗರದ ಅರಸರ ಅಧಿಪತ್ಯಕ್ಕೆ ಒಳಪಟ್ಟು ಮಹತ್ವವನ್ನು ಪಡೆದಿತ್ತು. ಶ್ರೀ ಮಧ್ವಾಚಾರ್ಯರ ಶಿಷ್ಯರಲ್ಲಿ ಒಬ್ಬರಾದ ಅಕ್ಷೋಭ್ಯತೀರ್ಥರು ಅಂಗಾರದಿಂದ ಯೋಗಾನರಸಿಂಹನನ್ನು ಬರೆದ ಪವಿತ್ರಕ್ಷೇತ್ರವೆಂದು ಪರಿಗಣಿತವಾಗಿತ್ತು. ಇಂತಹ ಪುಣ್ಯಕ್ಷೇತ್ರದಲ್ಲಿ ಶ್ರೀಪಾದರಾಜರು ನೆಲೆಸಿದ ಮೇಲೆ ಅದು ದ್ವೈತ ದರ್ಶನವನ್ನು ಕಲಿಸುವ ಪ್ರಮುಖ ವಿದ್ಯಾಕೇಂದ್ರವಾಯಿತು. ದೇಶದ ನಾನಾ ಮೂಲೆಗಳಿಂದ ವಿದ್ಯಾರ್ಥಿಗಳು ಇಲ್ಲಿಗೆ ಬಂದು ಶ್ರೀಪಾದರಾಜರ ನೇತೃತ್ವದಲ್ಲಿ ಕುಳಿತು ವೇದಾಂತ ವಿದ್ಯೆಯನ್ನು ಕಲಿಯುತ್ತಿದ್ದರು.

ಬಾಲ್ಯದಲ್ಲಿಯೇ ಬ್ರಹ್ಮಣ್ಯತೀರ್ಥರಿಂದ ಸಂನ್ಯಾಸ ಪಡೆದು ಅವರ ಉತ್ತರಾಧಿಕರಿಗಳಾಗಿದ್ದ ಶ್ರೀವ್ಯಾಸತೀರ್ಥರು ಮುಳಬಾಗಿಲು ಮಠದ ಪ್ರಸಿದ್ಧಿಯನ್ನು ತಿಳಿದು ಉನ್ನತ ವ್ಯಾಸಂಗಕ್ಕಾಗಿ ಶ್ರೀಪಾದರಾಜರಲ್ಲಿಗೆ ಬಂದರು. ಕೆಲಕಾಲ ಶ್ರೀಪಾದರಾಜರ ಶಿಷ್ಯರಾಗಿ ವ್ಯಾಸಂಗ ಮಾಡಿದರು.

ಶ್ರೀಪಾದರಾಜರ ಮತ್ತು ವ್ಯಾಸರಾಜರ ಗುರು ಶಿಷ್ಯ ಸಂಬಂಧ ಪರಸ್ಪರ ಪ್ರೀತಿ ವಿಶ್ವಾಸದಿಂದ ಕೂಡಿದ್ದು, ಅನುಕರಣೀಯವಾದದ್ದು ಮತ್ತು ಮಾದರಿಯಾದದ್ದು. "ವ್ಯಾಸರಾಯರು ತಮ್ಮ ಗುರುಗಳಾದ ಶ್ರೀಪಾದರಾಜರನ್ನು ಕುರಿತು ರಚಿಸಿರುವ ಕನ್ನಡದ ಎರಡು ಪ್ರತ್ಯೇಕ ಕೀರ್ತನೆಗಳು ಮತ್ತು ಸಂಸ್ಕೃತದ ಪಂಚರತ್ನಮಾಲಿಕೆ-ಎಂಬ ಸ್ತುತಿಯೂ ಅವರ ಜೀವನ ವಿಚಾರಗಳನ್ನು ತಿಳಿಸುವ ಸಮಕಾಲೀನ ಹಾಗೂ ಮಹತ್ವದ ದಾಖಲೆಗಳಾಗಿವೆ".[೪]

**ವಾದಿಗಜ ಮಸ್ತಕಾಂಕುಶ ಸುಜನ ಬುಧಗೇಯ**
**ಮೇಧಿನೀಸುರ ವಂದ್ಯ ಶ್ರೀಪಾದರಾಯ ಪ**

**ಸಕಲಶಾಸ್ತ್ರ ಕಲಾಪ ಸಂನ್ಯಾಸ ಕುಲದೀಪ**
**ಸಕಲ ಸತ್ಯಸ್ಥಾಪ ಸುಜ್ಞಾನದೀಪ**
**ಪ್ರಕಟ ಪಾವನರೂಪ ಅರಿಕುಜನ ಮತಲೋಪ**
**ನಿಕಟ ವರ್ಜಿತ ಪಾಪ ಕೀರ್ತಿ ಪ್ರತಾಪ ೧**

**ಹರಿಪಾದಾಂಬುಜ ಭೃಂಗ ಪರಮತಾಹಿ ವಿಹಂಗ**
**ಪರಮ ಸುಗುಣಾಂತರಂಗ ಭವದುರಿತ ಭಂಗ**
**ಶರಣ ಕೀರ್ತಿತರಂಗ ಶತ್ರುತಿಮಿರಪತಂಗ**
**ಶರಣು ಶುಭಚರಿತಾಂಗ ಷಟ್ಶಾಸ್ತ್ರಸಂಗ ೨**

**ಸಿರಿಕೃಷ್ಣ ದಿವ್ಯ ಪಾದಾಬ್ಜ ಚಿಂತಾಲೋಲ**
**ವರ ಹೇಮವರ್ಣಮುನಿಪತಿಯ ಸುಕುಮಾರ**
**ಗುರುತಿಲಕ ಶ್ರೀಪಾದರಾಯ ಅಮಿತೋದ್ಧಾರ**
**ಶರಣಜನ ಸುರಧೇನು ಭಕ್ತಮಂದಾರ[೫] ೩**

'ಶ್ರೀಪಾದರಾಜರಿಗೆ ಭಗವಂತನಲ್ಲಿರುವ ಅನನ್ಯ ಭಕ್ತಿ, ದ್ವೈತಮತದ ನಿಷ್ಠೆ, ಪಾಂಡಿತ್ಯ, ಕ್ಷಮಾಗುಣ, ಔದಾರ್ಯ, ಸಜ್ಜನಿಕೆ ಇವೆಲ್ಲವೂ ಈ ಕೀರ್ತನೆಯಲ್ಲಿ ಹರಳೀಕರಣಗೊಂಡಿದೆ. ಅಷ್ಟೇ ಅಲ್ಲದೆ, "ಶ್ರೀಪಾದರಾಜರು 'ಭಕ್ತಮಂದಾರ'ರೂ 'ಹರಿಪದಾಂಬುಜ ಭೃಂಗ'ರೂ, 'ಸಿರಿಕೃಷ್ಣ ದಿವ್ಯಪಾದಾಬ್ಜ ಚಿಂತಾಲೋಲ'ರೂ ಆಗಿದ್ದಾರೆಂಬ ಹೇಳಿಕೆಯಲ್ಲಿ ಅವರು ಪ್ರಾರಂಭಿಸಿದ್ದ ಕೀರ್ತನ ಕೈಂಕರ್ಯದ ಮಹತ್ವವೂ ಅಡಕವಾಗಿದ್ದಂತಿದೆ. 'ಶರಣಕೀರ್ತಿ ತರಂಗ' ಮತ್ತು 'ಶರಣಜನ ಸುರಧೇನು' ಎಂಬ ವಿಶೇಷಣಗಳನ್ನು ಶ್ರೀ ವ್ಯಾಸರಾಯರು ಪಾರಿಭಾಷಿಕಾರ್ಥದಲ್ಲಿ ಪ್ರಯೋಗಿಸಿರಬಹುದೆಂಬುದು ಭಾವಿಸಿದರೆ, ಆಗತಾನೆ ಮೊದಲಾಗಿದ್ದ 'ಹರಿಶರಣರ' ಇಲ್ಲವೇ 'ಹರಿದಾಸರ' ತಂಡಕ್ಕೆ ಪ್ರಮುಖರೂ ಇಷ್ಟದಾತರೂ ಆಗಿದ್ದರೆಂದು ಊಹಿಸಲವಕಾಶವಿದೆ".[೬] ಈ

ವಿವರಗಳ ಜೊತೆಗೆ ಶ್ರೀಪಾದರಾಜರ ಗುರುಗಳಾದ ಹೇಮವರ್ಣರ (ಸ್ವರ್ಣತೀರ್ಥರ) ಹೆಸರನ್ನು ಪ್ರಸ್ತಾಪಿಸಿರುವುದು ತುಂಬಾ ಗಮನಾರ್ಹವಾದ ಅಂಶ. ಶ್ರೀಪಾದರಾಜರು ಎಲ್ಲಿಯೂ ತಮ್ಮ ದೀಕ್ಷಾಗುರುಗಳಾದ ಸ್ವರ್ಣವರ್ಣತೀರ್ಥರ ಬಗ್ಗೆಯಾಗಲಿ, ವಿದ್ಯಾಗುರುಗಳಾದ ವಿಭುದೇಂದ್ರ ತೀರ್ಥರ ಬಗ್ಗೆಯಾಗಲಿ ಸ್ತುತಿಸಿರುವ ರಚನೆಗಳು ಇಲ್ಲಿಯವರೆಗೆ ಕಂಡುಬಂದಿಲ್ಲ. ಹಾಗಾಗಿ 'ಹೇಮವರ್ಣ ಮುನಿಪತಿಯ ಸುಕುಮಾರ' ಎಂಬ ವ್ಯಾಸರಾಯರ ಈ ಹೇಳಿಕೆ ಮುಖ್ಯವಾದದ್ದು. ಮತ್ತೊಂದು ಕೀರ್ತನೆಯಲ್ಲಿ ಶ್ರೀವ್ಯಾಸರಾಯರು ಶ್ರೀಪಾದರಾಜರನ್ನು ಕುರಿತು ಈ ರೀತಿ ಸ್ತುತಿಸಿದ್ದಾರೆ.

**ಮಹಿಮೆ ಸಾಲದೆ ಇಷ್ಟೇ ಮಹಿಮೆ ಸಾಲದೆ ಪ**

**ಅಹಿಶಶಯನನ ಒಲುಮೆಯಿಂದ**
**ಮಹಿಯೊಳೆಮ್ಮ ಶ್ರೀಪಾದರಾಯರ ಅ.ಪ.**

**ಮುತ್ತಿನಕವಚ ಮೇಲ್ಕುಲಾವಿ**
**ರತ್ನ ಕೆತ್ತಿದ ಕರ್ಣಕುಂಡಲ**
**ಕಸ್ತೂರಿ ತಿಲಕ ಶ್ರೀಗಂಧ ಲೇಪನ**
**ವಿಸ್ತಾರದಿಂದ ಮೆರೆದು ಬರುವ**

**ವಿಪ್ರಹತ್ಯಾ ದೋಷ ಬರಲು**
**ಕ್ಷಿಪ್ರ ಶಂಖೋದಕದಿ ಕಳೆಯೆ**
**ಅಪ್ರಬುದ್ಧರು ದೂಷಿಸೆ ಗೇರೆಣ್ಣೆ**
**ಕಪ್ಪು ವಸನ ಶುಭ್ರಮಾಡಿದ**

**ಹರಿಗೆ ಸಮರ್ಪಿಸಿದ ನಾನಾ**
**ಪರಿಯ ಶಾಕಗಳನು ಭುಂಜಿಸೆ**
**ನರರು ನಗಲು ಶ್ರೀಶ ಕೃಷ್ಣನ**
**ಕರುಣದಿಂದಲಿ ಹಸಿಯ ತೋರಿದ್ಮ**

ಶ್ರೀಪಾದರಾಜರ ಮೇರು ವ್ಯಕ್ತಿತ್ವವನ್ನು ಸಾರುವ ಕೀರ್ತನೆಯಿದು. ಅವರು ಎಂತಹ ಪುರುಷರಾಗಿದ್ದರೆಂಬುದನ್ನು ಈ ಕೀರ್ತನೆ ಸಾರುತ್ತದೆ. ಶ್ರೀಪಾದರಾಜರ ಮಹಿಮೆಯನ್ನು ತಿಳಿಯದೆ ಅವರನ್ನು ಹಂಗಿಸುವ ಜನರಿಗೆ ವ್ಯಾಸರಾಯರು ಈ ರೀತಿ ಉತ್ತರಕೊಟ್ಟಿರಬಹುದು. ಶ್ರೀಪಾದರಾಜರು ವ್ಯಕ್ತಿಯೋರ್ವನಿಗೆ ಒದಗಿದ ಬ್ರಹ್ಮಹತ್ಯಾದೋಷವನ್ನು ತಮ್ಮ

ಶಂಖೋದಕದಿಂದ ಹೋಗಲಾಡಿಸಿದ್ದರಂತೆ. ಅದನ್ನು ಕಂಡು ಕುಹಕಿಗಳು ವ್ಯಂಗ್ಯವಾಡಿದಾಗ ಶ್ರೀಪಾದರಾಜರು ಅವರ ಸಮ್ಮುಖದಲ್ಲೇ ಬಿಳಿ ಬಟ್ಟೆಯೊಂದನ್ನು ಗೇರೆಣ್ಣೆಯಲ್ಲಿ ಅದ್ದಿ, ನಂತರ ಅದರ ಕಪ್ಪನ್ನು ಹೋಗಲಾಡಿಸಿದರಂತೆ. ಈ ವಿಷಯವು ಎಲ್ಲೆಡೆ ಹಬ್ಬಿ ವಿಜಯನಗರದ ರಾಜಪ್ರತಿನಿಧಿಯಾಗಿದ್ದ ಸಾಳುವ ನರಸಿಂಹನ ಕಿವಿಗೂ ಬಿದ್ದಿತು.

ಅದೇ ವೇಳೆಗೆ ತಿರುಪತಿ ದೇವಸ್ಥಾನದ ಅರ್ಚಕ ಸಾಳುವ ನರಸಿಂಹನನ್ನು ನಿರ್ಲಕ್ಷಿಸಿ ದೇವಸ್ಥಾನದ ಪಾವಿತ್ರ್ಯಕ್ಕೆ ಭಂಗ ಬರುವಂತೆ ವರ್ತಿಸಿ ಅನೇಕ ದುಷ್ಟಕಾರ್ಯಗಳನ್ನು ಮಾಡಿದನು. ಇದರಿಂದ ಕುಪಿತಗೊಂಡ ಸಾಳುವ ನರಸಿಂಹನು ಆ ಅರ್ಚಕನನ್ನು ಹತ್ಯೆ ಮಾಡಿದ, ಅನಂತರ ಅವನೂ ಸಹ ತನ್ನ ಬ್ರಹ್ಮಹತ್ಯಾದೋಷವನ್ನು ಪರಿಹರಿಸಿಕೊಳ್ಳಲು ಶ್ರೀಪಾದರಾಜರ ಬಳಿ ಬಂದ. ಆಗ ಶ್ರೀಪಾದರಾಜರು ಅವನ ಭಯವನ್ನು ಹೋಗಲಾಡಿಸಿದರೆಂದು ಕಾಣುತ್ತದೆ. ಬಳಿಕ ಆ ರಾಜಪ್ರತಿನಿಧಿ ಶ್ರೀಪಾದರಾಜರ ಕೃಪೆಗೆ ಪ್ರತಿಯಾಗಿ ಶ್ರೀಪಾದರಾಜರನ್ನು ತನ್ನ ರಾಜಗುರುಗಳೆಂದು ಘೋಷಿಸಿ, ಅವರನ್ನು ಸಿಂಹಾಸನದಲ್ಲಿ ಕೂಡಿಸಿ, ರಾಜಮರ್ಯಾದೆಯಿತ್ತು ಗೌರವಿಸಿದನು. ಹಾಗೂ ಕೊನೆಯವರೆಗೂ ತನ್ನೊಂದಿಗೆ ಇರುವಂತೆ ಶ್ರೀಪಾದರಾಜರಲ್ಲಿ ಪ್ರಾರ್ಥಿಸಿಕೊಂಡನು. ಆದರೆ ಮುಳುಬಾಗಿಲಿನ ವಿದ್ಯಾಕೇಂದ್ರದ ಕರ್ತವ್ಯವು ಅವರನ್ನು ಕೈಬೀಸಿ ಕರೆಯುತ್ತಿದ್ದರಿಂದ ತಮ್ಮ ಶಿಷ್ಯ ವ್ಯಾಸರಾಯರಿಗೆ ಅದನ್ನು ಒಪ್ಪಿಸಿ, ಶ್ರೀಪಾದರಾಜರು ಮತ್ತೆ ಮುಳುಬಾಗಿಲಿಗೆ ಹಿಂದಿರುಗಿದರು. ಶ್ರೀವ್ಯಾಸರಾಯರು ತಮ್ಮ ಗುರುಗಳ ಜೀವನದಲ್ಲಿ ನಡೆದ ಈ ಘಟನೆಗಳನ್ನು ಮೇಲಿನ ಎರಡು ಕೀರ್ತನೆಯಲ್ಲಿ ವರ್ಣಿಸಿದ್ದಾರೆ.

ಶ್ರೀಪಾದರಾಜರ ಅನೇಕ ಮಹಿಮೆಗಳನ್ನು ಪ್ರತ್ಯಕ್ಷವಾಗಿ ಕಂಡಿದ್ದ ಶ್ರೀವ್ಯಾಸರಾಯರು ಹೇಳಿರುವ ಸಂಗತಿಗಳಿಗೆ ಬೆಲೆಯಿದೆ. ಈ ಗುರು–ಶಿಷ್ಯರ ಸಂಬಂಧ ಆದರ್ಶಪ್ರಾಯವಾದುದು. ವ್ಯಾಸರಾಯರು ತಮ್ಮ ಗುರುಗಳ ಮಹಿಮೆ ಪಾಂಡಿತ್ಯ–ಪ್ರೌಢಿಮೆಗಳನ್ನು ಮನಸಾರೆ ಮೆಚ್ಚಿ ಹೊಗಳಿದ್ದರೆ, ಶ್ರೀಪಾದರಾಜರು ತಮ್ಮ ಶಿಷ್ಯರಾದ ವ್ಯಾಸರಾಯರನ್ನು ಕುರಿತು ಹೀಗೆ ಹಾಡಿದ್ದಾರೆ.

**ಇದಿರಾದವನು ನಿನಗೀ ಧರೆಯೊಳು**
**ಪದುಮನಾಭನ ದಾಸ ಪರಮೋಲ್ಲಾಸ ಪ**

**ವಾದಿತಿಮಿರ ಮಾರ್ತಾಂಡನೆಂದೆನಿಸಿದೆ**

ವಾದಿಶರಭ ಭೇರುಂಡ ವ್ಯಾಸರಾಯಾ

ಯತಿಗಳೊಳಗೆ ನಿಮ್ಮಿಂದದವರುಗಳ
ಪ್ರತಿಗಾಣೆನು ಈ ಕ್ಷಿತಿಯೊಳು ಯತಿರಾಯಾ

ಹಮ್ಮನಳಿದು ಶ್ರೀಪತಿ ರಂಗವಿಠಲನ್ನ
ಸುಮ್ಮಾನದಿಂ ಸೇವಿಪ ವ್ಯಾಸಮುನಿರಾಯ್ಯಾ

ಎಂದು ಶಿಷ್ಯರ ಪಾಂಡಿತ್ಯ ಪ್ರತಿಭೆಗಳನ್ನು ಹಿಗ್ಗಿನಿಂದ ಹೊಗಳಿದ್ದಾರೆ. ಹಾಗೆಯೇ ಅವರ ಸಂನ್ಯಾಸದ ಹಿರಿಮೆಯನ್ನು ಮತ್ತು ಅವರ ಸಮಾಜ ಸೇವೆಯನ್ನು ಮತ್ತೊಂದು ಕೀರ್ತನೆಯಲ್ಲಿ ಈ ರೀತಿ ವರ್ಣಿಸಿದ್ದಾರೆ.

ಸಾಸಿರ ಜಹ್ವೆಗಳುಳ್ಳ ಶೇಷನೇ ಕೊಂಡಾಡಬೇಕು
ವ್ಯಾಸಮುನಿರಾಯರ ಸಂನ್ಯಾಸದಿರವ ಪ

...........................................................................

ಕೆರೆ ಬಾವಿ ಪುರ ಅಗ್ರಹಾರಂಗಳ ಮಾಡಿ ಭೂ
ಸುರರೊಂದು ಲಕ್ಷ ಕುಟುಂಬಗಳ
ಪೊರೆವ ವೈಭವ ಕೀರ್ತಿಯಿಂದಲಿ ವ್ಯಾಸರಾ
ಯರ ಗುಣಗುಣ ಗಾಂಭೀರ್ಯಾದಿಗಳ

ಹಗಲಿರಳೆನ್ನದೆ ಆವಾಗ ಶ್ರೀಹರಿ ಪದಪದ್ಮ
ಯುಗಳವನರ್ಚಿಸಿ ಭಕುತಿಯಿಂದ
ರಘುಪತಿ ಭಜಕ ಬ್ರಹ್ಮಣ್ಯತೀರ್ಥರ ಕುವರ
ರಂಗವಿಠಲನನ್ನು ಬಿಡೆಬಿಡೆನು ಎಂಬ

ಮಠದ ಯತಿಗಳಾಗಿ ಕೇವಲ ಪೂಜೆ ಪುನಸ್ಕಾರಗಳಿಗೆ ಮಾತ್ರ ತಮ್ಮನ್ನು ಸೀಮಿತವಾಗಿಸಿಕೊಳ್ಳದೆ, ಸಮಾಜದ ಸೇವೆಯನ್ನೂ ಮಾಡುತ್ತಿದ್ದರು. ಸಾರ್ವಜನಿಕರಿಗಾಗಿ ಕೆರೆ, ಬಾವಿ, ಪುರ ಅಗ್ರಹಾರಗಳನ್ನು ಕಟ್ಟಿಸಿ, ಲಕ್ಷಾಂತರ ಕುಟುಂಬಗಳಿಗೆ ಆಶ್ರಯವಾಗಿ ನಿಂತಿದ್ದಾರೆ. ಹಾಗೆಯೇ ಅವರ ಭಕ್ತಿ, ಆಧ್ಯಾತ್ಮಿಕ ಸಾಧನೆಯನ್ನು ವರ್ಣಿಸಿದ್ದಾರೆ. ಲೌಕಿಕಕ್ಕೆ ಅಂಟಿಯೂ ಅಂಟದಂತೆ ಇರುವ ಅವರ ಸಂನ್ಯಾಸದ ಬಗೆಯನ್ನು ನರನಾಲಿಗೆಗಳಿಗೆ ವರ್ಣಿಸಲು ಸಾಧ್ಯವಿಲ್ಲ. ಸಾವಿರ ನಾಲಿಗೆಗಳುಳ್ಳ ಆದಿಶೇಷನೇ ಕೊಂಡಾಡಬೇಕು ಎಂದಿದ್ದಾರೆ. ಶಿಷ್ಯನನ್ನು ಕುರಿತ

ಶ್ರೀಪಾದರಾಜರ ಈ ಹೇಳಿಕೆಗಳು, ವ್ಯಾಸರಾಯರ ಬಗ್ಗೆ ಅವರಿಗೆ ಇರುವ ಪ್ರೀತಿ, ವಿಶ್ವಾಸ, ಮೆಚ್ಚುಗೆ ಹಾಗೂ ಅವರ ಹೃದಯವಂತಿಕೆಯನ್ನು ತೋರಿಸುತ್ತದೆ.

ಒಮ್ಮೆ ಶ್ರೀಪಾದರಾಜರು ಅನಿವಾರ್ಯ ಕಾರಣದಿಂದಾಗಿ ತಮ್ಮ ಸಂಸ್ಥಾನದ ಪೂಜಾ ಕಾರ್ಯವನ್ನು ಶಿಷ್ಯ ವ್ಯಾಸರಾಯರಿಗೆ ವಹಿಸಿದರಂತೆ. ಅಂದು ಪೂಜೆಗೆ ಕುಳಿತ ವ್ಯಾಸರಾಯರು ಶ್ರೀಪಾದರಾಜರಿಗೆ ಅದುವರೆಗೂ ತೆಗೆಯಲು ಸಾಧ್ಯವಾಗದಿದ್ದ ವಿಗ್ರಹಗಳ ಸಂಪುಟವೊಂದನ್ನು ಸಲೀಸಾಗಿ ತೆಗೆದರಂತೆ. ಅದರೊಳಗಿದ್ದ ಗೋಪಾಲಕೃಷ್ಣನ ವಿಗ್ರಹವನ್ನು ನೋಡಿ ಹರ್ಷಿತರಾದರಂತೆ. ಆ ಭಕ್ತಿಭಾವದ ಆನಂದಾತಿಶಯದಲ್ಲಿ ವ್ಯಾಸರಾಯರು ಸಾಲಿಗ್ರಾಮಗಳನ್ನೇ ತಾಳಗಳನ್ನಾಗಿ ಮಾಡಿಕೊಂಡು ಹಾಡುತ್ತಾ ಕುಣಿಯಲಾರಂಭಿಸಿದರಂತೆ! ಅಂದು ವ್ಯಾಸರಾಯರಿಗೆ ಸಿರಿಕೃಷ್ಣನು ಪ್ರತ್ಯಕ್ಷನಾಗಿದ್ದನೆಂದು ಈ ಘಟನೆಯು ಪಂಡರಾಪುರದ ಭೀಮಾನದಿ ತೀರದಲ್ಲಿ ನಡೆಯಿತೆಂದು 'ಶ್ರೀಪಾದಚರಿತಾಮೃತ'ದಲ್ಲಿ ಹೇಳಲಾಗಿದೆ.

ಹೀಗೆ ಬಾಲ್ಯದಲ್ಲೇ ಸ್ವರ್ಣವರ್ಣತೀರ್ಥರಿಂದ ಸಂನ್ಯಾಸ ಸ್ವೀಕರಿಸಿ, ಬಳಿಕ ಮುಳುಬಾಗಿಲಿನಲ್ಲಿ ನೆಲೆಯಾಗಿ ನಿಂತ ಶ್ರೀಪಾದರಾಜರು ಸಂಸ್ಕೃತ ವಿದ್ವಾಂಸರಾದರೂ, ಇವರ ಕನ್ನಡ ಪ್ರೇಮಾ ಪ್ರಶ್ನಾತೀತವಾದದ್ದು. ತಮಿಳುನಾಡಿನಲ್ಲಿ ತಮಿಳು ಆಳ್ವಾರುಗಳು ತಮಿಳು ಭಾಷೆಯಲ್ಲಿ ಪ್ರಬಂಧವನ್ನು ರಚಿಸಿ ಭಕ್ತಿಸಂವರ್ಧನೆ ಮಾಡಿದ ರೀತಿ, ಶರಣರು ಕನ್ನಡದ ವಚನಗಳ ಮೂಲಕ ಉಂಟುಮಾಡಿದ ಜಾಗೃತಿ ಇವುಗಳನ್ನು ಪ್ರತ್ಯಕ್ಷವಾಗಿ ಕಂಡಿದ್ದ ಶ್ರೀಪಾದರಾಜರು ತಮ್ಮ ರಚನೆಗಳಲ್ಲಿ ದೇಸಿ ಭಾಷೆಗೆ ಮನ್ನಣೆ ನೀಡಿದರು. ಪೂಜಾ ಕಾಲದಲ್ಲಿ ತಮ್ಮ ಇಷ್ಟದೈವ ರಂಗವಿಠಲನ ಅಂಕಿತದಲ್ಲಿ ಕನ್ನಡ ಭಾಷೆಯಲ್ಲಿ ಕೀರ್ತನೆಗಳನ್ನು ರಚಿಸಿ, ಹಾಡುವ, ಕುಣಿಯುವ, ಸಂಪ್ರದಾಯವನ್ನು ಪ್ರಾರಂಭಿಸಿದರು. ಕೀರ್ತನೆಗಳ ಜೊತೆಗೆ ಉಗಾಭೋಗ, ಸುಳಾದಿ, ವೃತ್ತನಾಮ ಮತ್ತು ದಂಡಕಗಳನ್ನು ರಚಿಸಿದರು. ಆ ಮೂಲಕ ಕನ್ನಡ ಹರಿದಾಸ ಸಾಹಿತ್ಯ ಪ್ರವರ್ತಕರೆನಿಸಿದರು.

### ೨.೨ ಶ್ರೀವ್ಯಾಸರಾಯರು (೧೪೪೭ ರಿಂದ ೧೫೩೯)

ವ್ಯಾಸರಾಜರ ಜೀವನವನ್ನು ತಿಳಿಯಲು ಕನ್ನಡ ಮತ್ತು ಸಂಸ್ಕೃತ ಭಾಷೆಗಳಲ್ಲಿ ಅನೇಕ ಆಕರಗಳು ಲಭ್ಯವಿದೆ. ವ್ಯಾಸರಾಯರ ಶಿಷ್ಯರಾದ ವಿಜಯೀಂದ್ರ ತೀರ್ಥರು ಬರೆದಿರುವ

ಶ್ರೀವ್ಯಾಸರಾಜಾಭ್ಯುದಯ, ಸುಧೀಂದ್ರತೀರ್ಥರ ಗುರುರತ್ನಮಾಲಿಕೆ, ವ್ಯಾಸರಾಯಮಠದ ಯತಿಗಳಾಗಿದ್ದ ವಿದ್ಯಾರತ್ನಾಕರ ತೀರ್ಥರ ಅಷ್ಟಕ, ಸೋಮನಾಥ ಕವಿಯ 'ವ್ಯಾಸಯೋಗಿ ಚರಿತೆ' ಈ ಗ್ರಂಥಗಳು ಸಂಸ್ಕೃತ ಭಾಷೆಯಲ್ಲಿದ್ದು, ಅಧ್ಯಯನಕ್ಕೆ ಲಭ್ಯವಿದೆ. ಸ್ವತಃ ವ್ಯಾಸರಾಯರೇ ರಚಿಸಿದ ರಚನೆಗಳಲ್ಲಿ ಪುರಂದರ ದಾಸರೇ ಮೊದಲಾದ ಹರಿದಾಸರ ಕೀರ್ತನೆಗಳಲ್ಲಿ ಹಾಗೂ ವ್ಯಾಸರಾಯಮಠ ಕರ್ನಾಟಕ, ಆಂಧ್ರಪ್ರದೇಶ, ತಮಿಳುನಾಡಿನ ಅನೇಕ ಶಾಸನಗಳಲ್ಲಿ ವ್ಯಾಸರಾಯರ ಜೀವನ ಸಾಧನೆಗಳನ್ನು ಕುರಿತ ವಿವರಗಳು ದೊರಕುತ್ತವೆ.

ಮೀರ್ ಆಲಂ ಉರ್ದು ಭಾಷೆಯಲ್ಲಿ ಬರೆದಿರುವ 'ಗರ್ದಂಕಹನೆ'; ಲಿಸ್ಬಾನಸ್ ಆದ ಅವರು ಬರೆದಿರುವ ಪೋರ್ಚುಗೀಸ್ ಭಾಷೆಯ ಒಂದು ಪುಸ್ತಕ; ಇಟಲಿಯ ರಾಯಭಾರಿ ವೀನಸ್ ರೋಮನ್ ಭಾಷೆಯಲ್ಲಿ ಬರೆದಿರುವ ಒಂದು ಪುಸ್ತಕ ಇವುಗಳಲ್ಲಿ ವ್ಯಾಸರಾಯರ ಜೀವನ ಚರಿತ್ರೆ ದೊರೆಯುತ್ತದೆಯಾದರೂ ಈ ಮೂರು ಗ್ರಂಥಗಳು ಸದ್ಯಕ್ಕೆ ಉಪಲಬ್ದವಿಲ್ಲ.

ಇಪ್ಪತ್ತನೆ ಶತಮಾನದಲ್ಲಿ ಪ್ರಕಟಗೊಂಡ ಹರಿದಾಸ ಸಾಹಿತ್ಯದ ವಿಮರ್ಶಾತ್ಮಕ ಗ್ರಂಥಗಳು ಹಾಗೂ ಕನ್ನಡ ಕೀರ್ತನೆಗಳ ಪುಸ್ತಕಗಳಲ್ಲಿ ಹಾಗೂ ಹರಿದಾಸ ಸಾಹಿತ್ಯದ ವಿಮರ್ಶಾತ್ಮಕ ಚಾರಿತ್ರಿಕ ಗ್ರಂಥಗಳಲ್ಲಿ ಮತ್ತು ಬಿಡಿ ಬಿಡಿ ಲೇಖನಗಳಲ್ಲಿ ವ್ಯಾಸರಾಯರ ಜೀವನ ಮತ್ತು ಚರಿತ್ರೆಗಳನ್ನು ಹಲವು ಲೇಖಕರು ಬರೆದಿರುವರು. ಇವುಗಳಲ್ಲಿ ವ್ಯಾಸರಾಯರ ಸಮಕಾಲೀನನಾಗಿದ್ದ ಸೋಮನಾಥ ಕವಿಯ ಸಂಸ್ಕೃತ ಭಾಷೆಯ 'ವ್ಯಾಸಯೋಗಿ ಚರಿತೆ' ಎಂಬ ಚಂಪೂಕಾವ್ಯ ಹೆಚ್ಚು ವಿಶ್ವಾಸನೀಯವಾದ ಸಮಗ್ರ ಚರಿತ್ರೆಯನ್ನು ನಿರೂಪಿಸುವ ಕೃತಿಯಾಗಿದೆ.

ಸೋಮನಾಥ ಕವಿಯು ತಮಿಳುನಾಡಿನ ಕಂಚಿಯ ಬಳಿಯಿರುವ ಗೋವಿಂದತೀರ್ಥಪುರ ಎಂಬ ಅಗ್ರಹಾರದವನು. ಸಂಸ್ಕೃತದಲ್ಲಿ ಮಹಾವಿದ್ವಾಂಸನೆನಿಸಿ ರಾಜಾಧಿರಾಜರಿಂದ ಸನ್ಮಾನಿತನಾದವನು. ಸೋಮನಾಥ ಕವಿಯನ್ನು ವ್ಯಾಸರಾಯರು ವಿಜಯನಗರಕ್ಕೆ ಬರಮಾಡಿಸಿಕೊಂಡು ಇವರ ಶತವಧಾನ ಶಕ್ತಿಗೆ ಬೆರಗಾಗಿ ಸನ್ಮಾನಿಸಿದರಂತೆ; ಇಂತಹವನು ಬರೆದ 'ವ್ಯಾಸಯೋಗಿ ಚರಿತೆ' ಇತಿಹಾಸಕ್ಕೆ ತೀರಾ ಹತ್ತಿರವೆಂದು ಭಾವಿಸಬಹುದು".೯

ಮೈಸೂರು ಜಿಲ್ಲೆಯ ಸೋಸಲೆಗೆ ಸುಮಾರು ಆರು ಮೈಲಿ ದೂರದಲ್ಲಿ ಕಾವೇರಿ ನದಿ ತೀರದಲ್ಲಿರುವ ಬನ್ನೂರು ಎಂಬ ಗ್ರಾಮದಲ್ಲಿ ಬಲ್ಲಣ ಸುಮತಿ ಮತ್ತು ಲಕ್ಷ್ಮೀದೇವಿ ಎಂಬ

ದಂಪತಿಗಳು ಕ್ರಿ.ಶ. ಹದಿನೈದನೆ ಶತಮಾನದಲ್ಲಿ ಜೀವಿಸುತ್ತಿದ್ದರು. ಈ ದಂಪತಿಗಳಿಗೆ ಮಕ್ಕಳಿರಲಿಲ್ಲ. ಲಕ್ಷಿದೇವಿಯು ಸಂತಾನ ಪ್ರಾಪ್ತಿಗಾಗಿ ವೇದವ್ಯಾಸರ ಉಪಾಸನೆ ಮಾಡಿದಳು. ಅದೇ ಸಮಯಕ್ಕೆ ಬ್ರಹ್ಮಣ್ಯತೀರ್ಥರು ಬನ್ನೂರಿಗೆ ಬಂದರು. ಆ ಕಾಲದ ಘನ ವಿದ್ವಾಂಸರಾಗಿದ್ದ ಅವರನ್ನು ಸೂರ್ಯಾಂಶ ಸಂಭೂತರೆಂದು ಜನ ಭಾವಿಸಿದ್ದರು. ಬಲ್ಲಣ ಸುಮತಿ ಲಕ್ಷ್ಮಿದೇವಿ ದಂಪತಿಗಳು ಸಂತಾನ ಭಾಗ್ಯ ಉಂಟಾಗುವಂತೆ ಆಶೀರ್ವದಿಸಬೇಕೆಂದು ಕೇಳಿಕೊಂಡರು. ಆಗ ಬ್ರಹ್ಮಣ್ಯತೀರ್ಥರು ಈ ದಂಪತಿಗಳ ಕೈಯಲ್ಲಿ ಸಂತಾನ ಭಾಗ್ಯಕ್ಕಾಗಿ ಒಂದು ಹೋಮವನ್ನು ಮಾಡಿಸಿ ಅವರನ್ನು ಆಶೀರ್ವದಿಸಿದರು. ಹಾಗೆಯೇ ಹುಟ್ಟುವ ಮಗುವನ್ನು ಮಠಕ್ಕೆ ಒಪ್ಪಿಸಬೇಕೆಂದು ಮಾತು ತೆಗೆದುಕೊಂಡರು. ಮುಂದೆ ಈ ದಂಪತಿಗಳಿಗೆ ಮೂವರು ಮಕ್ಕಳಾದರು. ಮೂರನೆಯ ಮಗುವಿಗೆ ಯತಿರಾಜನೆಂದು ನಾಮಕರಣ ಮಾಡಿದರು. ವ್ಯಾಸರಾಯರು ಜನಿಸಿದ್ದು ೨೨.೦೪.೧೪೪೭ ವಿದ್ಯಾರತ್ನಾಕರ ತೀರ್ಥರು ಬರೆದಿರುವ ವ್ಯಾಸರಾಜಾಷ್ಟಕದಲ್ಲಿ ವ್ಯಾಸರಾಯರು ಪ್ರಭವ ಸಂವತ್ಸರದ ವೈಶಾಖ ಶುದ್ಧ ಸಪ್ತಮಿ ಭಾನುವಾರದಂದು ಜನಿಸಿದರೆಂದು ಹೇಳಲಾಗಿದ್ದು, ಇದು ೨೨.೦೪.೧೪೪೭ರ ದಿನಾಂಕಕ್ಕೆ ಸರಿಹೊಂದುತ್ತದೆ.

ಬಲ್ಲಣ ಸುಮತಿ ಲಕ್ಷ್ಮಿದೇವಿ ದಂಪತಿಗಳು ಯತಿರಾಜನನ್ನು ಬ್ರಹ್ಮಣ್ಯತೀರ್ಥರಿಗೆ ಕೊಟ್ಟಮಾತಿನಂತೆ ಒಪ್ಪಿಸಿದರು. ಯತಿರಾಜನ ತಂದೆ ಹಾಗೂ ತಾತ ರಾಮಾಚಾರ್ಯ ಎಲ್ಲರೂ ದ್ವೈತ ವೇದಾಂತದಲ್ಲಿ ವಿದ್ವಾಂಸರಾಗಿದ್ದರು. ಬ್ರಹ್ಮಣ್ಯತೀರ್ಥರೂ ಪೂರ್ವಾಶ್ರಮದಲ್ಲಿ ಬಂಧುವೇ ಆದ್ದರಿಂದ ಯತಿರಾಜರಿಗೆ ಮಠದ ಸಂಪರ್ಕ ಚೆನ್ನಾಗಿದ್ದಿತು. ಏಳನೇ ವಯಸ್ಸಿನಲ್ಲೇ ಉಪನಯನವಾಯಿತು. ನಂತರ ಶಾಸ್ತ್ರಾಭ್ಯಾಸಕ್ಕೆ ತೊಡಗಿ ಕೇವಲ ಕೆಲವೇ ವರ್ಷಗಳಲ್ಲಿ ದ್ವೈತ ಸಿದ್ಧಾಂತದಲ್ಲಿ ಅಪೂರ್ವವಾದ ಪಾಂಡಿತ್ಯಗಳಿಸಿ ವಾದಿಗಳನ್ನು ಜಯಿಸಿದರು. ಇಂತಹ ವಿದ್ಯಾವಂತರೂ, ಜ್ಞಾನಿಯೂ ಆದ ವ್ಯಾಸರಾಯರೇ ತಮ್ಮ ಮಠಕ್ಕೆ ಸೂಕ್ತ ವ್ಯಕ್ತಿಯೆಂದು ನಿರ್ಣಯಿಸಿ, ಬ್ರಹ್ಮಣ್ಯತೀರ್ಥರು ಯತಿರಾಜನಿಗೆ ಹದಿನೆಂಟನೇ ವಯಸ್ಸಿನಲ್ಲಿ ಯತ್ಯಾಶ್ರಮ ನೀಡಿ 'ವ್ಯಾಸತೀರ್ಥ'ರೆಂದು ನಾಮಕರಣ ಮಾಡಿದರು. ಮುಂದೆ ಸಂಸ್ಕೃತದಲ್ಲಿ ನ್ಯಾಯಮೃತ, ತರ್ಕತಾಂಡವ ಎಂಬ ಪ್ರೌಢ ಕೃತಿಗಳನ್ನು ರಚಿಸಿದರು. ಅಲ್ಲದೇ 'ತಾತ್ಪರ್ಯ ಚಂದ್ರಿಕಾ' ಎಂಬ ದ್ವೈತ ಸಿದ್ಧಾಂತ ಗ್ರಂಥ ರಚನೆಯಿಂದಾಗಿ 'ಚಂದ್ರಿಕಾಚಾರ್ಯ'ರೆಂದೂ, ವಿಜಯನಗರದ

ಸಿಂಹಾಸನವನ್ನೇರಿ ಕೃಷ್ಣದೇವರಾಯನ ಕುಹಯೋಗವನ್ನು ನಿವಾರಿಸಿದ ಕುರುಹಾಗಿ 'ರಾಯ' ಶಬ್ದ ಸಹಿತವಾಗಿ ವ್ಯಾಸರಾಯರೆಂದು ಪ್ರಸಿದ್ಧರಾದರು.

ಯತ್ಯಾಶ್ರಮವನ್ನು ಸ್ವೀಕರಿಸಿದ ಮೇಲೆ ವ್ಯಾಸರಾಯರು ದೀರ್ಘವಾದ ಪ್ರವಾಸವನ್ನು ಕೈಗೊಂಡು ಕಂಚಿಗೆ ಬಂದರು. ಪಲ್ಲವರ ಕಂಚಿಯು ಆ ಕಾಲದಲ್ಲಿ ವೇದಾಂತ ವಿದ್ಯೆಯ ವಿಶ್ವವಿದ್ಯಾಲಯದಂತಿತ್ತು. ಅಲ್ಲಿಯ ಸಭೆಯಲ್ಲಿ ವಾಕ್ಯಾರ್ಥದಲ್ಲಿ ಅನೇಕ ಪಂಡಿತರನ್ನು ನಿರುತ್ತರರನ್ನಾಗಿ ಮಾಡಿದರು. ಅಂತ ಒಂದು ಸಂದರ್ಭದಲ್ಲಿ ಇಡೀ 'ದ್ವೈತ ಸಿದ್ಧಾಂತ'ವನ್ನು ಒಂದೇ ಶ್ಲೋಕದಲ್ಲಿ ಅಳವಡಿಸಿ ನಿರೂಪಿಸಿದರು.

**ಶ್ರೀ ಮನ್ಮಧ್ವಮತೇ ಹರಿಃ ಪರತರಃ ಸತ್ಯಂ ಜಗತ್ತತ್ವತೋ**
**ಭೇದೋ ಜೀವಗಣಾ ಹರೇರನುಚರಾಃ ನಿಚೋಚ್ಚಭಾವಂ ಗತಾಃ**
**ಮುಕ್ತಿರ್ನೈಜ ಸುಖಾನುಭೂತಿರಮಲಾ ಭಕ್ತಿಶ್ಚ ತತ್ಸಾಧನಂ**
**ಹ್ಯಕ್ಷಾದಿತ್ರಿತಯಂ ಪ್ರಮಾಣಮಖಿಲಾಮ್ನಾಯೈಕ ವೇದ್ಯೋ ಹರಿಃ**

ಎಂದು ನಾಲ್ಕೇ ಸಾಲುಗಳಲ್ಲಿ ಮಧ್ವಮತದ ತತ್ವಗಳನ್ನೆಲ್ಲಾ ಸಂಗ್ರಹವಾಗಿ ನಿರೂಪಿಸಿದರು. ಆಳವಾದ ಅಧ್ಯಯನ ಉತ್ತಮ ನಿರೂಪಣಾ ಕೌಶಲ್ಯ ಹೊಂದಿದವರು ಮಾತ್ರ ಈ ರೀತಿ ಸಮರ್ಥವಾಗಿ ವಿಷಯವನ್ನು ಸಂಗ್ರಹಿಸಲು ಸಾಧ್ಯ.

ವ್ಯಾಸರಾಯರ ವಾದ ವೈಖರಿಗಳನ್ನು ಕಂಡು ಕರುಬಿದ ಕಂಚಿಯ ಬ್ರಾಹ್ಮಣ ಇವರಿಗೆ ವಿಷವನುಣಿಸಲು ಪ್ರಯತ್ನಿಸಿ ವಿಫಲನಾದನಂತೆ! ವ್ಯಾಸರಾಯರು ವಿಷ ಉಣಿಸಲು ಯತ್ನಿಸಿದವರ ಮೇಲೆ ದ್ವೇಷ ಸಾಧಿಸದೆ ಕ್ಷಮಿಸಿ, ನೀತಿಯನ್ನು ಬೋಧಿಸಿ", 'ವಿಷಯವನುಣಿಸಿದವನಿಗೆ ಷಡ್ರಸವನೀಯಲು ಬೇಕು' ಎಂಬ ನುಡಿಯನ್ನು ಜಾರಿಗೊಳಿಸಿ ಮತ್ತಷ್ಟು ಪ್ರಸಿದ್ಧಿಯನ್ನು ಪಡೆದರು".೧೦

ವ್ಯಾಸತೀರ್ಥರು ತಮ್ಮ ಗುರುಗಳಾದ ಬ್ರಹ್ಮಣ್ಯತೀರ್ಥರ ಆದೇಶದ ಮೇರೆಗೆ ಮುಳುಬಾಗಿಲಿನ ಶ್ರೀಪಾದರಾಜರಲ್ಲಿಗೆ ಬಂದರು. ಈ ವೇಳೆಗೆ ಮುಳುಬಾಗಿಲು ಒಂದು ದೊಡ್ಡ ವಿದ್ಯಾಕೇಂದ್ರವಾಗಿತ್ತು. ಆಗಿನ ಶ್ರೀಪಾದರಾಜ, ವ್ಯಾಸರಾಯರ ಸಮಾಗಮ ಒಂದು ಅಪರೂಪದ ಪ್ರಸಂಗ. ವ್ಯಾಸರಾಯರು ತಮ್ಮ ಗುರುಗಳಾದ ಶ್ರೀಪಾದರಾಯರನ್ನು ಎರಡು ಕೀರ್ತನೆಗಳಲ್ಲಿ ಸ್ತುತಿಸಿರುವುದೇನೋ ಸರಿ. ಆದರೆ ಗುರುಗಳಾದ ಶ್ರೀಪಾದರಾಜರು ತಮ್ಮ ಶಿಷ್ಯರಾದ

ವ್ಯಾಸರಾಯರನ್ನು ಆದರ ಭಾವದಿಂದ ಹೊಗಳಿರುವುದು ಇನ್ನೊಂದು ವಿಶೇಷ. 'ಸಾಸಿರ ಜಿಹ್ವೆಗಳುಳ್ಳ ಶೇಷನೇ ಕೊಂಡಾಡಬೇಕು ವ್ಯಾಸಮುನಿರಾಯರ ಸಂನ್ಯಾಸದಿರವ' ಎಂದು ಹೊಗಳಿದ್ದಾರೆ. ಶಿಷ್ಯರನ್ನು ಹೊಗಳುವ ಈ ಸತ್ಪರಂಪರೆ ಹರಿದಾಸರಲ್ಲಿ ಒಂದು ವೈಶಿಷ್ಟ್ಯವಾಗಿ ಬೆಳೆದಿದೆ.

ವ್ಯಾಸರಾಯರು ಮುಳುಬಾಗಿಲಿನಲ್ಲಿ ಹನ್ನೆರಡು ವರ್ಷಗಳ ಕಾಲ ವಿದ್ಯಾಭ್ಯಾಸ ಮಾಡಿ, ವೇದಾಂತದಲ್ಲಿ ನಿಸ್ಸೀಮರೆನಿಸಿಕೊಂಡರು. ಅನಂತರ ಉತ್ತರಭಾರತದ ಯಾತ್ರೆಯನ್ನು ಕೈಗೊಂಡು ಮಿಥಿಲೆಯ ವಿದ್ವಾಂಸ ಪಕ್ಷದರನೊಂದಿಗೆ ಹತ್ತು ದಿನಗಳವರೆಗೆ ವಾದಿಸಿ ವಿಜಯಿಗಳಾದರು. "ಇಂಥದೇ ಉತ್ತರ ಭಾರತದ ಯಾತ್ರೆಯ ಕಾಲಕ್ಕೆ ಲಕ್ಷ್ಮೀಪತಿ ಎನ್ನುವವರಿಗೆ ಮಾಧ್ವ ಸಂನ್ಯಾಸ ದೀಕ್ಷೆಯನ್ನು ನೀಡಿದ್ದರು. ಅವರ ಪ್ರಶಿಷ್ಯರೇ ಚೈತನ್ಯ ಮಹಾಪ್ರಭು. ಅವರಿಂದ ವೈಷ್ಣವೀಯ ಪಂಥವು ಚೈತನ್ಯ ಪಂಥವೆಂದೇ ಹೆಸರುಗೊಂಡು ಅಭಿವೃದ್ಧಿ ಹೊಂದಿತು. ಹೀಗೆ ವ್ಯಾಸರಾಯರೇ ಈ ಪಂಥದ ರೂವಾರಿಗಳೆಂಬುದು ನೆಲೆಗೊಂಡ ಮಾತಾಗಿದೆ."[೧೧]

ವ್ಯಾಸರಾಯರ ಸೇವೆ ಕೇವಲ ಆಧ್ಯಾತ್ಮಿಕ ಕ್ಷೇತ್ರಕ್ಕೆ ಮೀಸಲಾದುದಲ್ಲ, ಸಮಾಜ ಸೇವೆಗಾಗಿಯೂ ತಮ್ಮನ್ನು ತಾವು ತೊಡಗಿಸಿಕೊಂಡಿದ್ದರು. ಒಮ್ಮೆ ಜಂಬುಕೇಶ್ವರ ಕ್ಷೇತ್ರಗಳಲ್ಲಿ ಶೈವ-ವೈಷ್ಣವರಿಗೆ ಬಂದ ಗಡಿ ವಿವಾದವನ್ನು ತೀರ್ಮಾನಿಸಲು ಸ್ವತಃ ದೊರೆಯೇ ಬಂದ ವ್ಯಾಸರಾಯರೂ ಸಹ ಅವನ ಜೊತೆ ಬಂದಿದ್ದರು. ದೊರೆ ತೀರ್ಮಾನವನ್ನು ವ್ಯಾಸರಾಯರಿಗೆ ವಹಿಸಿದ, ಆಗ ವ್ಯಾಸರಾಯರು ಈ ದೇವಾಲಯಗಳಿಗೆ ಸೇರಿದವರೊಬ್ಬರು ಉಸಿರು ಕಟ್ಟಿ ಎಷ್ಟು ದೂರ ಓಡುವರೋ ಅಲ್ಲಿಯವರೆಗೆ, ಅವರ ದೇವಾಲಯದ ಪ್ರದೇಶವೆಂದು ಒಪ್ಪಿಸಿದರು. ಆದರೆ ಉಸಿರು ಕಟ್ಟಿ ಬಿಡುವ ಧೈರ್ಯವನ್ನು ಯಾರೊಬ್ಬರೂ ಮಾಡಲಿಲ್ಲ. ಆಗ ಜನರ ಒಪ್ಪಿಗೆ ಪಡೆದು ವ್ಯಾಸರಾಯರೇ ಉಸಿರು ಕಟ್ಟಿ ಮೂರು ಮೈಲಿ ದೂರ ಓಡಿದರು. ಅಲ್ಲಿಯವರೆಗೆ ವೈಷ್ಣವ ಗಡಿ ಎಂದು ತೀರ್ಮಾನವಾಯಿತು. ವ್ಯಾಸರಾಯರ ವಿರುದ್ಧ ಧ್ವನಿ ಎತ್ತುವ ಧೈರ್ಯ ಯಾರಿಗೂ ಇರಲಿಲ್ಲ. ಗಡಿ ವಿವಾದ ಹೀಗೆ ಬಗೆಹರಿಯಿತು. ಶ್ರೀ ವಿಜಯೀಂದ್ರತೀರ್ಥರು ವ್ಯಾಸರಾಜ ಸ್ತೋತ್ರದಲ್ಲಿ.

ಸೀಮಾನಾಂ ತತ್ರ ತತ್ರೈಕ್ಯ ಕ್ಷೇತ್ರೇಷು ಚ ಮಹಾಮತಿಃ
ವ್ಯವಸ್ಥಾಪಾತ್ರ ಮರ್ಯಾದಾಂ ಲಬ್ದವಾಂಸ್ತಮಿಹಾಶ್ರಯೇ[೧೨]

ಎಂದು ಶ್ಲೋಕವೊಂದರಲ್ಲಿ ಹೇಳಿ ವ್ಯಾಸರಾಯರು ಇಂತಹ ಅನೇಕ ಗಡಿ ಸಮಸ್ಯೆಗಳನ್ನು ಬಗೆಹರಿಸಿರುವ ಸಂಗತಿಯನ್ನು ಉಲ್ಲೇಖಿಸಿದ್ದಾರೆ. ವ್ಯಾಸರಾಯರು ಎಲ್ಲಿ ಓಡುವುದನ್ನು ನಿಲ್ಲಿಸಿದರೋ ಆ ಸ್ಥಳದಲ್ಲಿ ಒಂದು ಆಂಜನೇಯನ ಮೂರ್ತಿಯನ್ನು ಪ್ರತಿಷ್ಠಾಪಿಸಿದರು. ಆ ದೇವಾಲಯ ಇಂದಿಗೂ 'ಎಲೆಕಲ್ಲು ಆಂಜನೇಯ'ನೆಂದೆ ಪ್ರಸಿದ್ಧಿ ಪಡೆದಿದೆ.

ವ್ಯಾಸರಾಯರು ಜೀವಿಸಿದ್ದು ಕರ್ನಾಟದ ರಾಜಕೀಯ ಮತ್ತು ಸಾಂಸ್ಕೃತಿಕ ಇತಿಹಾಸದಲ್ಲಿ ಸುವರ್ಣಯುಗವೆಂದೇ ಖ್ಯಾತವಾದ ವಿಜಯನಗರ ಕೃಷ್ಣದೇವರಾಯನ ಆಳ್ವಿಕೆಯ ಕಾಲದಲ್ಲಿ. ವಿಜಯನಗರವನ್ನು ನರಸಿಂಹ, ವೀರನರಸಿಂಹ, ಕೃಷ್ಣದೇವರಾಯ, ತಿರುಮಲರಾಯ, ಅಚ್ಯುತರಾಯರೆಂಬ ಐವರು ಅರಸರು ರಾಜ್ಯಭಾರ ಮಾಡಿದರು. ಈ ಐವರಿಗೂ ವ್ಯಾಸರಾಯರು ರಾಜಗುರುಗಳಾಗಿದ್ದು ಹಿಂದೂ ಧರ್ಮದ ಪುನರುಜ್ಜೀವನಕ್ಕೆ ಕಾರಣರಾದರು. ಕೃಷ್ಣದೇವರಾಯನಿಗೆ ವ್ಯಾಸರಾಯರಲ್ಲಿ ವಿಶೇಷವಾದ ಆದರ ಗೌರವವಿದ್ದಿತು. ವ್ಯಾಸರಾಯರ ಮಾರ್ಗದರ್ಶನದಂತೆ ರಾಜ್ಯಭಾರ ಮಾಡುತ್ತಿದ್ದನು. ಹಂಪಿಯ ದಕ್ಷಿಣಭಾಗದ ಗೋಡೆಯ ಮೇಲಿರುವ ಶಾಸನವೊಂದು ಕೃಷ್ಣದೇವರಾಯನ ಕೊಡುಗೆಯನ್ನು ವಿವರಿಸುವ ಶಾಸನದಲ್ಲಿ ವ್ಯಾಸರಾಯರನ್ನು 'ಗುರುಗಳು' ಎಂದು ಸೂಚಿಸಲಾಗಿದೆ. ಪೇಸ್ ಎಂಬ ಮಹಾಶಯ "ತನಗೆ ಅತ್ಯಂತ ಪ್ರಿಯನಾದವನೂ ಗೌರವಾನ್ವಿತನೂ ಆದ ಬ್ರಾಹ್ಮಣನಿಂದ ಕೃಷ್ಣದೇವರಾಯ ಅಭಿಷೇಕ ಮಾಡಿಸಿಕೊಳ್ಳುತ್ತಿದ್ದ"[೧೩] ಎಂದಿರುವನು ಈ ಮಾತುಗಳು ವ್ಯಾಸರಾಯರನ್ನು ಕುರಿತವೇ ಆಗಿರಬೇಕೆಂಬುದು ವಿದ್ವಾಂಸರ ಅಭಿಪ್ರಾಯ.

ಸಾಳುವ ವಂಶದ ನರಿಸಿಂಹನೂ ತಿರುಪತಿಯ ಅವಿಧೇಯ ಅರ್ಚಕರನ್ನು ನಾಶ ಮಾಡಿ, ಶ್ರೀನಿವಾಸನ ಪೂಜಾ ಕಾರ್ಯವನ್ನು ಶ್ರೀಪಾದರಾಜರಿಗೆ ವಹಿಸಿ ಕೊಡಲು ಅವರು ಅದನ್ನು ತಮ್ಮ ಶಿಷ್ಯರಾದ ವ್ಯಾಸರಾಯರಿಗೆ ಒಪ್ಪಿಸಿದರು. ವ್ಯಾಸರಾಯರು ಹನ್ನೆರಡು ವರ್ಷ ಕಾಲ ಶ್ರೀನಿವಾಸನನ್ನು ಮುಟ್ಟಿ ಪೂಜಿಸಿದರೆಂದು ಪ್ರತೀತಿ ತಿರುಪತಿಯ ದೇವಾಲಯದೊಂದಿಗೆ ವ್ಯಾಸರಾಯರು ಹೊಂದಿದ್ದ ಸಂಬಂಧವನ್ನು ಕುರಿತು ಹೀಗೆ ಹೇಳಿದ್ದಾರೆ: "ಅವರ ಹೆಸರನ್ನು ಹೊತ್ತ ಅನೇಕ ಧರ್ಮಶಾಸನಗಳು ಕಂಡು ಬಂದಿದೆ. ಇವರು ದೇವಾಲಯಕ್ಕೆ ಅನೇಕ ದಾನ ದತ್ತಿಗಳನ್ನು ಕೊಟ್ಟಿದ್ದಾರೆ. ಬೇಡಿ ಹನುಮಂತನನ್ನು ಶ್ರೀನಿವಾಸನ ಎದುರಿಗೆ ಪ್ರತಿಷ್ಠಾಪಿಸಿದ್ದಾರೆ ಎಂದು ಹೇಳುತ್ತಾರೆ. ತಿರುಪತಿ ತಿಮ್ಮಪ್ಪನಿಗೆ ಅನೇಕ ಬೆಲೆ ಬಾಳುವ ವಸ್ತುವನ್ನು ಕೊಟ್ಟಿದ್ದಲ್ಲದೆ

ದಿನ ನಿತ್ಯದ ಪೂಜೆಯ ವೆಚ್ಚಕ್ಕೆಂದು ಅನೇಕ ಬೆಲೆ ಬಾಳುವ ಭೂಮಿಯನ್ನು ದತ್ತಿ ಹಾಕಿ ಕೊಟ್ಟರು. ಶ್ರೀನಿವಾಸ ಪದ್ಮಾವತಿಯರ ವಿಶೇಷ ಪೂಜೆಗೆ ಏರ್ಪಾಡು ಮಾಡಿ ಆ ಬಗೆಗೆ ಶಾಸನಗಳನ್ನು ಬರೆಸಿದರು. ದೇವಾಲಯದ ಗರ್ಭಗುಡಿಯ ಶಿಖರಕ್ಕೆ ಚಿನ್ನದ ರೇಖಿಯನ್ನು ಹೊದಿಸಿ ಉತ್ತರ ದಿಕ್ಕಿನಲ್ಲಿ ವಿಮಾನ ಶ್ರೀನಿವಾಸ ಮೂರ್ತಿಯನ್ನು ನಿರ್ಮಿಸಿದರು".[೧೪] ಇಂದಿಗೂ ತಿರುಪತಿಯ ಮೂಲ ಶ್ರೀನಿವಾಸ ದೇವರನ್ನು ದರ್ಶನ ಮಾಡಲು ಸಾಧ್ಯವಾಗದಿದ್ದವರು ವಿಮಾನ ಶ್ರೀನಿವಾಸನ ದರ್ಶನ ಪಡೆದು ಧನ್ಯರಾಗುವ ಸಂಪ್ರದಾಯ ಪಡೆದಿದ್ದಾರೆ. ವ್ಯಾಸರಾಯರು ತಮಗಿದ್ದ ರಾಜಸ್ನೇಹದಿಂದ ತಿರುಪತಿಯ ದೇವಾಲಯದ ಅಧಿಕಾರವನ್ನು ಸಂಪೂರ್ಣವಾಗಿ ತಮ್ಮಲ್ಲಿ ಇರಿಸಿಕೊಳ್ಳಬಹುದಿತ್ತು. ಆದರೆ ಅವರು ಹಾಗೆ ಮಾಡದೆ ಅರ್ಚಕ ತಾತಾಚಾರ್ಯರ ವಂಶದಲ್ಲಿ ಹುಟ್ಟಿದ ಮಗು ಬೆಳೆದ ಮೇಲೆ ಆ ಬಾಲಕನಿಗೆ ಪೂಜಾವಿಧಿಯಲ್ಲಿ ಶಿಕ್ಷಣವನ್ನು ಕೊಡಿಸಿ, ಆ ಹುಡುಗನಿಗೆ ಪೂಜಾಧಿಕಾರವನ್ನು ಕೊಟ್ಟು ಆಶೀರ್ವದಿಸಿದರು. ಇದು ವ್ಯಾಸರಾಯರ ಉದಾರ ಮನೋಭಾವಕ್ಕೆ ಸಾಕ್ಷಿಯಾಗಿದೆ.

ವ್ಯಾಸರಾಯರ ಈ ಸೇವೆಯ ಗೌರವಾರ್ಥವಾಗಿ ಇಂದಿಗೂ ತಿರುಪತಿಯಲ್ಲಿ ವ್ಯಾಸರಾಜ ಮಠಾಧೀಶರಿಗೆ ತಿರುಪತಿಯಲ್ಲಿ ಪ್ರತಿನಿತ್ಯ ಶ್ರೀನಿವಾಸನಿಗೆ ಆರತಿಯ ಪೂಜೆ ಮಾಡಲು ಅವಕಾಶ ನೀಡಿ ಟಿ.ಟಿ.ಡಿ. ವಿಶೇಷ ಗೌರವವನ್ನು ಸಲ್ಲಿಸುತ್ತದೆ.

ಮಾಂಡಲೀಕನಾಗಿದ್ದ ಸಾಳುವ ನರಸಿಂಹನು ವಿಜಯನಗರ ಸಾಮ್ರಾಜ್ಯಕ್ಕೆ ಅಧಿಪತಿಯಾದ ಮೇಲೆ, ತಿರುಪತಿಯನ್ನು ಬಿಟ್ಟು, ಹಂಪೆಯಲ್ಲಿ ನೆಲೆಸಬೇಕಾಗಿ ಬಂತು. ನರಸಿಂಹನ ಅನಂತರ ಬಂದ ರಾಜರೂ ಸಹ ವ್ಯಾಸರಾಯರಿಗೆ ಸಕಲ ಮರ್ಯಾದೆಗಳನ್ನು ಸಲ್ಲಿಸುತ್ತ ಬಂದರು. ಕೃಷ್ಣದೇವರಾಯನ ಕಾಲದಲ್ಲಿ ವ್ಯಾಸರಾಯರ ಹಿರಿಮೆ, ಪ್ರತಿಷ್ಠೆ ಎಲ್ಲೆಡೆ ಹರಡಿತು. ಧಾರ್ಮಿಕ ಕ್ಷೇತ್ರದಲ್ಲಿ ಅವರು ಕೈಗೊಂಡ ಕಾರ್ಯವೆಂದರೆ, ದಕ್ಷಿಣ ಭಾರತದ ೭೩೨ ಕಡೆಗಳಲ್ಲಿ ಪ್ರಾಣದೇವರ ವಿಗ್ರಹಗಳನ್ನು ಪ್ರತಿಷ್ಠಾಪನೆ ಮಾಡಿದ್ದು ಅವುಗಳಲ್ಲೆಲ್ಲಾ ಹೆಚ್ಚು ಪ್ರಸಿದ್ಧವಾದದ್ದು ಹಂಪಿಯ ಚಕ್ರತೀರ್ಥದ ಬಳಿ ಇರುವ ಯಂತ್ರೋದ್ಧಾರಕ ಪ್ರಾಣದೇವರು. ಅದುವೇ ಮೊಟ್ಟಮೊದಲನೆಯದಾಗಿದ್ದು ಮುಂದಿನ ಪ್ರತಿಷ್ಠೆಗಳಿಗೆ ಪ್ರೇರಣೆಯಾಯಿತು.

ವಿಜಯನಗರದಲ್ಲಿ ವ್ಯಾಸರಾಯರು ತಮ್ಮ ಮಠವನ್ನು ಬಹಳ ದೊಡ್ಡ ವಿದ್ಯಾಕೇಂದ್ರವನ್ನಾಗಿ

ಮಾಡಿದ್ದರು. ಇಲ್ಲಿರುವ 'ವಿಶ್ವಪಾವನ' ಎಂಬ ಮಠವನ್ನು ತಮ್ಮರಾಯ ವ್ಯಾಸರಾಯರಿಗಾಗಿ ಕಟ್ಟಿಸಿಕೊಟ್ಟಿದ್ದನೆಂಬುದು ನಮಗೆ ಇತಿಹಾಸದಿಂದ ತಿಳಿಯುತ್ತದೆ. ಇಲ್ಲಿಗೆ ದೇಶದ ನಾನಾಕಡೆಗಳಿಂದ ಜ್ಞಾನಾರ್ಥಿಗಳು ಬರುತ್ತಿದ್ದರು. "ನ್ಯೂನಿಜ ಎಂಬ ಪೋರ್ಚಗೀಸ್ ಪ್ರವಾಸಿಯು ಈ ಕಾಲಕ್ಕೆ ಇದ್ದವನಾಗಿ ಆ ವಿಶ್ವವಿದ್ಯಾಲಯದ ಘಟಿಕೋತ್ಸವದ ಮೆರವಣಿಗೆಯು ಮೈಲುದ್ದದವರೆಗೆ ಇತ್ತೆಂದು ವರ್ಣಿಸಿದ್ದಾನೆ."[೧೫] ಒಮ್ಮೆ ಕಳಿಂಗ ದೇಶದ ಬಸವಭಟ್ಟನೂ ವಿಜಯನಗರಕ್ಕೆ ಬಂದನು ವ್ಯಾಸರಾಯರೂ ಅವನೊಡನೆ ಸತತ ಮೂವತ್ತು ದಿನಗಳ ಕಾಲ ಖಂಡನ–ಮಂಡನ ನಡೆಸಿ ವಿಜಯಶಾಲಿಗಳಾದರು. ಇವರಲ್ಲಿ ಸೋತ ಬಸವಭಟ್ಟನಿಗೆ ಅವಮಾನಿಸದೆ ಅವನನ್ನು ಗೌರವಿಸಿದರು. ವ್ಯಾಸರಾಯರ ಈ ಸನ್ನಡತೆಯನ್ನು ಮೆಚ್ಚಿ ಅದರ ಪ್ರೀತ್ಯರ್ಥವಾಗಿ ಬಸವಾಭಟ್ಟನು ತನ್ನಲ್ಲಿದ್ದ ಅಪೂರ್ವ ಪಚ್ಚೆ ಲಿಂಗವನ್ನು ಅವರಿಗೆ ಅರ್ಪಿಸಿದನು.

ಕೃಷ್ಣದೇವರಾಯನಿಗೆ ಒದಗಿದ್ದ ಕುಹಯೋಗವನ್ನು ಪರಿಹಾರ ಮಾಡಿದ ವ್ಯಾಸರಾಯರಿಗೆ ಗೌರವಾರ್ಥವಾಗಿ ಅವರನ್ನು ಸಿಂಹಾಸನದ ಮೇಲೆ ಕೂಡಿಸಿ, ರತ್ನಾಭಿಷೇಕವನ್ನು ಮಾಡಿದನಂತೆ ಅಲ್ಲದೆ, ಮದನಪಲ್ಲಿಯ ಬಳಿ ಇರುವ ಕಂದಕೂರನ್ನು ವ್ಯಾಸರಾಜಮಠಕ್ಕೆ ಕೃಷ್ಣದೇವರಾಯನು ದಾನ ಮಾಡಿದನು. ಇಲ್ಲಿ ವ್ಯಾಸರಾಯರು 'ವ್ಯಾಸ ಸಮುದ್ರ'ವೆಂಬ ದೊಡ್ಡಕೆರೆಯನ್ನು ಕಟ್ಟಿಸಿದ್ದಾರೆ. ಹೀಗೆ ಸಾಮಾನ್ಯ ರೈತಾಪಿವರ್ಗದ ನೀರಿನ ಬವಣೆಯನ್ನು ನೀಗಿಸಿ ಸಮಾಜ ಸೇವೆ ಮಾಡುತ್ತಿದ್ದ ಸಂನ್ಯಾಸಿಗಳು ಅಂದಿನ ಕಾಲದಲ್ಲಿ ಅಪರೂಪವೆಂದೇ ಹೇಳಬೇಕು. ಶ್ರೀಪಾದರಾಜರು ಹೇಳುವಂತೆ 'ಕೆರೆ ಭಾವಿ, ಪುರ ಅಗ್ರಹಾರಂಗಳ ಮಾಡಿ ಭೂಸುರರೊಂದು ಲಕ್ಷ ಕುಟುಂಬಗಳ ಪೊರೆವ ವೈಭವ' ವ್ಯಾಸರಾಯರದ್ದು. ಮೂವತ್ತೆರಡು ಕೆರೆಗಳನ್ನು ಕಟ್ಟಿಸಿದ ಸಮಾಜಸೇವಕರು ಇವರು.

ಶ್ರೀಪಾದರಾಜರು ಪ್ರಾರಂಭಿಸಿದ ಕೀರ್ತನ ಕೈಂಕರ್ಯಕ್ಕೆ ಒಂದು ಸುವ್ಯವಸ್ಥೆಯನ್ನು ಕಲ್ಪಿಸಿ ದಾಸಕೂಟದ ಮೇಲ್ವಿಚಾರಕರಾದವರು ವ್ಯಾಸರಾಯರು. ಹರಿದಾಸ ಸಾಹಿತ್ಯದ ಪ್ರಮುಖರಾದ ಪುರಂದರದಾಸರು, ಕನಕದಾಸರು, ಸೋದೆಯ ಮಠಾಧಿಪತಿಗಳಾಗಿದ್ದ ವಾದಿರಾಜರು ಮುಂತಾದ ಉತ್ತಮ ಶಿಷ್ಯರನ್ನು ಕನ್ನಡಿಗರಿಗಿತ್ತಿದ್ದಾರೆ. ಶ್ರೀನಿವಾಸನಾಯಕರಿಗೆ ಅಂಕಿತೋಪದೇಶ ನೀಡಿ ಪುರಂದರದಾಸರನ್ನಾಗಿ ಮಾಡಿದರು. ಸಂಪ್ರದಾಯಸ್ಥರ ವಿರೋಧದ ನಡುವೆಯೂ

ಕನಕದಾಸರಂತ ಮಹನೀಯರಿಗೆ, ವಿದ್ವತ್ ಸಭೆಗಳಲ್ಲಿ ಭಾಗವಹಿಸುವ ಅವಕಾಶ ಮಾಡಿಕೊಟ್ಟು, ಅವರಿಗೆ ಉನ್ನತವಾದ ಸ್ಥಾನ-ಮಾನವನ್ನು ಕಲ್ಪಿಸಿಕೊಟ್ಟರು. ವ್ಯಾಸರಾಯರ ಇನ್ನಿಬ್ಬರು ಪ್ರತಿಭಾನ್ವಿತ ಶಿಷ್ಯರು ಹಾಗೂ ಮಠದ ಯತಿಗಳಾಗಿದ್ದವರೆಂದರೆ ವಾದಿರಾಜರು ಹಾಗೂ ವಿಜಯೀಂದ್ರತೀರ್ಥರು ಇವರೂ ಸಹ ವ್ಯಾಸರಾಯರ ಮಾರ್ಗದಲ್ಲೇ ನಡೆದು ಕನ್ನಡದಲ್ಲಿ ಕೀರ್ತನೆಗಳನ್ನು ರಚಿಸಿದರು ಸಂಸ್ಕೃತದಲ್ಲಿ ಪಂಡಿತರಾಗಿದ್ದ ವ್ಯಾಸರಾಯರು ಕನ್ನಡದಲ್ಲಿ ಸ್ವತಃ ಕೀರ್ತನೆಗಳನ್ನು ರಚಿಸಿದರಲ್ಲದೆ, ಅನೇಕ ದಾಸರಿಗೆ ದೀಕ್ಷೆ ನೀಡಿ ವ್ಯಾಸ-ದಾಸಕೂಟಗಳನ್ನು ಬೆಳೆಸಿದರು.

ವ್ಯಾಸರಾಯರು ಕೇವಲ ಕೃಷ್ಣದೇವರಾಯನಿಂದ ಮಾತ್ರ ಸನ್ಮಾನಿತರಾದವರಲ್ಲ. "ವ್ಯಾಸರಾಯರ ಮಹಿಮೆ, ಅಂತಶ್ಶಕ್ತಿಗಳನ್ನರಿತಿದ್ದ ಬಿಜಾಪುರದ ಆದಿಲ್‌ಷಹಾ ತನ್ನ ಬಳಿಯಿದ್ದ ರಾಯಭಾರಿಗಳಿಂದ ಅವರ ವಿಚಾರವಾಗಿ ಇನ್ನಷ್ಟು ಮತ್ತಷ್ಟು ಕೇಳಿ, ಸುಪ್ರೀತನಾಗಿ ಅವರಿಗೆ ಒಂಟೆಯ ಮೇಲೆ ನಗಾರಿ, ಹಸಿರು ನಿಶಾನೆಯನ್ನು ಹಿಡಿಸಿಕೊಂಡು, ಹಸಿರು ಛತ್ರಿ, ಬಿರುದಾವಳಿಗೊಡನೆ ಸಂಚರಿಸಬೇಕೆಂಬ ಮರ್ಯಾದೆಯನ್ನು ಸಲ್ಲಿಸಿದರಂತೆ. ಯವನ ಚಕ್ರವರ್ತಿಯಾದ ಬಾಬರ್‌ನಿಂದಲೂ ಇವರಿಗೆ ಇದೇ ರೀತಿಯ ಮರ್ಯಾದೆ ದೊರೆಯಿತು. ಪೋರ್ಚಗೀಸ್ ರಾಯಭಾರಿಗಳು ವ್ಯಾಸರಾಯರ ದರ್ಬಾರಿಗೆ ಬಂದು ಕಪ್ಪಕಾಣಿಕೆಗಳನ್ನು ಸಲ್ಲಿಸಿ ಹೋಗುತ್ತಿದ್ದರು.[೧೬]

ವ್ಯಾಸರಾಯರಿಗೆ ಕೃಷ್ಣದೇವರಾಯನು ಕೊಟ್ಟ ಭೂಮಿ, ಐಶ್ವರ್ಯಾದಿಗಳನ್ನು ವ್ಯಾಸರಾಯರು ಸಮಯೋಚಿತವಾಗಿ ಇತರರಿಗೆ ದಾನಮಾಡಿಬಿಡುತ್ತಿದ್ದರಂತೆ. "ಶಿವಮೊಗ್ಗ ಜಿಲ್ಲೆಯ ಕೂಡಲಿ ಗ್ರಾಮದ ಕಲ್ಲುಮಠದಲ್ಲಿ ದೊರೆತಿರುವ ತಾಮ್ರ ಶಾಸನವೊಂದರಲ್ಲಿ ಕೃಷ್ಣದೇವರಾಯನು ತರ್ಕವ್ಯಾಕರಣ ಪಂಡಿತರೂ ವೈಷ್ಣವಾಗಮ ಸಿದ್ಧಾಂತ ಶಿಖಾಮಣಿಗಳು ಆದ ವ್ಯಾಸರಾಯರಿಗೆ ಹಾನಗಲ್ ಸೀಮೆಯ ಬಂಕಾಪುರ ಗೌರವಪುರವನ್ನು ದಾನವಾಗಿ ಕೊಟ್ಟ. ವ್ಯಾಸರಾಜರು ಅದನ್ನು ಮೂವತ್ತು ವೃತ್ತಿಗಳನ್ನಾಗಿ ವಿಂಗಡಿಸಿ ಮಠದ ಬ್ರಾಹ್ಮಣರಿಗೆ ದಾನವಾಗಿ ಕೊಟ್ಟರು. ಅನಂತರದಲ್ಲಿ ಗೌರಪುರ, ವ್ಯಾಸಪುರವೆಂದೇ ಖ್ಯಾತವಾಯಿತು".[೧೭]

ವ್ಯಾಸರಾಯರು ಭಾರತದ ಪ್ರಮುಖ ಕ್ಷೇತ್ರಗಳಾದ ಹರಿದ್ವಾರ, ಗಯೆ, ಕಾಶಿ, ಬಂಗಾಳ,

ಕುಂಭಕೋಣ, ಉಡುಪಿ, ಮುಳಬಾಗಿಲು, ಕಂಚಿಗಳಲ್ಲಿ ದ್ವೈತ ಸಂಸ್ಥಾನಗಳನ್ನು ಸ್ಥಾಪಿಸಿದ್ದಾರೆ. ಹಂಪೆಯ ವಿಠಲಸ್ವಾಮಿ ದೇವಾಲಯದ ಪ್ರಾಂಗಣದಲ್ಲಿ ಯೋಗವರದ ನರಸಿಂಹಸ್ವಾಮಿಯನ್ನು ಪ್ರತಿಷ್ಠಾಪಿಸಿದರು. ಅಚ್ಯುತರಾಯನ ಕಾಲದಲ್ಲಿ ಅವನ ಸಹಕಾರದಿಂದ ಉಡುಪಿಯ ಅನಂತೇಶ್ವರ ದೇವಾಲಯ ಹಾಗೂ ಮಾಧ್ವ ಸರೋವರಗಳನ್ನು ಜೀರ್ಣೋದ್ಧಾರ ಮಾಡಿದರು.

೧೪೪೭ ರಿಂದ ೧೫೩೯ ರವರೆಗೆ ಒಟ್ಟು ತೊಂಬತ್ತೆರಡು ವರ್ಷಗಳ ಕಾಲ ಸುದೀರ್ಘ ಜೀವನವನ್ನು ನಡೆಸಿದ ಪುಣ್ಯಶಾಲಿಗಳು ವ್ಯಾಸರಾಜರು. ತಮ್ಮ ನಂತರ ತಮ್ಮ ಸಂಸ್ಥಾನಕ್ಕೆ ಯಾರು ಉತ್ತರಾಧಿಕಾರಿಗಳಾಗಬೇಕೆಂಬುದನ್ನು ಮೊದಲೇ ನಿರ್ಧರಿಸಿ ಶ್ರೀನಿವಾಸತೀರ್ಥರಿಗೆ ತಮ್ಮ ಸಂಸ್ಥಾನದ ಜವಾಬ್ದಾರಿಯನ್ನು ವಹಿಸಿಕೊಟ್ಟರು. ಕ್ರಿ.ಶ. ೧೫೩೯ರಲ್ಲಿ ಇವರು ಕೊನೆಯುಸಿರೆಳೆದರು. ಅವರ ಅಪೇಕ್ಷೆಯಂತೆ ಅವರ ಬೃಂದಾವನವನ್ನು ಆನೆಗೊಂದಿ ಬಳಿಯ ತುಂಗಭದ್ರಾ ನಡುಗಡ್ಡೆಯಲ್ಲಿ ನಿರ್ಮಿಸಲಾಗಿದೆ.

ಹೀಗೆ ಶ್ರೀಪಾದರಾಜರ ನಂತರ ಹರಿದಾಸ ಸಾಹಿತ್ಯ ಕ್ಷೇತ್ರದ ಯತಿವರ್ಯರ ಪರಂಪರೆಯಲ್ಲಿ ಕಂಡುಬರುವ ಮತ್ತೊಬ್ಬ ಪ್ರಮುಖ ಯತಿಗಳು ವ್ಯಾಸರಾಯರು. ತಮ್ಮ ಗುರುಗಳಾದ ಶ್ರೀಪಾದರಾಜರು ಪ್ರಾರಂಭಿಸಿದ ಕೀರ್ತನ ಕೈಂಕರ್ಯಕ್ಕೆ ಒಂದು ಸುವ್ಯವಸ್ಥೆಯನ್ನು ಕಲ್ಪಿಸಿ ದಾಸಕೂಟದ ಮೇಲ್ವಿಚಾರಕರಾದರು. ವ್ಯಾಸರಾಯರು ತಮ್ಮ ಜೀವತಾವಧಿಯಲ್ಲಿ ಶೈಕ್ಷಣಿಕ, ಧಾರ್ಮಿಕ ಹಾಗೂ ಸಾಮಾಜಿಕ ರಂಗಗಳಲ್ಲಿ ಮಾಡಿದ ಸಾಧನೆ ಪ್ರಮುಖವಾದುದು. ವಿಜಯನಗರದ ಸಾಮ್ರಾಜ್ಯದ ಅತ್ಯಂತ ಉನ್ನತಿಯ ಕಾಲದಲ್ಲಿ ಬದುಕಿದ್ದ ವ್ಯಾಸರಾಯರು ವೈಷ್ಣವ ಭಕ್ತಿ ಪರಂಪರೆಯನ್ನು ವೈವಿಧ್ಯಮಯವಾಗಿ ಮತ್ತು ವ್ಯಾಪಕವಾಗಿ ಬೆಳೆಸಿದವರಲ್ಲಿ ಮುಖ್ಯರಾದವರು. ಮಾಧ್ವ ಪಂಥದ ಬೋಧನೆ ಚಿಂತನೆಗಳೆಲ್ಲಾ ಸಂಸ್ಕೃತ ಭಾಷೆಯಲ್ಲಿ ಅಭಿವ್ಯಕ್ತವಾಗುತ್ತಿದ್ದ ಸಂದರ್ಭದಲ್ಲಿ ಕನ್ನಡದಲ್ಲಿ ಕೀರ್ತನೆ, ಸುಳಾದಿ ಮತ್ತು ಉಗಾಭೋಗಗಳನ್ನು ರಚಿಸಿ, ಹರಿದಾಸ ಸಾಹಿತ್ಯಕ್ಕೆ ಮನ್ನಣೆಯನ್ನು ದೊರಕಿಸಿಕೊಟ್ಟರು.

### ೨. ೩. ಶ್ರೀ ವಾದಿರಾಜರು (ಕ್ರಿ.ಶ. ೧೪೮೦ – ೧೬೦೦)

ಹರಿದಾಸ ವಾಙ್ಮಯಕ್ಕೆ ಶ್ರೇಷ್ಠವಾದ ಕೃತಿಗಳನ್ನು ಸಲ್ಲಿಸಿದ ಯತಿತ್ರಯರಲ್ಲಿ ಶ್ರೀ ವಾದಿರಾಜರು ಮೂರನೆಯವರು. ಶ್ರೀಪಾದರಾಜರು ಮತ್ತು ಶ್ರೀವ್ಯಾಸರಾಯರ ಹಾದಿಯನ್ನೇ ಅನುಸರಿಸಿ,

ಕನ್ನಡ ಸಂಸ್ಕೃತ ಎರಡೂ ಭಾಷೆಗಳಲ್ಲಿ ಕೃತಿ ರಚನೆ ಮಾಡಿದವರು. ಉಡುಪಿಯ ಅಷ್ಟಮಠಗಳಲ್ಲಿ ಒಂದಾದ ಸೋದೆ ಮಠದ ಪೀಳಿಗೆಯಲ್ಲಿ ಅತ್ಯಂತ ಪ್ರತಿಭಾಶಾಲಿಗಳಾಗಿ ಬೆಳೆದ ಯತಿಗಳು. ದ್ವೈತ ಸಿದ್ಧಾಂತದ ಪ್ರತಿಪಾದನೆ, ಭಾಗವತ ಧರ್ಮ ಪ್ರಸಾರ, ಇವುಗಳ ಜೊತೆಗೆ ಜನಸಾಮಾನ್ಯರಲ್ಲಿ ಧಾರ್ಮಿಕ ಮತ್ತು ನೈತಿಕ ಜಾಗೃತಿಯನ್ನು ಉಂಟುಮಾಡಲು ತಮ್ಮನ್ನು ತಾವು ತೊಡಗಿಸಿಕೊಂಡ 'ಯತಿ' ಇವರು. ಸುಮಾರು ನೂರಿಪ್ಪತ್ತು ವರ್ಷಗಳ ಕಾಲ ಬದುಕಿ ಬಾಳಿದ ಈ ಮಹನೀಯರ ಜೀವನ ಸಾಧನೆಗಳ ಬಗ್ಗೆ ಹಲವಾರು ಸಂಸ್ಕೃತ ಕನ್ನಡ ಕೃತಿಗಳು ದೊರೆಯುತ್ತವೆ.

ರಾಮಚಂದ್ರಾರ್ಯರ ವಾದಿರಾಜ ಗುರುಚರಿತಾಮೃತ, ಷಟ್ಪುರಾಚಾರ್ಯರ ಶ್ರೀ ವಾದಿರಾಜ ಗುಣರತ್ನಮಾಲಾ, ಆರುಣಿಯ ರಾಜ ಪುರೋಹಿತ ಮದ್ಗಕವಿಯ ವಿಜಯೀಂದ್ರ ವಿಜಯ, ರಘುನಾಥಾಚಾರ್ಯರ 'ವೃತ್ತರತ್ನಸಂಗ್ರಹ' ಇವು ವಾದಿರಾಜರ ಜೀವನವನ್ನು ಚಿತ್ರಿಸುವ ಸಂಸ್ಕೃತ ಕೃತಿಗಳು. ಇದಲ್ಲದೆ ವಾದಿರಾಜರ ಸಮಕಾಲೀನರಾದ ವ್ಯಾಸರಾಜಪುರಂದರರಾದಿಯಾಗಿ ಎಲ್ಲ ಹರಿದಾಸರೂ ವಾದಿರಾಜರನ್ನು ಕುರಿತ 'ಯತಿಸ್ತುತಿ' ಕೀರ್ತನೆಗಳನ್ನು ರಚಿಸಿದ್ದಾರೆ. ಸುಮಾರು ನೂರಕ್ಕೂ ಹೆಚ್ಚು ವಾದಿರಾಜ ಪ್ರಶಸ್ತಿ ಕೀರ್ತನೆಗಳು ದೊರೆಯುತ್ತವೆ. ಇಷ್ಟಾದರೂ ವಾದಿರಾಜರ ಜೀವನದ ರೂಪುರೇಷೆಗಳನ್ನು ಅತ್ಯಂತ ನಿಖರವಾಗಿ ಚಾರಿತ್ರಕವಾಗಿ ಗುರುತಿಸಲು ಸಾಧ್ಯವಿಲ್ಲ.

ವಾದಿರಾಜರ ಜನ್ಮಸ್ಥಳ ಕುಂದಾಪುರ ತಾಲ್ಲೂಕಿನ ಕುಂಭಾಸಿ ಸಮೀಪದ ಹೂವಿನಕೆರೆ ಗ್ರಾಮ. ರಾಮಾಚಾರ್ಯ ಅಥವಾ ರಾಮಭಟ್ಟ ಇವರ ತಂದೆ, ತಾಯಿಯ ಹೆಸರು ಗೌರಮ್ಮ. ಸರಸ್ವತಿ ಎಂಬುದು ವಾದಿರಾಜರ ತಾಯಿಯ ಹೆಸರೆಂದು ಇನ್ನು ಕೆಲವು ಕೃತಿಗಳು ತಿಳಿಸುತ್ತವೆ. ತುಳು ಮಾತೃಭಾಷೆಯ ಶಿವಳ್ಳಿ ಬ್ರಾಹ್ಮಣ ಕುಟುಂಬಕ್ಕೆ ಸೇರಿದ ದಂಪತಿಗಳು ಸೋದೆ ಮಠದ ಭಕ್ತರು. ವಾದಿರಾಜರ ಮೊದಲ ಹೆಸರು 'ವರಾಹ'. ಸೋದೆ ಮಠದ ಆಗಿನ ಗುರುಗಳಾದ ವಾಗೀಶತೀರ್ಥರ ಸೂಚನೆಯಂತೆ ತಂದೆ-ತಾಯಿಗಳು 'ವರಾಹ'ನನ್ನು ಗುರುಗಳಿಗೆ ಒಪ್ಪಿಸಿದರು. ಎಂಟನೆಯ ವರ್ಷದವನಾಗಿದ್ದಾಗ ಸಂನ್ಯಾಸಾಶ್ರಮವನ್ನು ಕೊಟ್ಟು 'ವಾದಿರಾಜತೀರ್ಥ' ಎಂದು ನಾಮಕರಣ ಮಾಡಿ, ವಾಗೀಶತೀರ್ಥರು ವಾದಿರಾಜರನ್ನು ತಮ್ಮ ಮಠದ ಉತ್ತರಾಧಿಕಾರಿ ಎಂದು ಘೋಷಿಸಿದರು.

ಬಾಲ್ಯದಲ್ಲಿ ವಾದಿರಾಜರ ವಿದ್ಯಾಭ್ಯಾಸ ವಿದ್ಯಾನಿಧಿತೀರ್ಥರ ಬಳಿ ನಡೆಯಿತು. ಅನಂತರ

ವಾಗೀಶತೀರ್ಥರೇ ವಾದಿರಾಜರ ವಿದ್ಯಗುರುಗಳಾದರು. ಅನಂತರ ಆ ಕಾಲದಲ್ಲಿ ಸುಪ್ರಸಿದ್ಧರಾಗಿದ್ದ ವ್ಯಾಸರಾಜರಲ್ಲಿ ವಾದಿರಾಜರು ವಿದ್ಯಾಭ್ಯಾಸ ಮಾಡಿದರು. ವ್ಯಾಸರಾಜ, ವಿಜಯೀಂದ್ರ, ಪುರಂದರದಾಸ, ಕನಕದಾಸ, ವೈಕುಂಠದಾಸ ಮೊದಲಾದವರ ಸಂಪರ್ಕದಲ್ಲಿ, ಕನ್ನಡ ಕೃತಿಗಳ ರಚನೆಯಲ್ಲಿ ಆಸಕ್ತಿಯುಂಟಾಯಿತು. ವ್ಯಾಸರಾಯರಂತೆಯೇ ಶ್ರೀಪಾದರಾಯರ ಪ್ರಭಾವವೂ ವಾದಿರಾಜರ ಮೇಲೆ ಆಗಿತ್ತೆಂಬುದನ್ನು ವಾದಿರಾಜ ವಿರಚಿತ 'ಶ್ರೀಪಾದರಾಜಾಷ್ಟಕ'ದಿಂದ ಅರಿಯಬಹುದು.

ಸೋದೆಯ ರಾಜನಾದ ಅರಸಪ್ಪ ನಾಯಕ ವಾದಿರಾಜರ ವಿಷಯದಲ್ಲಿ ಅತ್ಯಂತ ಗೌರವವುಳ್ಳವನಾಗಿದ್ದನು. ಆತನ ಅಪೇಕ್ಷೆಯಂತೆ ವಾದಿರಾಜರು ಸೋದೆಯನ್ನು ತಮ್ಮ ಧಾರ್ಮಿಕ ಚಟುವಟಿಕೆಗಳ ಕೇಂದ್ರವಾಗಿ ಮಾಡಿಕೊಂಡರು. ಉಡುಪಿಯ ಅಷ್ಟಮಠಗಳಲ್ಲಿ ಒಂದಾದ ವಾಗೀಶತೀರ್ಥರ ಮಠಕ್ಕೆ ಸೋದೆಯ ಮಠ ಎಂಬ ಹೆಸರು ಬಂದಿದ್ದು ಈ ಕಾಲದಲ್ಲೇ. ಸಮಗ್ರ ಭಾರತವನ್ನು ಹಲವು ಬಾರಿ ಸಂಚಾರ ಮಾಡಿದ ವಾದಿರಾಜರು ಸೋದೆ, ಬೀಳಗಿ, ಕೆಳದಿ, ಕೊಡಗು ರಾಜರ ಅಧೀನಕ್ಕೆ ಒಳಪಟ್ಟಿದ್ದ ಪ್ರದೇಶಗಳಲ್ಲಿ ನಿರಂತರವಾಗಿ ಸಂಚಾರ ಮಾಡುತ್ತಿದ್ದರು. ಆ ಪ್ರದೇಶದಲ್ಲಿ ಬಳಕೆಯಲ್ಲಿದ್ದ ಭೂತಾರಾಧಕ ಧರ್ಮಾಚರಣೆಗಳನ್ನು ಸುಸಂಸ್ಕೃತಗೊಳಿಸಿದರು. ಶಿವಾಲಯಗಳನ್ನು ಊರ್ಜಿತಗೊಳಿಸಿ ಶೈವ ಸಂಪ್ರದಾಯದವರಿಗೂ, ವೈಷ್ಣವ ಸಂಪ್ರದಾಯದವರಿಗೂ ಬಾಂಧವ್ಯ ಕಲ್ಪಿಸಿದರು. ಆ ಕಾಲದ ಶೈವ, ಜೈನಧರ್ಮಗಳ ಜನರ ಜೊತೆ ಸೌಹಾರ್ದಯುತವಾಗಿ ಬಾಳುವ ವಾತಾವರಣ ನಿರ್ಮಿಸಿದರು. ಕೋಟ-ಕೋಟೇಶ್ವರದವರು ಶೈವ ಬ್ರಾಹ್ಮಣರು, ಉತ್ತರ ಕರ್ನಾಟಕದ ಅಕ್ಕಸಾಲಿಗರು, ಗೌಡಸಾರಸ್ವತರು ಇವರೆಲ್ಲಾ ವಾದಿರಾಜರ ಶಿಷ್ಯರಾದರು. ಉಡುಪಿಯ ದೇವಾಲಯಗಳ ವಿವಾದವನ್ನು ಬಗೆಹರಿಸಿದ್ದು, ಉಡುಪಿಯ ಪರ್ಯಾಯ ವ್ಯವಸ್ಥೆಯನ್ನು ಜಾರಿಗೆ ತಂದದ್ದು ಇತ್ಯಾದಿ ಸಾಮಾಜಿಕ, ಧಾರ್ಮಿಕ ಕಾರ್ಯಗಳಿಂದ ವಾದಿರಾಜರು ಪ್ರಭಾವಶಾಲಿ ಯತಿಗಳಾದರು. ಅಪಾರ ಪರಿಶ್ರಮ, ನಿರಂತರ ಪ್ರವಾಸ, ವೃದ್ಧಾಪ್ಯಗಳಿಂದ ಹಣ್ಣಾದ ವಾದಿರಾಜರು ತಮ್ಮ ಕಡೆಯ ದಿನಗಳನ್ನು ಸೋದೆಯಲ್ಲಿಯೇ ಕಳೆದರು. ನೂರಿಪತ್ತು ವರ್ಷಗಳ ತುಂಬುಬಾಳನ್ನು ಬಾಳಿ, ಕ್ರಿ.ಶ. ೧೬೦೦ರಲ್ಲಿ ಇವರು ಸಶರೀರಗಳಾಗಿಯೇ ವೃಂದಾವನ ಪ್ರವೇಶ ಮಾಡಿದರೆಂದು ತಿಳಿದು ಬರುತ್ತದೆ.

ವಾದಿರಾಜರು ಸಂಸ್ಕೃತ ಮತ್ತು ಕನ್ನಡ ಎರಡರಲ್ಲಿಯೂ ಕೃತಿಗಳನ್ನು ರಚಿಸಿದ್ದಾರೆ. ಸಂಸ್ಕೃತ ಕೃತಿಗಳಲ್ಲಿ ವ್ಯಾಖ್ಯಾನ ರೂಪವಾದ, ಟಿಪ್ಪಣಿ ರೂಪವಾದ ಶಾಸ್ತ್ರಗ್ರಂಥಗಳು, ಸಾಹಿತ್ಯ ಕೃತಿಗಳು ಮತ್ತು ಸ್ತೋತ್ರಗಳು ಪ್ರಸಿದ್ಧವಾಗಿವೆ. ಯುಕ್ತಿ ಮಲ್ಲಿಕಾ, ಲಕ್ಷಾಭರಣ, ರುಕ್ಮಿಣೀಶ ವಿಜಯ, ತೀರ್ಥಪ್ರಬಂಧ, ಲಕ್ಷಾಲಂಕಾರ ದಶಾವತಾರ ಸ್ತುತಿ ಹೀಗೆ ಸುಮಾರು ಎಪ್ಪತ್ತಕ್ಕೂ ಹೆಚ್ಚು ಪ್ರೌಢ ಕೃತಿಗಳನ್ನು ಸಂಸ್ಕೃತದಲ್ಲಿ ರಚಿಸಿದ್ದಾರೆ. ಕನ್ನಡದಲ್ಲಿಯೂ ಅಷ್ಟೇ ಸಮರ್ಥವಾಗಿ ಹಾಗೂ ಸರಳವಾಗಿ ಅವರ ಇಷ್ಟದೈವ 'ಹಯವದನ'ನ ಅಂಕಿತದಲ್ಲಿ ಬಿಡಿ ಬಿಡಿಯಾಗಿ ಕೀರ್ತನೆ, ಸುಳಾದಿ ಉಗಾಭೋಗಗಳನ್ನು ರಚಿಸಿದ್ದಾರೆ. ಹಾಗೆಯೇ ವೈಕುಂಠ ವರ್ಣನೆ, ಸ್ವಪ್ನಪದ, ಗುಂಡಕ್ರಿಯೆ, ಅವತಾರತ್ರಯ ಸುವ್ವಾಲಿ, ಭ್ರಮರಗೀತೆ, ಲಕ್ಷ್ಮಿಶೋಭಾನೆ ಇವು ನಿರ್ದಿಷ್ಟ ವಿಷಯವೊಂದನ್ನು ಕುರಿತು ಬರೆದ ಕಿರುಕಾವ್ಯಗಳು ಅಥವಾ ದೀರ್ಘಕೀರ್ತನೆಗಳೆಂದು ಕರೆಯಬಹುದು.

ವಾದಿರಾಜರ ಬಿಡಿ ಕೀರ್ತನೆಗಳು ಸುಮಾರು ಮುನ್ನೂರಕ್ಕೂ ಹೆಚ್ಚು ದೊರೆಯುತ್ತವೆ. ಹಲವು ಆಕರಗಳನ್ನು ಶೋಧಿಸಿ ಡಾ॥ ಟಿ. ಎನ್. ನಾಗರತ್ನಾರವರು ವಾದಿರಾಜರ ಕೃತಿಗಳನ್ನು ಪ್ರಕಟಿಸಿದ್ದಾರೆ. ಶ್ರೀಪಾದರಾಜರ, ವ್ಯಾಸರಾಜರ ಕೃತಿಗಳಂತೆಯೇ ವಾದಿರಾಜರ ಕೃತಿಗಳು ಪ್ರೌಢ, ಅರ್ಥಗರ್ಭಿತ ಮತ್ತು ಶಾಸ್ತ್ರ ಸಂಪನ್ನವಾದವು. ಆತ್ಮಶೋಧನೆ, ಪಶ್ಚಾತ್ತಾಪ, ನವವಿಧ ಭಕ್ತಿಗಳ ಪ್ರತಿಪಾದನೆ, ದಾಸ್ಯ, ಸಖ್ಯ, ಮಧುರ, ವಾತ್ಸಲ್ಯ, ಶಾಂತಭಾವಗಳು, ಹರಿನಾಮದ ಹಿರಿಮೆ, ಹರಿದಾಸರ ಹಿರಿಮೆ, ಅವತಾರತ್ರಯಗಳಲ್ಲಿ ನಂಬಿಕೆ, ದಶಾವತಾರ ಸ್ತುತಿ, ತೀರ್ಥಕ್ಷೇತ್ರದ ಸ್ತುತಿ, ವೈರಾಗ್ಯ ದರ್ಶನ, ಲೋಕ ನೀತಿ – ಹೀಗೆ ವಾದಿರಾಜರ ಕೀರ್ತನೆಗಳು ವಿಶಾಲ ಹರಹನ್ನು ಪಡೆದಿವೆ.

### ೨. ೪ ಶ್ರೀ ವಿಜಯೀಂದ್ರ ತೀರ್ಥರು (೧೫೧೭ – ೧೬೧೪)

'ವಿಜಯೀಂದ್ರ ತೀರ್ಥರು ರಾಘವೇಂದ್ರತೀರ್ಥರ ಗುರುಗಳು ಹಾಗೂ ವ್ಯಾಸರಾಯರ ಶಿಷ್ಯರೂ ಆಗಿದ್ದರು. ಇವರ ಪೂರ್ವಾಶ್ರಮದ ನಾಮ ವಿಠಲಾಚಾರ್ಯ ಇವರ ತಂದೆ ಮಧ್ವಪತಿ. ವ್ಯಾಸತೀರ್ಥರು ವಿಠಲಾಚಾರ್ಯರನ್ನು ತಮ್ಮ ಶಿಷ್ಯರನನ್ನಾಗಿ ಸ್ವೀಕರಿಸಿ ಬಾಲ್ಯದಲ್ಲಿಯೇ ಸಂನ್ಯಾಸ ದೀಕ್ಷೆಯನ್ನು ನೀಡಿ ವಿಷ್ಣುತೀರ್ಥರೆಂದು ನಾಮಕರಣ ಮಾಡಿದರು. ಈ ಬಾಲಯತಿ ಪುರಂದರದಾಸ, ವೈಕುಂಠದಾಸ ಮೊದಲಾದವರ ಪ್ರೀತಿ ವಿಶ್ವಾಸಗಳಿಗೂ ಹಾಗೂ ತಮ್ಮ

ಸಹಪಾಠಿಯಾದ ವಾದಿರಾಜರ ಗೌರವಕ್ಕೂ ಪಾತ್ರರಾಗಿದ್ದರು. ಇವರ ತೀಕ್ಷ್ಣವಾದ ಬುದ್ಧಿಶಕ್ತಿ ಪ್ರತಿಭೆಗಳನ್ನು ನೋಡಿ ಸುರೇಂದ್ರತೀರ್ಥರೆಂಬ ಯತಿಗಳು ಇವರನ್ನು ಶಿಷ್ಯರನ್ನಾಗಿ ಸ್ವೀಕರಿಸಲು ಬಯಸಿದರು. ಅವರ ಅಪೇಕ್ಷೆಯಂತೆ ವ್ಯಾಸರಾಯರು ವಿಷ್ಣುತೀರ್ಥರನ್ನು ಸುರೇಂದ್ರತೀರ್ಥರಿಗೆ ಒಪ್ಪಿಸಿದರು. ಸುರೇಂದ್ರತೀರ್ಥರು ವಿಷ್ಣುತೀರ್ಥರಿಗೆ ವಿಜಯೀಂದ್ರತೀರ್ಥರೆಂದು ಪುನರ್‌ನಾಮಕರಣ ಮಾಡಿ ತಮ್ಮ ಪೀಠದ ಉತ್ತರಾಧಿಕಾರಿಗಳೆಂದು ಘೋಷಿಸಿದರು.

ವಿಜಯೀಂದ್ರತೀರ್ಥರು ಪೀಠಾಧಿಪತಿಗಳಾಗಿದ್ದು ೧೫೭೫ರಲ್ಲಿ ಬಹಳ ಕಾಲ ಕುಂಭಕೋಣಂನಲ್ಲಿ ನೆಲೆಸಿದ್ದ ಇವರು ಅನೇಕ ಎದುರಾಳಿಗಳನ್ನು ವಾದದಲ್ಲಿ ಜಯಿಸಿದರು. ಆ ಕಾಲದ ಖ್ಯಾತ ಪಂಡಿತರಾದ ಅಪ್ಪಯ್ಯ ದೀಕ್ಷಿತರನ್ನು ವಾದದಲ್ಲಿ ಸೋಲಿಸಿ ಅವರ ಪ್ರೀತಿ ಆದರಗಳಿಗೆ ಪಾತ್ರರಾದರು. "ಅಜೇಯ ವಿಜಯೀಂದ್ರರೆನಿಸಿ" ಪ್ರಸಿದ್ಧಿ ಪಡೆದರು. ಇವರು ಸಂಸ್ಕೃತದಲ್ಲಿ ೧೦೪ ಕೃತಿಗಳನ್ನು ರಚಿಸಿದ್ದು, ಅವುಗಳ ಪೈಕಿ ೬೦ ಕೃತಿಗಳು ಲಭ್ಯವಿದೆ. ಇಷ್ಟು ದೊಡ್ಡ ಸಂಖ್ಯೆಯ ಕೃತಿಗಳನ್ನು ವಿಜಯೀಂದ್ರತೀರ್ಥರನ್ನು ಬಿಟ್ಟರೆ, ಬೇರೆ ಯಾವ ಮಾಧ್ವ ಯತಿಗಳೂ ರಚಿಸಿಲ್ಲ. ವಿಜಯನಗರದ ಅರಸನಾದ ಅಳಿಯ ರಾಮರಾಯ, ತಂಜಾವೂರಿನ ಚೆನ್ನಪ್ಪನಾಯಕ, ಮಧುರೆಯ ವಿಶ್ವನಾಥನಾಯಕ, ಪಾಂಡ್ಯದೇಶದ ನರಸಿಂಹ ವೀರರಾಮ, ಉಡುಪಿಯ ವಾದಿರಾಜರುಗಳಿಂದ ಸನ್ಮಾನಿತರಾಗಿದ್ದ ವಿಜಯೀಂದ್ರರು ಕುಂಭಕೋಣದ ಅರಸರಿಗೆ ರಾಜಗುರುಗಳಾಗಿದ್ದರು.

ವಿಜಯೀಂದ್ರರ ಪ್ರತಿಭೆ ಹಾಗೂ ವ್ಯಕ್ತಿತ್ವವನ್ನು ಕುರಿತಂತೆ ಗುರುಮಧ್ವಪತಿ ವಿಠಲ ದಾಸರು, ಪ್ರಸನ್ನ ವೆಂಕಟದಾಸರು ಮೊದಲಾದ ಹರಿದಾಸರು ಗೌರವದಿಂದ ತಮ್ಮ ಕೀರ್ತನೆಗಳಲ್ಲಿ ಸ್ತುತಿಸಿದ್ದಾರೆ. ಇವರು ವ್ಯಾಸರಾಜರು ಸ್ಥಾಪಿಸಿದ ಕುಂಭಕೋಣದ ಸರ್ವಜ್ಞ ವಿದ್ಯಾಪೀಠಕ್ಕೆ ಕುಲಪತಿಗಳಾಗಿ ಸಹಸ್ರಾರು ಶಿಷ್ಯರಿಗೆ ವಿದ್ಯಾದಾನ ಮಾಡಿದರು. ಗ್ರಂಥಗಳ ರಚನೆ, ವಿದ್ಯಾಪ್ರಸಾರ, ವಿದ್ವಜ್ಜನರ ಪುರಸ್ಕಾರ, ಸಾಹಿತ್ಯ ಕಲೆಗಳ ಪೋಷಣೆ ಪ್ರತಿವಾದಿಗಳ ನಿಗ್ರಹ ಇವುಗಳಲ್ಲಿ ಮಗ್ನರಾಗಿದ್ದ ವಿಜಯೀಂದ್ರರು ತಮ್ಮ ತೊಂಬತ್ತೇಳನೆಯ ವಯಸ್ಸಿನಲ್ಲಿ ಕಾವೇರಿ ತೀರದ ಕುಂಭಕೋಣದಲ್ಲಿ ಬೃಂದಾವನಸ್ಥರಾದರು.

ವಿಜಯೀಂದ್ರ ತೀರ್ಥರು ತಮ್ಮ ವಿದ್ಯಾಗುರುಗಳಾದ ವ್ಯಾಸರಾಯರಂತೆ ಆ ಕಾಲದ ಘನ

ವಿದ್ವಾಂಸರು, ಕನ್ನಡ, ಸಂಸ್ಕೃತ ಎರಡೂ ಭಾಷೆಗಳಲ್ಲಿ ಪಾಂಡಿತ್ಯ ಹೊಂದಿದ್ದರು. "'ವಿಜಯೀಂದ್ರ ರಾಮ' ಎಂಬ ಅಂಕಿತದಲ್ಲಿ ಇವರು ಕನ್ನಡ ಕೀರ್ತನೆಗಳನ್ನು ರಚಿಸಿ, ಹರಿದಾಸ ಸಾಹಿತ್ಯವನ್ನು ಬೆಳೆಸಿದರೆಂದು ವಿದ್ವಾಂಸರು ಭಾವಿಸುತ್ತಾರೆ."[೧೮] ವಿಜಯೀಂದ್ರತೀರ್ಥರದ್ದೆಂದು ಹೇಳಲಾದ ಎರಡು ಸುಳಾದಿ, ಒಂದು ಉಗಾಭೋಗ ಮಾತ್ರ ನಮಗೆ ಲಭ್ಯವಿದೆ. ಇವರಿಂದ ರಚಿತವಾದ ಕನ್ನಡ ಕೃತಿಗಳ ಶೋಧನೆಯಾದರೆ ಹರಿದಾಸ ಸಾಹಿತ್ಯಕ್ಕೆ ಇವರು ನೀಡಿದ ಕೊಡುಗೆಯನ್ನು ವಿಶ್ಲೇಷಿಸಬಹುದು.

### ೨. ೫ ಶ್ರೀರಾಘವೇಂದ್ರತೀರ್ಥರು (ಕ್ರಿ.ಶ. ೧೫೯೬ – ೧೬೭೧)

ಮಂತ್ರಾಲಯದ ರಾಯರೆಂದೇ ಪ್ರಸಿದ್ಧಿ ಪಡೆದವರು ಶ್ರೀರಾಘವೇಂದ್ರತೀರ್ಥರು. ಇವರ ಮೊದಲ ಹೆಸರು ವೆಂಕಣ್ಣಭಟ್ಟ. ಇವರು ಹುಟ್ಟಿದ್ದು ಕಂಚಿಯ ಸಮೀಪದ ಭುವನಗಿರಿ. ಇವರ ತಂದೆ ವೀಣಾತಿಮ್ಮಣ್ಣಭಟ್ಟರು, ತಾಯಿ ಗೋಪಮ್ಮ.

ವೆಂಕಣ್ಣಭಟ್ಟರು ತಮ್ಮ ತಂದೆ ತಿಮ್ಮಣ್ಣಭಟ್ಟರಂತೆಯೇ ವೀಣೆ ನುಡಿಸುವುದರಲ್ಲಿ ಪ್ರವೀಣರಾಗಿದ್ದರಲ್ಲದೆ, ಶಾಸ್ತ್ರ, ಸಂಗೀತ, ವೇದಾಂತ ವಿದ್ಯೆಯಲ್ಲಿಯೂ ನಿಷ್ಣಾತರಾಗಿದ್ದರು. ಮಧುರೆಯ ಲಕ್ಷ್ಮಿನರಸಿಂಹಾಚಾರ್ಯರಲ್ಲಿ ವ್ಯಾಸಂಗ ಮಾಡಿ ವೇದಾಂತ, ವ್ಯಾಕರಣ ತರ್ಕಶಾಸ್ತ್ರಗಳಲ್ಲಿ ಪಂಡಿತರೆನಿಸಿಕೊಂಡರು. ಆನಂತರ ಕುಂಭಕೋಣದ ಸುಧೀಂದ್ರತೀರ್ಥರಲ್ಲಿ ವ್ಯಾಸಂಗ ಮಾಡುವಾಗ ಗುರುಗಳು ಹೇಳಿದ ಶಾಸ್ತ್ರ ಗ್ರಂಥಗಳ ಪ್ರಮೇಯಗಳನ್ನು ಸಮರ್ಥಿಸಿ 'ಪರಿಮಳ' ಎಂಬ ಗ್ರಂಥ ರಚಿಸಿದರು. ಸುಧೀಂದ್ರತೀರ್ಥಸ್ವಾಮಿಗಳು ಪರಿಮಳ ಗ್ರಂಥದ ಹಿರಿಮೆಯನ್ನು ಪ್ರಶಂಶಿಸಿ ವೆಂಕಣ್ಣಭಟ್ಟರಿಗೆ 'ಪರಿಮಳಾಚಾರ್ಯ' ಎಂಬ ಬಿರುದನ್ನು ನೀಡಿದರು. ವೆಂಕಣ್ಣಭಟ್ಟರ ಪಾಂಡಿತ್ಯ ಪ್ರತಿಭೆಗಳಿಂದ ಸಂತೋಷಗೊಂಡು 'ಮಹಾಭಾಷಾಚಾರ್ಯ' ಎಂಬ ಬಿರುದನ್ನು ನೀಡಿದರು. ವಿದ್ಯಾಭ್ಯಾಸವನ್ನು ಮುಗಿಸಿ ವೆಂಕಣ್ಣಭಟ್ಟರು ಮತ್ತೆ ಭುವನಗಿರಿಗೆ ಹಿಂದಿರುಗಿದರು. ಆ ವೇಳೆಗೆ ಅವರಿಗೆ ಸರಸ್ವತಿ ಎಂಬ ಕನ್ಯೆಯೊಡನೆ ವಿವಾಹವೂ ಆಗಿತ್ತು.

ವೇದ, ಶಾಸ್ತ್ರ, ಸಂಗೀತ, ಕಾವ್ಯ, ವೀಣಾವಾದನ ಇವೆಲ್ಲದರಲ್ಲಿ ನಿಷ್ಣಾತರಾಗಿದ್ದರೂ ವೆಂಕಣ್ಣಭಟ್ಟರಿಗೆ ಬಡತನ ಕಾಡುತ್ತಿತ್ತು. ಜೀವನ ನಿರ್ವಹಣೆಗೂ ಕಷ್ಟವಾಗಿ ಕುಂಭಕೋಣಕ್ಕೆ ಬಂದು ಗುರುಗಳ ಆಶ್ರಯವನ್ನು ಪಡೆದರು. ಮಠದಲ್ಲಿ ಅಧ್ಯಯನ, ಅಧ್ಯಾಪನ ಮಾಡಿಕೊಂಡು

ಜೀವನ ನಿರ್ವಹಿಸಿದರು. ೧೬೨೩ ರುದಿರೋದ್ಗಾರಿ ಸಂವತ್ಸರದಲ್ಲಿ ಸುಧೀಂದ್ರತೀರ್ಥರಿಂದ ಸಂನ್ಯಾಸ ಸ್ವೀಕರಿಸಿ ವೆಂಕಣ್ಣಭಟ್ಟರು ರಾಘವೇಂದ್ರತೀರ್ಥರಾದರು. ಆದ್ವಾನಿಯ ನವಾಬನ ದಿವಾನರಾಗಿದ್ದ ವೆಂಕಣ್ಣನೆಂಬ ಭಕ್ತನ ಮೂಲಕ ಈಗಿನ ಮಂತ್ರಾಲಯ ಪ್ರದೇಶವನ್ನು ಬಳುವಳಿಯಾಗಿ ಪಡೆದು, ಆಧ್ಯಾತ್ಮಿಕ ಜೀವನದಲ್ಲಿ ಅಪೂರ್ವ ನಿಧಿಯನ್ನು ಗಳಿಸಿದರು. ತಮ್ಮ ಕಾರ್ಯಕ್ಷೇತ್ರವನ್ನು ಕುಂಭಕೋಣದಿಂದ ಮಂತ್ರಾಲಯಕ್ಕೆ ವರ್ಗಾಯಿಸಿದರು. ಸಂಸ್ಕೃತದಲ್ಲಿ ಅನೇಕ ಸ್ವತಂತ್ರ ಶಾಸ್ತ್ರ ಗ್ರಂಥಗಳನ್ನು ಕಾವ್ಯಗಳನ್ನು ರಚಿಸಿದರು. ಬ್ರಹ್ಮಸೂತ್ರ, ಭಗವದ್ಗೀತೆ, ಉಪನಿಷತ್ತುಗಳನ್ನು ಕುರಿತು ಮಧ್ವಾಚಾರ್ಯರ ಭಾಷೆಗಳಿಗೂ, ಜಯತೀರ್ಥರ ಟೀಕೆಗಳಿಗೂ ಟಿಪ್ಪಣಿಗಳನ್ನು ರಚಿಸಿ ಟಿಪ್ಪಣಿಕಾರರೆನಿಸಿಕೊಂಡರು. ೧೬೭೧ರಲ್ಲಿ ಮಂತ್ರಾಲಯದಲ್ಲಿ ಸಶರೀರ ಬೃಂದಾವನಸ್ಥರಾಗಿ ಮಂತ್ರಾಲಯದ ಗುರುಸಾರ್ವಭೌಮರೆಂದೇ ಪ್ರಸಿದ್ಧರಾದರು. ವಿಜಯನಗರದ ಪತನಾನಂತರ ಸ್ಥಗಿತವಾಗಿದ್ದ ದಾಸಸಾಹಿತ್ಯ ರಾಘವೇಂದ್ರರ ಪ್ರೇರಣೆಯಿಂದಲೇ ತುಂಗಾತೀರದಲ್ಲಿ ಪುನರುಜ್ಜೀವನ ಪಡೆಯಿತು. ವಿಜಯದಾಸರು, ಗೋಪಾಲದಾಸರು, ಜಗನ್ನಾಥದಾಸರು ಮೊದಲಾದವರು ಬೆಳಕಿಗೆ ಬಂದರು. ರಾಘವೇಂದ್ರತೀರ್ಥರು "ಪುರಂದರದಾಸರ ಗುಂಪಿಗೂ ವಿಜಯದಾಸಾದಿ ಹರಿದಾಸರ ಗುಂಪಿಗೂ, ಮಧ್ಯವರ್ತಿಗಳಾಗಿದ್ದು, ಪರಂಪರೆಯಿಂದ ಬಂದ ದಾಸ ವ್ಯಾಸಕೂಟಗಳ ತಿರುಳನ್ನು ಮುಂದಿನ ಭಕ್ತಿವೃಂದಕ್ಕೆ ನೀಡುವ ಜೀವನಳಿಕೆಯಂತೆ ಆದರು".೧೯

ರಾಘವೇಂದ್ರರು ಕನ್ನಡದಲ್ಲಿ ಅನೇಕ ಕೃತಿಗಳನ್ನು ರಚಿಸಿದ್ದಾರೆ ಎಂದು ಊಹಿಸಬಹುದಾದರೂ ಸದ್ಯಕ್ಕೆ ದೊರೆತಿರುವುದು ಅವರದ್ದೆನ್ನಲಾದ ಒಂದೇ ಒಂದು ಕೀರ್ತನೆ. 'ಧೀರ ವೇಣುಗೋಪಾಲ' ಅಂಕಿತದಲ್ಲಿ ಬರೆದಿರುವ 'ಇಂದು ಎನಗೆ ಗೋವಿಂದ' ಎಂಬ ಆತ್ಮಶೋಧನೆಯ ಕೃತಿ. ಆದವಾನಿ ಪಂಗನಾಮದ ತಿಮ್ಮಣ್ಣದಾಸರ ಅಂಕಿತ 'ವೇಣುಗೋಪಾಲ', 'ಇಂದು ಎನಗೆ ಗೋವಿಂದ' ಕೀರ್ತನೆಯನ್ನು ವೇಣುಗೋಪಾಲಾಂಕಿತದ ಪಂಗನಾಮದ ತಿಮ್ಮಣ್ಣದಾಸರೇ ಬರೆದಿರಬೇಕೆಂಬ ಊಹೆಗಳು ಇವೆ. ಒಂದೇ ಸ್ಥಳ, ಒಂದೇ ಕಾಲ, ಹೆಚ್ಚು ಕಡಿಮೆ ಒಂದೇ ಅಂಕಿತ ಇರುವುದರಿಂದ ಈ ಸಂದೇಹ ಮೂಡುತ್ತದೆ. 'ವೇಣುಗೋಪಾಲ ವಿಠಲ', 'ಧೀರವೇಣುಗೋಪಾಲ ವಿಠಲ' ಈ ಅಂಕಿತದಲ್ಲಿ ಸಾಮ್ಯವಿದ್ದರೂ ಇದು ಬೇರೆ ಬೇರೆ ಎಂದು ಪರಿಭಾವಿಸಿ ಈ ಕೀರ್ತನೆಯನ್ನು ರಾಘವೇಂದ್ರರ ರಚನೆಯೆಂದೇ ಸ್ವೀಕರಿಸಬಹುದು.

ಹರಿದಾಸ ಸಾಹಿತ್ಯವನ್ನು ಪೋಷಿಸಿ ಬೆಳೆಸಿದ ಯತಿಗಳಲ್ಲಿ ರಾಘವೇಂದ್ರ ತೀರ್ಥರೂ ಒಬ್ಬರು. "ಧೀರವೇಣುಗೋಪಾಲ" ಎಂಬ ಅಂಕಿತದಲ್ಲಿ ಬರೆದಿರುವ ಒಂದು ಕೀರ್ತನೆ ಈಗ ದೊರಕುತ್ತದೆ. ಇವರು ಕನ್ನಡದಲ್ಲಿ ಇನ್ನೂ ಅನೇಕ ಕೃತಿಗಳನ್ನು ಬರೆದಿರಬಹುದೆಂದು ಭಾವಿಸಲಾಗಿದೆ. ಅವುಗಳ ಶೋಧನೆ ಆಗಬೇಕಿದೆ. ಅವರು ಕನ್ನಡದಲ್ಲಿ ಬರೆದಿರುವ ಒಂದೇ ಒಂದು ಕೀರ್ತನೆ ಲಭ್ಯವಿದ್ದರೂ, ರಾಘವೇಂದ್ರರನ್ನು ಕುರಿತಂತೆ ಕನ್ನಡದಲ್ಲಿ ಸುಮಾರು ಮುನ್ನೂರಕ್ಕೂ ಹೆಚ್ಚು ಗುರುಸ್ತುತಿಗಳು ದೊರೆಯುತ್ತವೆ. "ರಾಘವೇಂದ್ರರ ಪ್ರೇರಣೆಯಿಂದಲೇ ತಟಸ್ಥವಾಗಿದ್ದ ಹರಿದಾಸ ಸಾಹಿತ್ಯ ತುಂಗಾತೀರ ಪ್ರದೇಶದಲ್ಲಿ ಪುನರುಜ್ಜೀವನ ಪಡೆಯಿತು".[೨೦]

### ೨. ೬ ಶ್ರೀವ್ಯಾಸತತ್ವಜ್ಞತೀರ್ಥರು (೧೭೦೪ – ೧೮೦೦)

ಇವರ ಪೂರ್ವಾಶ್ರಮದ ನಾಮ 'ವೆಂಕಟರಾಮಾಚಾರ್ಯ' ಇವರು ಹುಟ್ಟಿದ್ದು ಗದ್ವಾಲ ಸಂಸ್ಥಾನಕ್ಕೆ ಸೇರಿದ ಐಜಿ ಗ್ರಾಮದಲ್ಲಿ. ಇವರ ತಂದೆ ಶ್ರೇಷ್ಠ ವಿದ್ವಾಂಸರಾದ ವೆಂಕಟನರಸಿಂಹಾಚಾರ್ಯ. ಇವರು ಜನಿಸಿದ್ದು ೧೭೦೪ರಲ್ಲಿ. ಚಿಕ್ಕವಯಸ್ಸಿನಿಂದಲೂ ಬಹಳ ಮುಗ್ಧರಂತೆ ವರ್ತಿಸುತ್ತಿದ್ದ ಇವರಿಗೆ ಮದುವೆಯಾಗಿ ಹೆಣ್ಣು ಮಗುವಿನ ತಂದೆಯಾದರೂ, ಇವರ ಮುಗ್ಧ ಸ್ವಭಾವ ಬದಲಾಗಲಿಲ್ಲ. ತಂದೆ–ತಾಯಿಗಳು ಚಿಂತೆಗೆ ಒಳಗಾದರು. ಪ್ರಸಿದ್ಧ ಜ್ಯೋತಿಷಗಳಾಗಿದ್ದ ಗೋಪಾಲದಾಸರ ಬಳಿ ಬಂದು ತಮ್ಮ ಆತಂಕವನ್ನು ವಿವರಿಸಿದರು. ಗೋಪಾಲದಾಸರು ಅವರಿಗೆ ಅಭಯ ನೀಡಿ "ಪ್ರತಿನಿತ್ಯವೂ ಮಗನನ್ನು ಜೊತೆಯಲ್ಲಿಯೇ ಕೂಡಿಸಿಕೊಂಡು ಎಲ್ಲಾ ಶಾಸ್ತ್ರ ಗ್ರಂಥಗಳನ್ನು ಪಾರಾಯಣ ಮಾಡುತ್ತಾ ಬನ್ನಿ, ಸ್ವಯಂ ಪ್ರತಿಭೆಯಿಂದ ಅವನು ವಿದ್ಯಾಪಾರಂಗತನಾಗುತ್ತಾನೆ"[೨೧] ಎಂದು ತಿಳಿಸಿದರು. ಅವರ ಮಾರ್ಗದರ್ಶನದಂತೆ ಪ್ರತಿದಿನವೂ ಮಗನ ಮುಂದೆ ಶಾಸ್ತ್ರ ಗ್ರಂಥಗಳನ್ನು ಪಾರಾಯಣ ಮಾಡುತೊಡಗಿದರು. ಸ್ವಲ್ಪ ಸಮಯದಲ್ಲೇ ವೆಂಕಟರಾಮಾಚಾರ್ಯರ ಜಡತೆ ಮಾಯವಾಗಿ ಉತ್ತಮ ವಿದ್ವಾಂಸರಾದರು. ದ್ವೈತ ಸಿದ್ಧಾಂತದಲ್ಲಿ ಜ್ಞಾನ ಸಂಪಾದನೆ ಮಾಡಿ, ನೂರಾರು ಮಂದಿ ಶಿಷ್ಯರನ್ನು ಸಂಪಾದಿಸಿಕೊಂಡರು. ತಮ್ಮ ಪಾಠಪ್ರವಚನಗಳಿಗೆ ಪ್ರಶಾಂತ ಸ್ಥಳವನ್ನು ಅರಸಿ, ಐಜಿಯನ್ನು ಬಿಟ್ಟು, ಗದ್ವಾಲ ಸಮೀಪದ ಕೃಷ್ಣನದಿ ತೀರದಲ್ಲಿರುವ "ಬೀಚಪಲ್ಲಿ" ಗ್ರಾಮಕ್ಕೆ ಬಂದು ನೆಲೆಸಿದರು. ಇವರು ಐಜಿ ಗ್ರಾಮದಿಂದ ಬಂದ ಕಾರಣ ಇವರನ್ನು ಐಜಿ ಆಚಾರ್ಯರೆಂದೇ ಕರೆಯುತ್ತಿದ್ದರು.

ಬೀಚಪಲ್ಲಿಯಲ್ಲಿ ಶ್ರೀ ವ್ಯಾಸರಾಜ ಯತಿಗಳು ಪ್ರತಿಷ್ಠಾಪಿಸಿದ ಪ್ರಾಣದೇವರ ದೇವಾಲಯವಿದೆ. ಇದೇ ಸನ್ನಿಧಿಯಲ್ಲಿ ಆಚಾರ್ಯರು ಮಂದನಂದಿನಿ, ಮಾನಸಸ್ಮೃತಿ, ಸುಧಾದ್ಯುಕ್ತಿ ರಹಸ್ಯ ಮುಂತಾದ ಸಂಸ್ಕೃತ ಕೃತಿಗಳನ್ನು ಹಾಗೂ ಅನೇಕ ಶಾಸ್ತ್ರಗ್ರಂಥಗಳನ್ನು ರಚಿಸಿದರು. 'ವಾಸುದೇವ ವಿಠಲ' ಅಂಕಿತದಿಂದ ಕನ್ನಡದಲ್ಲಿ ಕೀರ್ತನೆ, ಸುಳಾದಿಗಳನ್ನು ರಚಿಸಿದರು. ಹನ್ನೆರಡು ವರ್ಷಕಾಲ ಬೀಚಪಲ್ಲಿಯಲ್ಲಿ ನೆಲೆಸಿ ಅನಂತರ ತುಂಗಭದ್ರಾ ತೀರದ ವೇಣಿಸೋಮಪುರಕ್ಕೆ ಬಂದರು. ಗದ್ವಾಲದ ರಾಜ ಸೋಮಭೂಪಾಲ ಆಚಾರ್ಯರಿಗೆ ಬೇಕಾದ ಎಲ್ಲಾ ಸೌಲಭ್ಯಗಳನ್ನು ನೀಡಿದ, ಗ್ರಂಥಗಳ ರಚನೆ, ಶಾಸ್ತ್ರ ಗ್ರಂಥಗಳ ಅಧ್ಯಯನ, ಅಧ್ಯಾಪನ, ದೇವತಾರ್ಚನೆ ಇವುಗಳಲ್ಲಿ ತೊಡಗಿದ ಆಚಾರ್ಯರು ವೇಣಿಸೋಮಪುರವನ್ನು ಪಂಡಿತರ ಅಗ್ರಹಾರವನ್ನಾಗಿ ಪರಿವರ್ತಿಸಿದರು. ಈ ಮಧ್ಯೆ ಅವರಿಗೆ ಪತ್ನಿ ವಿಯೋಗವಾಗಿ ಎರಡನೇ ವಿವಾಹವಾಯಿತು.

ಐಜಿ ಆಚಾರ್ಯರಲ್ಲಿ ಶಾಸ್ತ್ರಾಧ್ಯಯನ ಮಾಡಲು ಗೋಪಾಲದಾಸರ ತಮ್ಮಂದಿರಾದ ಸೀನಪ್ಪದಾಸರು, ದಾಸಪ್ಪದಾಸರು, ಮತ್ತು ರಂಗಪ್ಪದಾಸರು ಬಂದರು. ಅಡವಿ ಆಚಾರ್ಯರೆಂದು ಪ್ರಸಿದ್ಧರಾದ ವಿಷ್ಣುತೀರ್ಥರೂ ಸಹ ಐಜಿ ಆಚಾರ್ಯರ ಶಿಷ್ಯರಾದರು. ಐಜಿ ಆಚಾರ್ಯರ ಕೀರ್ತಿ ಎಲ್ಲೆಡೆ ವ್ಯಾಪಿಸಿ, ಅವರ ಶಿಷ್ಯ ಪ್ರಶಿಷ್ಯರ ಸಂಖ್ಯೆ ದಿನದಿಂದ ದಿನಕ್ಕೆ ಬೆಳೆಯುತ್ತಿದ್ದವು. ಒಮ್ಮೆ ಆಚಾರ್ಯರಿಗೆ ಸ್ವಪ್ನವಾಯಿತು ಅದರಂತೆ ಅವರು ವಲ್ಲೂರು ಕೆರೆ ತೂಬಿನ ಕೆಳಗೆ ದೊರೆತ ಎರಡು ಗೋಪಾಲಕೃಷ್ಣ ವಿಗ್ರಹಗಳಲ್ಲಿ ಒಂದನ್ನು ವಲ್ಲೂರಿನಲ್ಲಿ ಮತ್ತೊಂದನ್ನು ವೇಣಿಸೋಮಪುರದಲ್ಲಿ ಪ್ರತಿಷ್ಠಾಪಿಸಿದರು. ಗದ್ವಾಲ ರಾಜರ ಸಹಾಯದಿಂದ ದೇವಸ್ಥಾನವನ್ನು ನಿರ್ಮಿಸಿದರು. ಆಚಾರ್ಯರ ಶಿಷ್ಯರು, ವಿದ್ವಾಂಸರು, ಹರಿದಾಸರುಗಳಿಗೆ ಕೇಂದ್ರವಾದ ವೇಣುಗೋಪಾಲನ ದೇವಸ್ಥಾನ ಒಂದು ಹರಿದಾಸ ಕೇಂದ್ರವೇ ಆಯಿತು.

ಐಜಿ ಆಚಾರ್ಯರು ಮಹಾವೈರಾಗ್ಯಶಾಲಿಗಳಾಗಿ ತಮ್ಮ ಎಪ್ಪತ್ತಾರನೇ ವಯಸ್ಸಿನಲ್ಲಿ ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿದರು. ತುಂಗಭದ್ರಾನದಿಯ ದಂಡೆಯಲ್ಲಿ ಸಣ್ಣ ಕುಟೀರವನ್ನು ನಿರ್ಮಿಸಿ ಗೆಡ್ಡೆಗೆಣಸುಗಳನ್ನು ಸೇವಿಸುತ್ತಾ ಜೀವಿಸಿದರು. ಅದೇ ಸಮಯಕ್ಕೆ ರಾಘವೇಂದ್ರ ಮಠದ ಭುವನೇಂದ್ರತೀರ್ಥರು ವೇಣಿಸೋಮಪುರಕ್ಕೆ ಬಂದರು. ಆಚಾರ್ಯರು ಶ್ರೀಪಾದರನ್ನು ಭೇಟಿಯಾಗಿ ತಮಗೆ ಯತ್ಯಾಶ್ರಮವನ್ನು ನೀಡಬೇಕೆಂದು ಕೇಳಿಕೊಂಡರು. ಭುವನೇಂದ್ರತೀರ್ಥರು ಐಜಿ ಆಚಾರ್ಯರಿಗೆ "ವ್ಯಾಸತತ್ವಜ್ಞ ತೀರ್ಥ"ರೆಂಬ ಹೆಸರಿನಲ್ಲಿ ಯತ್ಯಾಶ್ರಮ

ನೀಡಿದರು. ಯತ್ಯಾಶ್ರಮ ಸ್ವೀಕರಿಸಿದರೂ ಪೀಠಾಧಿಪತ್ಯವನ್ನು ವಹಿಸಲು ಇಚ್ಛೆಪಡದ ವ್ಯಾಸತತ್ವಜ್ಞರು ಸ್ವಲ್ಪಕಾಲ ತಮ್ಮ ಗುರುಗಳ ಸಾನ್ನಿಧ್ಯದಲ್ಲಿ ಮಂತ್ರಾಲಯದಲ್ಲಿ ತಂಗಿದ್ದರು. ಆನಂತರ ಪುನಃ ವೇಣಿಸೋಮಪುರಕ್ಕೆ ಬಂದರು. ಪೀಠಾಧಿಪತ್ಯಕ್ಕೆ, ಅಧಿಕಾರಕ್ಕೆ ಆಸೆಪಡದೆ ವೇಣಿಸೋಮಪುರದಲ್ಲಿ ಹರಿದಾಸರ ಒಡನಾಟದಲ್ಲಿ ಪೂಜೆ, ತಪಸ್ಸುಗಳಲ್ಲಿ ನಿರತರಾದರು. ಯತ್ಯಾಶ್ರಮವನ್ನು ಪಡೆದಾಗ ವೃದ್ಧಾಪ್ಯ ಆವರಿಸಿತು. "'ಏಳಲಾರೆನು ವೃದ್ಧ ಏಳಲಾರೆ' ಎಂಬ ಪರಿಸ್ಥಿತಿ ತಲುಪಿದ್ದರು. ವೈರಾಗ್ಯದ ತುತ್ತತುದಿಗೇರಿದ ಅವರು ಬಯಸಿದ್ದು 'ವಾಸುದೇವ ವಿಠಲನ ಒಲುಮೆ'ಯೊಂದನ್ನು ಮಾತ್ರ."[೨೨]

ವ್ಯಾಸತತ್ವಜ್ಞರು 'ಪವಾಡಪುರುಷ'ರೆಂದೇ ಆ ಕಾಲದ ಜನ ತಿಳಿದಿದ್ದರು. ಅವರು ಯತಿಗಳಾಗುವುದಕ್ಕೆ ಮುಂಚೆ ಹಾಗೂ ಯತಿಗಳಾದ ಮೇಲೆ ಅನೇಕ ಪವಾಡಗಳು ಅವರ ಜೀವನದೊಂದಿಗೆ ಹೆಣೆದುಕೊಂಡಿದೆ. ಸ್ವಪ್ನದಲ್ಲಿ ಕಾಣಿಸಿಕೊಂಡ ವೇಣುಗೋಪಾಲನನ್ನು ವೇಣಿಸೋಮಪುರಕ್ಕೆ ತಂದು ಪ್ರತಿಷ್ಠಾಪಿಸಿದ್ದು, ಮಗನಿಗೆ ಬಂದ ಅಕಾಲಮೃತ್ಯುವನ್ನು ಪರಿಹಾರ ಮಾಡಿದ್ದು, ಅಡವಿ ಆಚಾರ್ಯರಿಗೆ ಪಾದುಕೆ ಮಾಡಿದ ಪವಾಡ, ಉತ್ತರ ಭಾರತದಿಂದ ಬಂದಿದ್ದ ಪ್ರತಿವಾದಿಯೊಬ್ಬನನ್ನು ತಮಗೆ ನೀರನ್ನು ಒದಗಿಸುತ್ತಿದ್ದ ನರಸಪ್ಪ ಎಂಬ ಸಾಮಾನ್ಯ ಸೇವಕನಿಂದ ವ್ಯಾಕ್ಯಾರ್ಥಮಾಡಿ ಪರಾಜಯಗೊಳಿಸಿದ ಘಟನೆ, ಮುಡಮಾಲಿ ದೇಸಾಯಿಯವರ ಉದರ ವ್ಯಾಧಿ ನಿವಾರಣೆ, ದಂಡದ ಗೆರೆಯರಸಿ ತುಂಗಭದ್ರಾನದಿಯನ್ನು ಮನೆಯವರೆಗೂ ಬರಮಾಡಿಕೊಂಡದ್ದು, ತಿರುಪತಿಯಲ್ಲಿ ತೋರಿದ ಮಹಿಮೆ, ಮಂತ್ರಾಕ್ಷತೆ ಮಹಿಮೆ, ಗೋಪಾಲಕೃಷ್ಣನ ಸಂದರ್ಶನ ಮಾಡಿ ಹಾಡಿದ್ದು, ಹಂಪೆಯ ವಿರೂಪಾಕ್ಷ ರಥವನ್ನು ರಕ್ಷಿಸಿದ್ದು, ಗದ್ವಾಲದ ರಾಜನ ಆಪತ್ತು ಪರಿಹರಿಸಿದ್ದು, ಹೀಗೆ ಅನೇಕ ಪವಾಡಗಳು ಅವರ ಜೀವನದೊಂದಿಗೆ ಹೊಂದುಕೊಂಡಿದೆ. ಅವರು ತೋರಿದ ಹಲವು ಮಹಿಮೆಗಳು ಮೇಲ್ನೋಟಕ್ಕೆ ಪವಾಡಗಳಂತೆ ಗೋಚರಿಸಿದರೂ ಅವರು ತೋರಿಕೆಗಾಗಿ ಮಾಡಿದ ಪ್ರಚಾರವಲ್ಲ. ತೀರ ಸಹಜವೆಂಬಂತೆ ಅವರು ತೋರಿದ ಕರುಣೆಯೇ ಪವಾಡಗಳೆನಿಸಿತು.

ವ್ಯಾಸತತ್ವಜ್ಞರು ತಮ್ಮ ಸಮಕಾಲೀನ ಸಮಾಜದಲ್ಲಿ ಉನ್ನತ ಶ್ರೇಣಿಯ ಪಂಡಿತರಾಗಿ, ದೈವಭಕ್ತರಾಗಿ, ಶ್ರೇಷ್ಠಯತಿಗಳಾಗಿ ಮಹನೀಯರೆನಿಸಿದ್ದರು. ಯತ್ಯಾಶ್ರಮದ ಪೂರ್ವದಲ್ಲಿ

'ವಾಸುದೇವ ವಿಠಲ' ಎಂಬ ಅಂಕಿತನಾಮದಿಂದ ಕೀರ್ತನೆಗಳನ್ನು ರಚಿಸುತ್ತಿದ್ದ ಇವರು, ಯತ್ಯಾಶ್ರಮವನ್ನು ಸ್ವೀಕರಿಸಿದ ಮೇಲೆಯೂ ವಾಸುದೇವ ವಿಠಲ ಅಂಕಿತದಲ್ಲಿಯೇ ತಮ್ಮ ಕೀರ್ತನೆಗಳನ್ನು ಮುಂದುವರೆಸಿದರು. ಸುಮಾರು ತೊಂಭತ್ತು ಕೀರ್ತನೆ, ಉಗಾಭೋಗ ಸುಳಾದಿಗಳು ದೊರೆಯುತ್ತವೆ. ತೊಂಭತ್ತಾರು ವರ್ಷಗಳ ತುಂಬು ಜೀವನ ನಡೆಸಿದ ವ್ಯಾಸತತ್ವಜ್ಞ ತೀರ್ಥರು ೧೮೦೦ರಲ್ಲಿ ಸ್ವರ್ಗಸ್ಥರಾದರೆಂದು ಜಗನ್ನಾಥದಾಸರು ತಿಳಿಸುತ್ತಾರೆ.

### ೨. ೭ ಶ್ರೀವಿದ್ಯಾರತ್ನಾಕರ ತೀರ್ಥರು (೧೮೩೭ – ೧೯೧೫)

ವ್ಯಾಸರಾಜರ ಹಾದಿಯನ್ನೇ ಅನುಸರಿಸಿ ಕನ್ನಡ ಮತ್ತು ಸಂಸ್ಕೃತ ಎರಡೂ ಭಾಷೆಗಳಲ್ಲಿ ಕೃತಿರಚನೆ ಮಾಡಿದವರು ವಿದ್ಯಾರತ್ನಾಕರ ತೀರ್ಥರು. ಇವರ ಮೊದಲ ಹೆಸರು ತೆಕ್ಕಲೂರು ಅಹೋಬಲಾಚಾರ್ಯರು. ಚಿಕ್ಕಂದಿನಿಂದಲೇ ಸಾಹಿತ್ಯ, ಕಾವ್ಯ, ನಾಟಕಗಳಲ್ಲಿ ಆಸಕ್ತಿ ಹೊಂದಿದ್ದ ಇವರನ್ನು ಗಮನಿಸಿದ ವಿದ್ಯಾಕಾಂತತೀರ್ಥರು, ಸೋಸಲೆ ಗರಳಪುರಿಶಾಸ್ತ್ರಿಗಳಿಂದಲೂ, ಪಂಡಿತ ಭೀಮಾಚಾರ್ಯರಿಂದಲೂ ಶಿಕ್ಷಣ ಕೊಡಿಸಿದರು. ಅಹೋಬಲಾಚಾರ್ಯರು ಗುರುಗಳ ಮಾರ್ಗದರ್ಶನದಲ್ಲಿ ಸಾಹಿತ್ಯ, ವ್ಯಾಕರಣ, ಛಂದಸ್ಸು ಇವುಗಳ ಅಧ್ಯಯನ ನಡೆಸಿದರು ಕನ್ನಡ ಮತ್ತು ಸಂಸ್ಕೃತಗಳಲ್ಲಿ ಕೀರ್ತನೆಗಳನ್ನು ರಚಿಸಿದರು.

ಜೀವನದಲ್ಲಿ ಸಾಕಷ್ಟು ತೊಂದರೆಗಳನ್ನು ಅನುಭವಿಸಿದ ಆಚಾರ್ಯರಿಗೆ ಸಹಜವಾಗಿ ವೈರಾಗ್ಯ ಬಂದಿತ್ತು. ಇದೇ ಸಮಯದಲ್ಲಿ ವ್ಯಾಸರಾಜ ಮಠದ ಯತಿಗಳಾಗಿದ್ದ ವಿದ್ಯಾಸಮುದ್ರತೀರ್ಥರಿಗೆ ಅನಾರೋಗ್ಯ ಉಂಟಾಗಿ ಮಠಕ್ಕೆ ಉತ್ತರಾಧಿಕಾರಿಗಳನ್ನು ನೇಮಿಸುವ ಸಂದರ್ಭ ಬಂತು. ಮೈಸೂರು ರಾಜ್ಯದ ದಿವಾನರಾಗಿದ್ದ ಸರ್.ಪಿ.ಎನ್. ಕೃಷ್ಣಮೂರ್ತಿ ಅವರು ಮತ್ತು ಅನೇಕ ಶಿಷ್ಯರುಗಳು ಈ ಸ್ಥಾನಕ್ಕೆ ಅಹೋಬಲಾಚಾರ್ಯರೇ ಸಮರ್ಥರೆಂದು ನಿರ್ಧರಿಸಿದರು. ಆದರೆ ಲೌಕಿಕ ವ್ಯವಹಾರಗಳಲ್ಲಿ ಸಂಪೂರ್ಣ ಅನಾಸಕ್ತರಾಗಿದ್ದ ಆಚಾರ್ಯರು ಇದನ್ನು ನಿರಾಕರಿಸಿದರು. ಮಠದ ಹಣಕಾಸಿನ ವ್ಯವಹಾರ ಆಡಳಿತ ಇತ್ಯಾದಿ ವ್ಯವಹಾರಗಳನ್ನು ಅರಮನೆಯವರೇ ನೋಡಿಕೊಳ್ಳುತ್ತಾರೆ. ಆಚಾರ್ಯರು ತಮ್ಮ ಸಮಯವನ್ನು ಸಂಪೂರ್ಣವಾಗಿ ಆಧ್ಯಾತ್ಮಿಕ ಕೆಲಸಗಳಲ್ಲಿ ತೊಡಗಿಸಬಹುದೆಂದು ದಿವಾನರು ಮಾತುಕೊಟ್ಟ ಮೇಲೆ ಆಚಾರ್ಯರು ಒಪ್ಪಿಗೆ ಕೊಟ್ಟರು.

"'ವಿದ್ಯಾರತ್ನಾಕರ ತೀರ್ಥ'ರೆಂಬ ಅಭಿದಾನದಿಂದ ಯತ್ಯಾಶ್ರಮ ಸ್ವೀಕರಿಸಿದರು. ಇವರ ಕಾಲದಲ್ಲಿ ವ್ಯಾಸರಾಜ ಮಠದಲ್ಲಿ ಉತ್ತಮ ಸಾಂಸ್ಕೃತಿಕ ವಾತಾವರಣ ಉಂಟಾಯಿತು. ದೇಶ-ವಿದೇಶಗಳಿಂದ ವಿದ್ವಾಂಸರು ಮಠಕ್ಕೆ ಆಗಮಿಸಿ ಜ್ಞಾನ ಕಾರ್ಯದಲ್ಲಿ ಭಾಗವಹಿಸುತ್ತಿದ್ದರು."[೨೩] ವಿದ್ಯಾರತ್ನಾಕರತೀರ್ಥರು ಸಂಸ್ಕೃತದಲ್ಲಿ ಅನೇಕ ಸ್ತೋತ್ರಗಳನ್ನು ಬರೆದಿದ್ದಾರೆ. ಮಧ್ವಾಚಾರ್ಯರು ವ್ಯಾಸರಾಯರು, ಶೇಷಚಂದ್ರಿಕಾಚಾರ್ಯರ ಸ್ತವನಗಳು ದಶಾವತಾರ ಸ್ತುತಿ, ಹರಿಗುರು ಮಂಗಳಾಷ್ಟಕ, ಇವುಗಳನ್ನು ರಚಿಸಿದ್ದಾರೆ. ಇವರು ತಮ್ಮ ಪ್ರತಿಭೆಯನ್ನು ಸಂಸ್ಕೃತಕ್ಕೆ ಮಾತ್ರ ಮೀಸಲಿರಿಸದೆ, ತಾವು ನಂಬಿದ್ದ ಮಾಧ್ವ ತತ್ವಗಳನ್ನು ಕನ್ನಡದಲ್ಲಿ ಅಷ್ಟೇ ಸಮರ್ಥವಾಗಿ ನಿರೂಪಿಸಿದ್ದಾರೆ. ಒಂಭತ್ತು ವರ್ಷಗಳ ಕಾಲ ಮಠಾಧಿಪತಿಗಳಾಗಿದ್ದ ಇವರು ೧೯೧೫ರಲ್ಲಿ ಬೃಂದಾವನಸ್ಥರಾದರು.

ಹರಿದಾಸ ಪರಂಪರೆಯನ್ನು ಬೆಳೆಸಿ ಪೋಷಿಸಿದ ಪ್ರಮುಖ ಯತಿಗಳಲ್ಲಿ ವಿದ್ಯಾರತ್ನಾಕರತೀರ್ಥರು ಪ್ರಮುಖರು. ವ್ಯಾಸರಾಜರು ಸಂಸ್ಕೃತಕ್ಕೆ ಕೊಟ್ಟಷ್ಟೇ ಪ್ರಾಮುಖ್ಯವನ್ನು ಕನ್ನಡ ಭಾಷೆಗೂ ಕೊಟ್ಟು, ವ್ಯಾಸಕೂಟದಷ್ಟೇ ಮನ್ನಣೆಯನ್ನು ದಾಸಕೂಟಕ್ಕೂ ಕೊಟ್ಟರು. ಆದರೆ ವ್ಯಾಸರಾಜ ಮಠದಲ್ಲಿ ವ್ಯಾಸರಾಯರ ನಂತರ ಬಂದ ಯತಿಗಳಲ್ಲಿ ವ್ಯಾಸರಾಜರು ತೋರಿದ ಕನ್ನಡ ಭಾಷಾಭಿಮಾನ ಕ್ರಮೇಣ ಕಡಿಮೆಯಾಗುತ್ತ ಬಂದು, ಶಾಸ್ತ್ರಾಧ್ಯಯನ ಮತ್ತು ಸಂಸ್ಕೃತ ಪಾಂಡಿತ್ಯಕ್ಕೆ ಮಾತ್ರ ಮೀಸಲಾದವು. ವಿದ್ಯಾಕಾಂತ ತೀರ್ಥರು ಮತ್ತು ವಿದ್ಯಾರತ್ನಾಕರತೀರ್ಥರು ಮತ್ತೆ ಪ್ರಾರಂಭಿಸಿದ ಕೀರ್ತನೆಗಳ ರಚನೆ, ವಿದ್ಯಾಪ್ರಸನ್ನ ತೀರ್ಥರಿಂದ ಮತ್ತಷ್ಟು ವಿಸ್ತಾರವಾಯಿತು.

### ೨. ೮ ವಿದ್ಯಾಪ್ರಸನ್ನ ತೀರ್ಥರು (೧೯೪೫-೧೯೬೯)

'ವಿದ್ಯಾಪ್ರಸನ್ನ ತೀರ್ಥರ ಪೂರ್ವಾಶ್ರಮದ ಹೆಸರು ತೆಕ್ಕಲೂರು ವೆಂಕಟನರಸಿಂಹಾಚಾರ್ಯ. ಇವರ ಜನ್ಮ ಸ್ಥಳ ಸೋಸಲೆ. ಇವರ ತಂದೆ ಸಂಸ್ಕೃತ ಪಂಡಿತರಾದ ಅಹೋಬಲಾಚಾರ್ಯರು. ತಾಯಿ ಸತ್ಯಭಾಮಮ್ಮ ೧೯೦೮ರಲ್ಲಿ ಅಹೋಬಲಾಚಾರ್ಯರು ವಿದ್ಯಾರತ್ನಾಕರತೀರ್ಥರಾಗಿ ವ್ಯಾಸರಾಜ ಮಠದ ಯತಿಗಳಾಗುವ ಸಂದರ್ಭ ಒದಗಿಬಂತು. ಆಗ ಮಗ ವೆಂಕಟನರಸಿಂಹನ ಜವಾಬ್ದಾರಿ ತಾಯಿ ಸತ್ಯಭಾಮಮ್ಮನವರ ಮೇಲೆ ಬಿತ್ತು. ಲೌಕಿಕ ದೃಷ್ಟಿಯಿಂದ ಲಾಭದಾಯಕವಲ್ಲದ ಸಂಸ್ಕೃತ ಶಾಸ್ತ್ರಾಧ್ಯಯನದಲ್ಲಿ ಮಗನನ್ನು ತೊಡಗಿಸುವ ಆಸಕ್ತಿ

ಸತ್ಯಭಾಮಮ್ಮನವರಿಗೆ ಇರಲಿಲ್ಲ. ಬದಲಾಗಿ ಇಂಗ್ಲೀಷ್ ವಿದ್ಯಾಭ್ಯಾಸ ಕೊಡಿಸಿ, ಲಾಭದಾಯಕ ವೃತ್ತಿಗೆ ಸೇರಿಸಿ ಅವನನ್ನು ಹಣಗಳಿಸುವಂತೆ ಮಾಡಬೇಕೆಂಬುದು ಅವರ ಆಸೆಯಾಗಿತ್ತು. ಮಗನ ವಿದ್ಯಾಭ್ಯಾಸದ ದೃಷ್ಟಿಯಿಂದ ಸತ್ಯಭಾಮಮ್ಮ ಮೈಸೂರಿನಲ್ಲಿ ನೆಲೆಸಿದರು. ಈ ವೇಳೆಗಾಗಲೇ ಆ ಕಾಲದ ಸಂಪ್ರದಾಯದಂತೆ ಹದಿನೈದನೆಯ ವಯಸ್ಸಿನಲ್ಲಿ ಅವರ ವೆಂಕಟನರಸಿಂಹ ಅವರ ಅಕ್ಕನ ಮಗಳಾದ ಲಕ್ಷ್ಮಿಯನ್ನು ವಿವಾಹವಾದರು. ವೆಂಕಟನರಸಿಂಹಾಚಾರ್ಯರು ತಮ್ಮ ತಾಯಿಯ ಬಯಕೆಯಂತೆ ಬಿ.ಎ., ಬಿ.ಎಲ್. ಪದವಿಯನ್ನು ಪಡೆದು ೧೯೨೫ರಲ್ಲಿ ಸ್ವಂತಂತ್ರವಾಗಿ ವಕೀಲಿವೃತ್ತಿಯನ್ನು ಪ್ರಾರಂಭಿಸಿದರು. ಪ್ರತಿಭಾವಂತ ನ್ಯಾಯವಾದಿಗಳಾಗಿ ಕೆಲವೇ ವರ್ಷಗಳಲ್ಲಿ ತರುಣ ವಕೀಲರ ಪಂಕ್ತಿಯಲ್ಲಿ ಅಗ್ರರೆನಿಸಿದರು.

ವಿದ್ಯಾರತ್ನಾಕರತೀರ್ಥರು ಬೃಂದಾವನಸ್ಥರಾದ ಮೇಲೆ ವಿದ್ಯಾವಾರಿಧಿತೀರ್ಥರು ವ್ಯಾಸರಾಜಮಠದ ಉತ್ತರಾಧಿಕಾರಿಯಾದರು. ವೆಂಕಟನರಸಿಂಹಾಚಾರ್ಯರು ತಮ್ಮ ವಕೀಲಿ ವೃತ್ತಿಯ ಜೊತೆಗೆ ವ್ಯಾಸರಾಜಮಠದ ಕಾನೂನು ವ್ಯವಹಾರಗಳನ್ನು ನೋಡಿಕೊಳ್ಳುತ್ತಿದ್ದರು. ಈ ಎಲ್ಲಾ ಲೌಕಿಕ ಕೆಲಸಗಳ ಜೊತೆಗೆ ತಮ್ಮ ಬಿಡುವಿನ ವೇಳೆಯಲ್ಲಿ ವಿದ್ವಾಂಸರಾದ ನೆರೂರು ಕೃಷ್ಣಾಚಾರ್ಯರಿಂದ ಶಾಸ್ತ್ರಾಭ್ಯಾಸವನ್ನು ಮಾಡುತ್ತಿದ್ದರು. ೧೯೩೫ರಲ್ಲಿ ವ್ಯಾಸರಾಜಮಠದ ಯತಿಗಳಾಗಿದ್ದ ಶ್ರೀವಿದ್ಯಾವಾರಿಧಿತೀರ್ಥರ ದೇಹಸ್ಥಿತಿ ವಿಷಮಗೊಂಡಿತು. ತಮ್ಮ ಗುರುಗಳ ಪುತ್ರರಾದ ನರಸಿಂಹಾಚಾರ್ಯರ ಕಾರ್ಯವೈಖರಿ, ಲೌಕಿಕ ಜ್ಞಾನ, ಆಧ್ಯಾತ್ಮಿಕ ಆಸಕ್ತಿಗಳನ್ನು ಗಮನಿಸಿದ್ದ ಶ್ರೀಗಳು ತಮ್ಮ ಉತ್ತರಾಧಿಕಾರಿಗಳಾಗಲು ನರಸಿಂಹಾಚಾರ್ಯರೇ ಸಮರ್ಥರೆಂದು ತೀರ್ಮಾನಿಸಿ, ಅವರನ್ನು ಒಪ್ಪಿಸುವಲ್ಲಿ ಯಶಸ್ವಿಯಾದರು.

ನರಸಿಂಹಾಚಾರ್ಯರ ಜೀವನದಲ್ಲಿ ಅತ್ಯಂತ ಮಹತ್ವಪೂರ್ಣವಾದ ತಿರುವಿನ ಘಟ್ಟವೆಂದರೆ ಅವರು ಯತ್ಯಾಶ್ರಮವನ್ನು ಸ್ವೀಕರಿಸಿದ್ದು, ಯತ್ಯಾಶ್ರಮ ಸ್ವೀಕರಿಸುವ ಮುನ್ನ ಸಾಕಷ್ಟು ಒಳತೋಟಿಯನ್ನು ಅನುಭವಿಸಿದರು. ಬಡತನದಲ್ಲಿ ಬೆಳೆದು ಕಷ್ಟಪಟ್ಟು ಸಂಪಾದಿಸಿದ್ದ ಅಧಿಕಾರ, ಹಣ ಇವುಗಳನ್ನುತ್ಯಜಿಸುವ ಸಂದರ್ಭ ಬರಬಹುದೆಂದು ಅವರು ಊಹಿಸಿರಲಿಲ್ಲ. ಲೌಕಿಕ ಸುಖಗಳನ್ನು ತಕ್ಷಣವೇ ತ್ಯಜಿಸಿ ಯತ್ಯಾಶ್ರಮಕ್ಕೆ ಒಪ್ಪಿಗೆ ನೀಡಿದರು. ಅನಂತರ ವ್ಯಾಸರಾಜ ಮಠದ ಪಂಡಿತರ ಮುಖೇನ ಶಾಸ್ತ್ರ, ಸಾಹಿತ್ಯ ಮತ್ತು ಸಿದ್ಧಾಂತಗಳನ್ನು ಗಂಭೀರವಾಗಿ ಅಧ್ಯಯನ ಮಾಡಿದರು. ಇದೇ ಸಮಯದಲ್ಲಿ ಸುಪ್ತವಾಗಿದ್ದ ಅವರ ಸಾಹಿತ್ಯ ಪ್ರತಿಭೆ ಹಾಡುಗಳಾಗಿ

ಹೊಮ್ಮಿತು.

ವಿದ್ಯಾಪ್ರಸನ್ನ ತೀರ್ಥರು ಸುಮಾರು ಮುನ್ನೂರು ಕೀರ್ತನೆಗಳನ್ನು ರಚಿಸಿದ್ದಾರೆ. ತಾವು ರಚಿಸಿದ ಕೀರ್ತನೆಗಳನ್ನು ತಾವೇ ಸ್ವತಃ ಹಾಡಿ ಇತರರಿಗೂ ಹಾಡುವುದನ್ನು ಕಲಿಸುತ್ತಿದ್ದ ಇವರ ಹಾಡುಗಳು ಬಹಳ ಬೇಗ ಜನ ಮನ್ನಣೆಯನ್ನು ಪಡೆಯಿತು. ಲೌಕಿಕ ವಿಷಯಗಳಿಗೆ ಆಧ್ಯಾತ್ಮಿಕ ಅರ್ಥ ನೀಡಿ, ಕೃತಿಗಳನ್ನು ರಚಿಸುವುದು ವಿದ್ಯಾಪ್ರಸನ್ನತೀರ್ಥರ ವೈಶಿಷ್ಟ್ಯ. ಆತ್ಮವಿಮರ್ಶೆ, ಭಕ್ತಿ, ತತ್ವ, ಸಮಾಜಚಿಂತನೆ ಸಂಪ್ರದಾಯದ ಹಾಡುಗಳು ಇವುಗಳ ಜೊತೆಗೆ 'ಕೂಡಿಟ್ಟ ಕೈ' ಮತ್ತು 'ಜಿಹ್ವಾ ಚಾಪಲ್ಯ' ಎಂಬ ಎರಡು ನಾಟಕಗಳನ್ನೂ ಸಹ ಬರೆದಿದ್ದಾರೆ. ಧಾರ್ಮಿಕ ಚಿಂತನೆಗಳು ಮತ್ತು ಆಚರಣೆಗಳು ಶಿಥಿಲವಾಗುತ್ತಿದ್ದ ಸಂದರ್ಭದಲ್ಲಿ, ಶ್ರೀಪಾದರಾಜರ, ವ್ಯಾಸರಾಜರ ದಾಸ ಪರಂಪರೆಯನ್ನು ಉಳಿಸಿ ಬೆಳೆಸಿದ ಕೀರ್ತಿ ವಿದ್ಯಾಪ್ರಸನ್ನತೀರ್ಥರಿಗೆ ಸಲ್ಲುತ್ತದೆ. ಈ ಎಲ್ಲಾ ದೃಷ್ಟಿಯಿಂದ ವಿದ್ಯಾಪ್ರಸನ್ನತೀರ್ಥರು ಹರಿದಾಸ ಸಾಹಿತ್ಯ ಚರಿತ್ರೆಯಲ್ಲಿ ಸ್ಮರಣೀಯರಾಗಿದ್ದಾರೆ.

### ೨. ೯ ಶ್ರೀವಿಶ್ವೇಂದ್ರತೀರ್ಥರು (೧೮೯೨ – ೧೯೩೪)

ಉಡುಪಿಯ ಅಷ್ಟಮಠಗಳಲ್ಲಿ ಒಂದಾದ ಸೋದೆ ಮಠದ ಯತಿಗಳು ಶ್ರೀ ವಿಶ್ವೇಂದ್ರತೀರ್ಥರು. ಶ್ರೀ ಮಧ್ವಾಚಾರ್ಯರ ಸಹೋದರರಾದ ಶ್ರೀ ವಿಷ್ಣುತೀರ್ಥರೇ ಸೋದೆಯ ಮಠದ ಮೂಲಗುರುಗಳು. ಇದೇ ಮಠದ ಪರಂಪರೆಯ ಮೂವತ್ತೆರಡನೇ ಗುರುಗಳು ಶ್ರೀಮಧ್ವಾಶ್ವಾದೀಶತೀರ್ಥರು ಇವರು ತಮ್ಮ ಪೂರ್ವಾಶ್ರಮದ ಅಣ್ಣನಾದ ಶ್ರೀ ವೆಂಕಟರಮಣಾಚಾರ್ಯರ ಪುತ್ರ ಲಕ್ಷ್ಮೀನಾರಾಯಣನಿಗೆ ೧೮೯೨ನೇ ಇಸವಿಯಲ್ಲಿ ಯತ್ಯಾಶ್ರಮವನ್ನು ನೀಡಿ ಶ್ರೀವಿಶ್ವೇಂದ್ರತೀರ್ಥರೆಂಬ ಹೆಸರಿನಿಂದ ತಮ್ಮ ಸಂಸ್ಥಾನದ ಉತ್ತರಾಧಿಕಾರಿಯನ್ನಾಗಿ ಮಾಡಿಕೊಂಡರು.

'ವಿಶ್ವೇಂದ್ರ ತೀರ್ಥರು ಅದಮಾರು ಮಠದ ಶ್ರೀವಿಭುದೇಂದ್ರತೀರ್ಥ ಶ್ರೀ ಪಾದರಲ್ಲಿ ಶಾಸ್ತ್ರಾಭ್ಯಾಸವನ್ನು ಮಾಡಿದರು. ದ್ವೈತ ಸಿದ್ಧಾಂತದ ಪ್ರಚಾರಕ್ಕಾಗಿ ಉತ್ತರ ಭಾರತದ ಪವಿತ್ರ ಯಾತ್ರಾಸ್ಥಳಗಳನ್ನು ಸಂದರ್ಶಿಸಿ ವಿದ್ವಾಂಸರಿಂದ ಮನ್ನಣೆಯನ್ನು ಪಡೆದರು. ೧೯೨೮ರಲ್ಲಿ ಕೊಚ್ಚಿಯ ರಾಮವರ್ಮ ಮಹಾರಾಜರಿಂದ ಆಮಂತ್ರಿತರಾಗಿ ಅಲ್ಲಿ ಅರಮನೆಯನ್ನು ಸಂದರ್ಶಿಸಿ ರಾಜಪರಿವಾರವನ್ನು ಆಶೀರ್ವದಿಸಿದರು. ಉತ್ತರ ಕನ್ನಡ ಜಿಲ್ಲೆಯ ಸೋಂದಾ ಕ್ಷೇತ್ರದಲ್ಲಿ ಶ್ರೀ

ವಾದಿರಾಜರ ವೃಂದಾವನವಿದೆ. ಶ್ರೀಗಳು ಇಲ್ಲಿರುವ ಕಟ್ಟಡಗಳನ್ನು ದೇವಾಲಯಗಳನ್ನು ಜೀರ್ಣೋದ್ಧಾರ ಮಾಡಿ, ಭಕ್ತ ಜನರಿಗೆ ಅನುಕೂಲ ಮಾಡಿಕೊಟ್ಟರು. ಉಡುಪಿಯಲ್ಲಿ ಮೂರು ಪರ್ಯಾಯ ಪೂರೈಸಿದ ಹೆಗ್ಗಳಿಕೆ ಇವರದು. ಉತ್ತಮ ವಿದ್ವಾಂಸರೂ ಯೋಗಿಗಳು ಆಗಿದ್ದ ಇವರು ಶಾಸ್ತ್ರ ಮತ್ತು ಕಾವ್ಯಗಳಲ್ಲಿ ಪಾಂಡಿತ್ಯ ಹೊಂದಿದ್ದರು.

ವಾದಿರಾಜ ಯತಿಗಳಂತೆ ಇವರೂ ಸಹ ಕನ್ನಡ ಮತ್ತು ತುಳುಭಾಷೆಗಳಲ್ಲಿ ಕೀರ್ತನೆಗಳನ್ನು ರಚಿಸಿದ್ದಾರೆ. ಇವರು ರಚಿಸಿದ ಕೀರ್ತನೆಗಳ ಸಂಗ್ರಹ 'ಕೀರ್ತನ ಮಂಜರಿ' ಎಂಬ ಹೆಸರಿನಲ್ಲಿ ೧೯೫೫ರಲ್ಲಿ ಪ್ರಕಟವಾಗಿದೆ. "ರಾಜೇಶ ಹಯಮುಖ" ಇವರ ಅಂಕಿತ. ವಾದಿರಾಜರ ಭಕ್ತಿ ಮತ್ತು ಸಾಹಿತ್ಯ ಪ್ರಭಾವವನ್ನು ಇವರ ಕೃತಿಗಳಲ್ಲಿ ಕಾಣಬಹುದು. ಸ್ತೋತ್ರರೂಪದ ಕೀರ್ತನೆಗಳು, ಚತುರೋಕ್ತಿಗಳು, ನಿಂದಾಸ್ತುತಿಗಳು ಇವುಗಳನ್ನು ಒಳಗೊಂಡಂತೆ, ವಿಶ್ವೇಂದ್ರತೀರ್ಥರ ೪೫ ಕೃತಿಗಳು ದೊರೆಯುತ್ತದೆ.

### ೨. ೧೦ ಪ್ರದ್ಯುಮ್ನತೀರ್ಥರು (೧೮೯೦ – ೧೯೭೫)

ಇವರ ಪೂರ್ವಾಶ್ರಮದ ಹೆಸರು ವ್ಯಾಸರಾಯಾಚಾರ್ಯ. ಇವರು ಹುಟ್ಟಿದ್ದು ಧಾರವಾಡ ಜಿಲ್ಲೆಯ ಬಂಕಾಪುರದಲ್ಲಿ, ಇವರ ತಂದೆ ವೆಂಕಟನರಸಿಂಹಾಚಾರ್ಯರು, ವಿದ್ವಾಂಸರೂ ಪ್ರಸಿದ್ಧ ಪುರಾಣಿಕರೂ, ವೈರಾಗ್ಯಶಾಲಿಗಳೂ ಆಗಿದ್ದರು. ಕೊನೆಗೆ ಸಂನ್ಯಾಸಾಶ್ರಮವನ್ನು ಕೈಗೊಂಡಿದ್ದರು. ಪದ್ಯುಮ್ನತೀರ್ಥರು 'ನರಹರಿ' ಅಂಕಿತದಲ್ಲಿ ದೇವರನಾಮಗಳನ್ನು ಬರೆದಿದ್ದಾರೆ. ಸಂಸ್ಕೃತ ಮತ್ತು ತತ್ವಜ್ಞಾನಗಳಲ್ಲಿ ಶ್ರೇಷ್ಠ ಸಾಧನೆ ಮಾಡಿರುವ ಇವರು ಕನ್ನಡದಲ್ಲೂ ಹಲವು ಕೃತಿಗಳನ್ನು ರಚಿಸಿ ಹರಿದಾಸ ಪರಂಪರೆಯನ್ನು ಬೆಳೆಸಿದರು.

ಪ್ರದ್ಯುಮ್ನ ತೀರ್ಥರ ವಿದ್ಯಾಗುರುಗಳು ಶ್ರೀಮೇಧಾನಿಧಿತೀರ್ಥರು, ಪ್ರಾರಂಭದಿಂದಲೂ ಲೌಕಿಕ ಜೀವನದಲ್ಲಿ ವೈರಾಗ್ಯ ಹೊಂದಿದ್ದ ಪ್ರದ್ಯುಮ್ನ ತೀರ್ಥರು ಸಂಸಾರದಲ್ಲಿ ಅನಾಸಕ್ತರಾಗಿ ವೈರಾಗ್ಯ ಹೊಂದಿ ಮಂತ್ರಾಲಯಕ್ಕೆ ಹೋಗಿ ಸೇವೆ ಸಲ್ಲಿಸಿದರು. ನಂತರ ಕುಂದಾಪುರ ವ್ಯಾಸರಾಯ ಮಠಾದೀಶರಾದ ಶ್ರೀಲಕ್ಷ್ಮಿಪ್ರಿಯತೀರ್ಥರಿಂದ ಸಂನ್ಯಾಸ ಸ್ವೀಕರಿಸಿದರು. ಅನಂತರ ಮೈಸೂರು ಬಳಿ ಇರುವ ಕಾವೇರಿ ನದಿತೀರದ ಸಾಗರಕಟ್ಟೆಯಲ್ಲಿ ಬಹುಕಾಲ ನೆಲೆಸಿ ಅಲ್ಲಿಯೇ ಮಠವನ್ನು ಸ್ಥಾಪಿಸಿದರು.

## ಅಧ್ಯಾಯ-೨ ಅಡಿ ಟಿಪ್ಪಣೆಗಳು

೧. ಡಾ. ಅನಂತಪದ್ಮನಾಭರಾವ್, 'ಹತ್ತೊಂಬತ್ತನೇ ಶತಮಾನದ ಹರಿದಾಸ ಸಾಹಿತ್ಯ', ಪು-೮

೨. ಡಾ. ಟಿ.ಎನ್. ನಾಗರತ್ನ, 'ಶ್ರೀಪಾದರಾಜರ ಜೀವನ ಮತ್ತು ಕೃತಿಗಳು', ಪು-೨೪

೩. ಡಾ. ವರದರಾಜರಾವ್, 'ಶ್ರೀಪಾದರಾಜರ ಕೃತಿಗಳು', ಪು-೧

೪. ಡಾ. ಟಿ.ಎನ್. ನಾಗರತ್ನ, 'ಶ್ರೀಪಾದರಾಜರ ಜೀವನ ಮತ್ತು ಕೃತಿಗಳು', ಪು-೧೧

೫. 'ಶ್ರೀಪಾದರಾಜರ ಮತ್ತು ಶ್ರೀವ್ಯಾಸರಾಯರ ಕೀರ್ತನೆಗಳು', ಸಮಗ್ರ ದಾಸಸಾಹಿತ್ಯ, ಸಂಪುಟ ೧, ಪು-೨೧೧

೬. ಡಾ. ವರಜರಾಜರಾವ್, 'ಶ್ರೀಪಾದರಾಜರ ಕೃತಿಗಳು', ಪು-VII

೭. 'ಶ್ರೀಪಾದರಾಜರ ಮತ್ತು ಶ್ರೀ ವ್ಯಾಸರಾಯರ ಕೀರ್ತನೆಗಳು', ಸಮಗ್ರ ದಾಸಸಾಹಿತ್ಯ, ಸಂಪುಟ ೧, ಪು-೨೧೧

೮. 'ಶ್ರೀಪಾದರಾಜರ ಮತ್ತು ಶ್ರೀ ವ್ಯಾಸರಾಯರ ಕೀರ್ತನೆಗಳು', ಸಮಗ್ರ ದಾಸಸಾಹಿತ್ಯ, ಸಂಪುಟ ೧, ಪು-೬೦

೯. ಡಾ. ಗೋಕುಲನಾಥ, 'ಶ್ರೀವ್ಯಾಸರಾಯರು ಜೀವನ ಮತ್ತು ಕೃತಿಗಳ ಸಮೀಕ್ಷೆ', ಪು-೪

೧೦. ಅದೇ, ಪು-೭

೧೧. 'ಶ್ರೀಪಾದರಾಜರ ಮತ್ತು ಶ್ರೀ ವ್ಯಾಸರಾಯರ ಕೀರ್ತನೆಗಳು', ಸಮಗ್ರ ದಾಸಸಾಹಿತ್ಯ, ಸಂಪುಟ ೧, ಪು-೩೧

೧೨. ವೇಣುಗೋಪಾಲ ದಾಸರು ಟಿ.ಕೆ., 'ಶ್ರೀಮದ್ವ್ಯಾಸರಾಜ ಗುರುಸಾರ್ವಭೌಮರು', ಪು-೭೦

೧೩. ಡಾ. ಟಿ.ಎನ್, ನಾಗರತ್ನ, 'ಶ್ರೀ ವ್ಯಾಸರಾಯರ ಕೃತಿಗಳು', ಪು-XVII

೧೪. 'ಶ್ರೀವ್ಯಾಸರಾಯರು', ಪು-೧೯೧, ೧೯೩

೧೫. 'ಶ್ರೀಪಾದರಾಜರ ಮತ್ತು ಶ್ರೀ ವ್ಯಾಸರಾಯರ ಕೀರ್ತನೆಗಳು', ಸಮಗ್ರ ದಾಸಸಾಹಿತ್ಯ, ಸಂಪುಟ ೧, ಪು-೩೨

೧೬. ವೇಣುಗೋಪಾಲ ದಾಸರು ಟಿ.ಕೆ., 'ಶ್ರೀಮದ್ವ್ಯಾಸರಾಜ ಗುರುಸಾರ್ವಭೌಮರು', ಪು-೮೦, ೮೧

೧೭. ಡಾ. ಟಿ.ಎನ್. ನಾಗರತ್ನ, 'ಶ್ರೀಪಾದರಾಜರ ಜೀವನ ಮತ್ತು ಕೃತಿಗಳು', ಪು–XVII

೧೮. 'ಶ್ರೀ ವಿದ್ಯಾಪ್ರಸನ್ನ ತೀರ್ಥ'ರು ಹಾಗೂ ಇತರೆ ಯತಿಗಳ ಕೀರ್ತನೆಗಳು', ಸಮಗ್ರ ಸಾಹಿತ್ಯ ಸಂಪುಟ, ಪು–೨೫

೧೯. ಡಾ. ವೇದವ್ಯಾಸಾಚಾರ್, 'ಕರ್ನಾಟಕದ ಹರಿದಾಸರು', ಪು–೨೮೭

೨೦. 'ಶ್ರೀ ವಿದ್ಯಾಪ್ರಸನ್ನ ತೀರ್ಥರು ಹಾಗೂ ಇತರೆ ಯತಿಗಳ ಕೀರ್ತನೆಗಳು', ಸಮಗ್ರ ಸಾಹಿತ್ಯ ಸಂಪುಟ, ಪು–೨೮

೨೧. ಅದೇ, ಪು–೨೯

೨೨. ಅದೇ, ಪು–೩೩

೨೩. ಅದೇ, ಪು–೪೫

ಅಧ್ಯಾಯ ೩

# ಆತ್ಮಶೋಧನೆ

ಲೌಕಿಕ ಜೀವನಾನುಭವಗಳಲ್ಲಿ ಪಕ್ವತೆಯನ್ನು ಪಡೆದು ಆಧ್ಯಾತ್ಮಿಕ ಪ್ರಪಂಚದ ಪರಿಸರವನ್ನು ನಿರ್ಮಾಣ ಮಾಡಿಕೊಳ್ಳುವ ಗುಂಪಿಗೆ ಸೇರಿದವರು ಹರಿದಾಸರು. ಭಕ್ತಿ ಜೀವನಕ್ಕೆ ಕಾಲಿಡುವ ಹರಿದಾಸರು ತಮ್ಮ ಹಿಂದಿನ ಜೀವನವನ್ನು ಕುರಿತು ಮಾಡಿಕೊಳ್ಳುವ ಆತ್ಮ ವಿಮರ್ಶೆಯೇ ಆತ್ಮಶೋಧನೆ. ಇಲ್ಲಿ ಪ್ರತಿಯೊಬ್ಬ ಹರಿದಾಸರೂ ತಮ್ಮ ತಮ್ಮ ಮನೋದೌರ್ಬಲ್ಯಗಳನ್ನು ಖಂಡಿಸಿ, ಪರಮಾತ್ಮನಲ್ಲಿ ಸಂಪೂರ್ಣವಾಗಿ ತಮ್ಮನ್ನು ತಾವು ಸಮರ್ಪಿಸಿಕೊಳ್ಳುತ್ತಾರೆ.

ಹರಿದಾಸರಾಗುವುದಕ್ಕೆ ಮುಂಚೆ ಅವರು ಅನುಭವಿಸಿದ ಲೌಕಿಕ ವ್ಯಾಮೋಹ, ಅಹಂಕಾರ, ಅಸಹಾಯಕತೆ, ಕೀಳರಿಮೆ, ಅನಾಥಪ್ರಜ್ಞೆ ಇವೆಲ್ಲವನ್ನು ದಾಸರು ನಿಸ್ಸಂಕೋಚವಾಗಿ ಪರಮಾತ್ಮನಲ್ಲಿ ನಿವೇದಿಸಿಕೊಳ್ಳುತ್ತಾರೆ. ಭಕ್ತನಾದವನು ಮೊದಲು ತನ್ನ ಅಂತರಂಗದ ತುಮುಲಗಳನ್ನೆಲ್ಲಾ ಭಗವಂತನಲ್ಲಿ ನಿವೇದಿಸಿಕೊಂಡು ಪಶ್ಚಾತ್ತಾಪದ ಮೂಲಕ ಪರಿಶುದ್ಧನಾಗುತ್ತಾನೆ. ಇದು ಭಕ್ತನಾದವನ ಸಾಧನೆಯ ಮೊದಲ ಹಂತ, ತನ್ನ ತಪ್ಪು-ಒಪ್ಪುಗಳನ್ನು ತಾನೇ ನಿಂದಿಸಿಕೊಂಡು ತನ್ನ ನಡವಳಿಕೆಗಳಿಗೆ ತಾನೇ ನಾಚಿ ಭಗವಂತನ ಒಲುಮೆಗಾಗಿ ಹಾತೊರೆಯುವುದು ಈ ಹಂತದ ಪ್ರಮುಖ ಲಕ್ಷಣ. ಭಕ್ತನಿಗೆ ತನ್ನ ತಪ್ಪಿನ ಅರಿವು ಉಂಟಾದಾಗ, ತಾನು ಪರಿಶುದ್ಧನಾಗಬೇಕೆಂಬ ಬಯಕೆ ಅವನಲ್ಲಿ ಮೂಡಿ, ತನ್ನನ್ನು ಉದ್ಧರಿಸುವವನು ಪರಮಾತ್ಮನೊಬ್ಬನೇ ಎಂಬ ನಂಬಿಕೆ ದೃಢವಾಗುತ್ತದೆ.

ಶ್ರೀಪಾದರಾಜರಿಂದ ಹಿಡಿದು ಪ್ರದ್ಯುಮ್ನತೀರ್ಥರವರೆಗೆ ಎಲ್ಲಾ ಹರಿದಾಸ ಯತಿಗಳಲ್ಲೂ ಆತ್ಮಾವಲೋಕನ ಕೃತಿಗಳು ದೊರೆತಿವೆ. "ಆತ್ಮಶೋಧನೆಗೆ ಸಂಬಂಧಿಸಿದ ಕೃತಿಗಳು ದಾಸಕೂಟಕ್ಕೆ ಪ್ರವೇಶಿಸಿದ ಭಕ್ತನ ಪ್ರಾರಂಭದ ರಚನೆಗಳು. ಹರಿದಾಸರಾದ ಕೂಡಲೇ ಧಾರ್ಮಿಕ ಸಾಹಿತ್ಯದ ರಚನೆಗೆ ಅಗತ್ಯವಾದ ಅನುಭವ, ಜ್ಞಾನ, ಅಭ್ಯಾಸಗಳ ಕೊರತೆಯಿದ್ದಾಗ, ಅವರಿಗೆ ಸುಲಭವಾಗಿ ದೊರೆತ ವಸ್ತು ತಮ್ಮದೇ ಆದ ಬದುಕಿನ ಅವಲೋಕನ. ಹೀಗಾಗಿ ಆತ್ಮಾವಲೋಕನದ ರಚನೆಗಳು ಹರಿದಾಸರ ದಾಸತ್ವ ಪೂರ್ವ ಜೀವನದ ದಾಖಲೆಗಳೂ ಆಗಿವೆ"[೧]. ಇಲ್ಲಿಯ ರಚನೆಗಳು ಬೇರೆ-ಬೇರೆ ಸಂದರ್ಭಗಳಲ್ಲಿ ರಚಿತವಾಗಿದ್ದರೂ, ಒಟ್ಟಾಗಿ ಅವಲೋಕಿಸಿದಾಗ ಒಬ್ಬ

ಪ್ರಾಮಾಣಿಕ ಭಕ್ತ ತನ್ನ ದೋಷಗಳನ್ನು ತಾನೇ ವಿಮರ್ಶಿಸಿಕೊಳ್ಳುತ್ತಾ, ಭಗವಂತನ ಒಲುಮೆಗಾಗಿ ಹಾತೊರೆಯುವುದನ್ನು ಕಾಣಬಹುದು. ಕೆಲವೊಮ್ಮೆ ಇದು ಕೇವಲ ಭಕ್ತನ ಹಂಬಲದಂತೆ ಮಾತ್ರವಲ್ಲ ಇಡೀ ಮಾನವ ಸಮುದಾಯದ ಹಂಬಲದಂತೆ ಕಂಡುಬರುತ್ತದೆ.

ಶ್ರೀಪಾದರಾಜರು ತಮ್ಮ ಅಂತರಂಗದ ತಳಮಳಗಳನ್ನೆಲ್ಲಾ ತೋಡಿಕೊಂಡು ಭಗವಂತನಲ್ಲಿ ಮೊರೆ ಹೋಗಿರುವ ಪ್ರಸಂಗವನ್ನು ಅವರ ಹಲವಾರು ರಚನೆಗಳಲ್ಲಿ ಕಾಣಬಹುದು.

**ಅನ್ನಂತ ಕಾಲದಲಿ ನಿನ್ನ ನಾನರಿಯದೆ ಭವಗಳಲ್ಲಿ ಬಂದೆನೊ**
**ಅನ್ನಂತ ಕಾಲದಲಿ ನಿನ್ನವನೆಸಿಸದೆ ಮೂರುಖನಾದೆನೊ**
**ಅನ್ನಂತ ಕಾಲದಲಿ ನಿನ್ನ ಚರಣರತಿಯಿಲ್ಲದೆ ನೊಂದೆನೊ**
**ಅನ್ನಂತ ಕಾಲದಲಿ ಅದಾವ ಪುಣ್ಯದಿಂದ ಬಂದು ಇಂದು**
**ನಿನ್ನವನೆನಿಸಿದೆ ಅದಾವ ಪುಣ್ಯದಿಂದಲೆನ್ನ ಮನ**
**ನಿನ್ನಲೆರಗಿತೊ ನೋಯದಂತೆ**
**ಎನ್ನ ಪೊರೆದು ಲಾಲಿಸೊ ದೀನನಾಥ ಶ್ರೀರಂಗವಿಠಲ**[1]

ಹಲವು ಜನ್ಮಗಳಲ್ಲಿ ತೊಳಲಿ ಬಳಲಿ ನೊಂದು, ಬೆಂದು ಈಗ ಸಿಕ್ಕಿರುವ ಮಾನವ ಜನ್ಮ ಶ್ರೇಷ್ಠವಾದದ್ದು ಎಂಬುದು ದಾಸರ ಭಾವನೆ. ಆದರೆ ಮಾನವ ಜನ್ಮದ ಸ್ವಾರ್ಥ, ಪ್ರತಿಷ್ಠೆ, ಸಂಸಾರ ಮೋಹ, ಪರಸ್ತುತಿ, ಪರಸೇವೆ ಇವುಗಳಲ್ಲಿಯೇ ನಮ್ಮ ಜೀವನ ಕಳೆದು ಹೋಗುತ್ತದೆ. ಇಂತಹ ದೌರ್ಬಲ್ಯಗಳನ್ನೆಲ್ಲಾ ಮೀರಿ ರಂಗವಿಠಲನ ಪಾದಾರವಿಂದಗಳಲ್ಲಿ ತಮ್ಮನ್ನು ತಾವು ಸರ್ವಸಮರ್ಪಣ ಮನೋಭಾವದಿಂದ ಅರ್ಪಿಸಿಕೊಂಡಿದ್ದಾರೆ.

**ನೀ ಕರುಣಿಯೆಂದು ನಿನ್ನ ನಾ ಮೊರೆಹೊಕ್ಕೆ**
**ನೀಕರಿಸದೆ ಎನ್ನ ಶ್ರೀಕಾಂತ ಕಾಯಯ್ಯ**
**ನಿನ್ನವನೆಂಬೆ ನಾನು ಮತ್ತನ್ಯವನರಿಯೆನು**
**ನಿನ್ನವನೆಂಬೆ ನಾನು**
**ಕಂದರ್ಪನೆಂದೆಂದು ಕಾಡದಂತೆ ಮಾಡೊ**
**ವೃಂದರಕಾಧೀಶ ರಂಗವಿಠಲ**[2]

ಹೀಗೆ ಜನ್ಮಜನ್ಮಾಂತರದ ಆತಂಕಗಳನ್ನೆಲ್ಲಾ ತೋಡಿಕೊಂಡು ಪರಾಧೀನ, ಪರಾಶ್ರಯಗಳಿಂದ ಪಟ್ಟ ಪಾಡನ್ನು ಹೇಳಿಕೊಂಡು ಪರಮಾತ್ಮನ ನಾಮಮಹಿಮೆಯನ್ನು ನಂಬಿ, ಅವನ 'ಚರಣರತಿ'ಗಾಗಿ ಹಾತೊರೆಯುವ ದೈನ್ಯವಾಣಿ ಮತ್ತೆ ಮತ್ತೆ ಕೇಳಿಬರುತ್ತದೆ. 'ಹೆಸರುಳ್ಳ ನದಿಗಳು ಒಳಗೊಂಬೊ ಸಮುದ್ರನು ಬಿಸುಡುವನೆ ಕಾಲು ಹೊಳೆಗಳ ಗೋವಿಂದ, ಹೆತ್ತಮಕ್ಕಳು

ಹುಚ್ಚರಾದರೆ ತಾಯಿ ತಂದೆ ಎತ್ತದೆ ನೆಲಕೆ ಬಿಸುಡುವರೆ ಗೋವಿಂದ, ................ ಅರಸು ಮುಟ್ಟಲು ದಾಸಿ ರಂಬೆಯಾದಳು ದೇವ, ಪರುಷ ಮುಟ್ಟಲು ಲೋಹ ಸ್ವರ್ಣ ಗೋವಿಂದ, ಮಾನಾಭಿಮಾನದೊಡೆಯ ರಂಗವಿಠಲ ಜ್ಞಾನಿಗಳರಸನೆ ಕಾಯೋ ಗೋವಿಂದ', ಎಂದು ಪ್ರಾರ್ಥಿಸಿದರೆ, ಮತ್ತೊಮ್ಮೆ 'ನಾರಾಯಣ ನಿನ್ನ ನಂಬಿದೆ ಲಕ್ಷ್ಮಿನಾರಾಯಣ ನಿನ್ನ ಹೊರೆತು ಪೊರೆವ ದೈವವೆಲ್ಲಿದೆ?', ಎಂದು ಭಗವಂತನಲ್ಲಿ ತಮಗಿರುವ ಅಚಲವಾದ ನಂಬಿಕೆಯನ್ನು ಒತ್ತಿ ಹೇಳಿದ್ದಾರೆ.

ಮನುಷ್ಯನಾದವನು ದೌರ್ಬಲ್ಯಗಳಿಂದ ಮುಕ್ತನಲ್ಲ. ಇದನ್ನು ಬಲ್ಲ ದಾಸರಿಗೆ ಭಗವಂತನ ಕೃಪೆ ಅನಿವಾರ್ಯವೆನಿಸುತ್ತದೆ. ಹಾಗಾಗಿ ಚಂಚಲ ಮನಸ್ಸಿನ ಪರದಾಟವನ್ನು ಮುಚ್ಚುಮರೆಯಿಲ್ಲದೆ ಉಲ್ಲೇಖಿಸುತ್ತಾರೆ. 'ನಾನೇ ಸಜ್ಜನನಾದರೆ ರಂಗ ಹೀನ ವಿಷಯಂಗಳಿಗೆರಂಗುವೆನೇನಯ್ಯ', ಹಲವಾರು ಜನರ ವ್ಯರ್ಥವಾದ ಬದುಕನ್ನು ತಮ್ಮ ದನಿಯ ಮೂಲಕ ಸಾರಿ ಹೇಳುತ್ತಿರುವ ದಾಸರ ಈ ವಾಣಿ ಸಹಜವಾದುದೆಂದು ಹೇಳಬಹುದು. ಶ್ರೀಪಾದರಾಜರು ಭಗವಂತನಲ್ಲಿ ಬೇಡುವುದಾದರೂ ಏನನ್ನು?

**ಇದನಾದರೂ ಕೊಡದಿದ್ದರೆ ನಿನ್ನ**
**ಪದ ಕಮಲವ ನಂಬಿ ಭಜಿಸುವುದೆಂತೊ**
**.......................................................**
**ನಾಗಶಯನ ರಂಗವಿಠಲ ನಾ ನಿನ್ನ**
**ಬಾಗಿಲು ಕಾಯುವ ಭಾಗ್ಯ ಸಾಕೆಂದರೆ**

ಭಗವಂತನ ದಾಸನೆನಿಸುವುದು ಹಾಗಿರಲಿ, ಆತನ ದಾಸರ ದಾಸರ ದಾಸ್ಯವನ್ನು ವಹಿಸುವುದರಲ್ಲಿ ಇನ್ನೂ ಅತಿಶಯವಾದ ಸುಖವುಂಟು. ಅವರಿಗೆ ಬೇಕಾಗಿರುವುದು ಒಡವೆ ಒಡ್ಯಾಣಗಳಲ್ಲ, ರಂಗವಿಠಲನ ಬಾಗಿಲು ಕಾಯುವ ಭಾಗ್ಯ ದೊರೆತರೆ ಸಾಕೆಂದಿದ್ದಾರೆ. ಶ್ರೀಪಾದರಾಜರು ಪ್ರವಾಸವನ್ನು ಕೈಗೊಂಡ ಸಮಯದಲ್ಲಿ ಬಂಕಾಪುರದ ನರಸಿಂಹ ದೇವರನ್ನು ಕಂಡಾಗ ಈ ದೈನ್ಯವಾಣಿ ಮುಗಿಲುಮುಟ್ಟಿದೆ. ಹರಿಭಕ್ತನೊಬ್ಬನು ಮುವತ್ತಾರು ವರ್ಷಗಳ ವ್ಯರ್ಥವಾಗಿ ಕಾಲ ಕಳೆದು ನಂತರ 'ಏಕೋ ವಿಷ್ಣುಯೆಂಬೊ ವಾಕು ಚಿಂತಿಸಿ ಇಂಥ ಕಾಕು ಮಾಡುವುದುಚಿತವೆ ಕೃಷ್ಣ' ಎಂದು ಪರಮಾತ್ಮನಲ್ಲಿ ಮೊರೆಯಿಟ್ಟು ಕೂಡಲೆ ಸಫಲವಾಗದಂತಿರಲು ಹತಾಶೆಯಿಂದ ಹಂಬಲಿಸುವುದನ್ನು ಕಾಣಬಹುದು.

ಆರು ಗತಿ ನಿನಗಧಿಕರಾರು ಧಾರುಣಿಯೊಳಗೆ
ತೋರಿಸೈ ಕರುಣನಿಧಿಯೆ ಕೃಷ್ಣ
ಈರೇಳು ಲೋಕಕಾಧಾರವಾದವಗೆ ಬಲು
ಭಾರವಾದವನೆ ನಾನು ಕೃಷ್ಣ
ಮೀರಿ ನುಡಿಯಲು ಹದಿನಾರೆರಡು ಪಲ್ಗಳು
ಬೇರೆ ಕಳಿಕಳಿಯಿತೋ ಕೃಷ್ಣ
ತೋರು ಬಂಕಾಪುರದ ಧಾರುಣಿಪುರವಾಸ
ವೀರ ನರಸಿಂಹ ದೇವ ಕೃಷ್ಣ.

ಎಂದು ಬಂಕಾಪುರ ನರಸಿಂಹನಲ್ಲಿ ಮೊರೆ ಹೋಗಿದ್ದಾರೆ. ತಮ್ಮ ನಡವಳಿಕೆ, ವರ್ತನೆಯನ್ನು ತಾವೇ ಹಳಿದುಕೊಂಡು ಆತ್ಮ ವಿಮರ್ಶೆ ಮಾಡಿಕೊಂಡಿದ್ದಾರೆ.

"ಹರಿ ನಾರಾಯಣನೆಂದು ಕರವೆತ್ತಿ ಮುಗಿದೊಮ್ಮೆ ಮೈ
ಮರೆದು ನಟಿಸಲಿಲ್ಲ ಕೃಷ್ಣ
ಹರಿಸ್ಮರಣೆ ಸ್ಮರಿಸಿ ಸಿರಿತುಳಸಿ ಪುಷ್ಪವನು
ಕರವೆತ್ತಿ ನೀಡಲಿಲ್ಲ ಕೃಷ್ಣ

ಇಲ್ಲಿ ಮೊದಲನೆಯ ಪಂಕ್ತಿಯಲ್ಲಿ ಹರಿದಾಸನೊಬ್ಬನ ಚರ್ಯೆಯನ್ನು ಬಹು ಚೆನ್ನಾಗಿ ನಿರೂಪಿಸಿದೆ. ಅವನು ಭಗವಂತನಿಗೆ ಕೈಯೆತ್ತಿ ನಮಸ್ಕರಿಸುವುದಲ್ಲದೆ ಮೈಮರೆತು ಕುಣಿಯಬೇಕಂತೆ! ಶ್ರೀಪಾದರಾಜರು ರೂಢಿಗೆ ತಂದರೆನ್ನುವ ಭಾಗವತ ಪಂಥದವರ ಭಾವವಿನ್ಯಾಸಗಳನ್ನು ಈ ಪಂಕ್ತಿಯಲ್ಲಿ ನಾವು ಮನಗಾಣಬಹುದು".೬

ಉರಿಯೊಳಗೆ ಬಿದ್ದು ಶರೀರವನು ಕಳೆಯೆಲೊ
ಪರುವತವನೇರ್ದ್ಯುರುಳಲೋ ಕೃಷ್ಣ
ಗರಳ ಮಡುವನೆ ಧುಮುಕಿ ಉರಗ ಫಣ ತುಳಿಯಲೊ
ಎರಡೊಂದು ಶೂಕ್ಷಾಯಲೋ ಕೃಷ್ಣ

ಕೊರಳಿಗ್ಹಗ್ಗವ ಹಾಕಿ ಮರವೇರಿ ಕರಬಿಡಲೋ
ಕರಗಸದಿ ಶಿರಗೊಯ್ಯಲೋ ಕೃಷ್ಣ
ಕರುಣವಾರುಧಿ ಎನ್ನ ಕರಪಿಡಿದು ಸಲಹದಿರೆ
ಧರೆಯೊಳುದ್ದರಿಪರ್ಯಾರೋ ಕೃಷ್ಣ೭

ಈ ಒಂದೊಂದು ಸಾಲಿನಲ್ಲಿಯೂ ಭಕ್ತನ ಉತ್ಕಟವಾದ ಹಂಬಲವನ್ನು, ಅದುವರೆಗೂ ಅದು ಈಡೇರದಿರುವುದರಿಂದ ಮನಸ್ಸಿಗೆ ಉಂಟಾಗಿರುವ ವ್ಯಥೆಯನ್ನು ಸ್ಪಷ್ಟವಾಗಿ ಕಾಣಬಹುದು.

ಭಗವಂತನನ್ನು ಬಿಟ್ಟು ಬೇರಾರು ಉದ್ಧರಿಸಲು ಸಾಧ್ಯವಿಲ್ಲವೆಂಬ ಅಚಲವಾದ ನಂಬಿಕೆ, ಆತನನ್ನು ಕಾಣುವ ಸಲುವಾಗಿ ಪ್ರಾಣತ್ಯಾಗಕ್ಕೂ ಹಿಂಜರಿಯದಿರುವ ಸನ್ನಿವೇಶವಂತೂ ಅತಿಶಯವೆನಿಸಿದೆ.

**'ನಾ ನಿನಗೇನು ಬೇಡುವುದಿಲ್ಲ ಎನ್ನ**
**ಹೃದಯ ಕಮಲದೊಳು ನೆಲಸಿರು ಹರಿಯೆ'** ಎಂದು ವಿನಂತಿಸಿಕೊಳ್ಳುವ ಶ್ರೀಪಾದರಾಜರು

**ಶಿರ ನಿನ್ನ ಚರಣಕ್ಕೆರಗಲಿ – ಚಕ್ಷು**
**ಎರಕದಿಂದಲಿ ನಿನ್ನ ನೋಡಲಿ ಹರಿಯೆ**
**ಶರಣ ಗೀತಂಗಳ ಕೇಳಲಿ – ನಾಸಿಕ**
**ನಿರುಮಾಲ್ಯಾನುದಿನ ಘ್ರಾಣಿಸಲಿ ಹರಿಯೆ**
**..............................................................**

**ನಾಲಗೆ ನಿನ್ನ ಕೊಂಡಾಡಲಿ – ಎನ್ನ**
**ತೋಳು ಕರಂಗಳ ಮುಗಿಯಲಿ ಹರಿಯೆ**
**ಕಾಲು ತೀರ್ಥಯಾತ್ರೆಗೆ ಪೋಗಲಿ – ಮನ**
**ಬಲ್ಪಿನಿಂದಲಿ ನಿನ್ನ ಸ್ಮರಿಸಲಿ ಹರಿಯೆ**

**ಚಿತ್ತ ನಿನ್ನೊಳು ಮುಳುಗಾಡಲಿ ನಿನ್ನ**
**ಭಕ್ತ ಜನರ ಸಂಗ ದೊರಕಲಿ ಹರಿಯೆ**
**ವೃತ್ತಿ ತತ್ತ್ವಯೋಗಾಭ್ಯಾಸಕ್ಕಾಗಲಿ – ರಂಗ**
**ವಿಠಲ ನಿನ್ನ ದಯವಾಗಲಿ ಹರಿಯೆ**[೧೦]

"ತಿಪ್ಪಣಾರ್ಯ ತನ್ನ ಕುಚೇಲೋಪಾಖ್ಯಾನದಲ್ಲಿ ಇದೇ ಭಾವನೆ ವ್ಯಕ್ತಪಡಿಸಿದ್ದಾನೆ. ಶಿರವು ಹರಿಯ ಚರಣಗಳಿಗೆ ಎರಗಲಿ, ಹರಿಯ ನಿರ್ಮಾಲ್ಯವನ್ನು ಮುಡಿಯಲಿ, ಹಣೆ ಊರ್ಧ್ವ ಪುಂಡ್ರ ಧರಿಸಲಿ, ಕಣ್ಣು ಹರಿಮೂರ್ತಿ ನೋಡಲಿ, ಜಿಹ್ವೆ ಹರಿಕೀರ್ತನೆ ಮಾಡಲಿ, ಕಿವಿಗಳು ಹರಿಚರಿತೆಯನ್ನು ಕೇಳಲು ಮೀಸಲಾಗಿರಲಿ, ಗಳವು ತುಳಸಿ ಮಣಿಮಾಲೆ ಧರಿಸಲಿ, ಬಾಹುಗಳು ಶಂಕು, ಚಕ್ರ, ಮುದ್ರೆಗಳಿಂದ ಶೋಭಿಸಲಿ, ಹರಿಯ ಊಳಿಗ ಮಾಡಲಿ, ಎದೆಯು ದ್ವಾದಶ ನಾಮಗಳಿಂದ ಹೊಳೆಯಲಿ, ಉದರ ಪ್ರಸಾದವನ್ನು ಉಣ್ಣುತಿರಲಿ, ಪಕ್ಕೆಗಳು ಹರಿಯ ಪಾದ ರಜದ ಮೇಲೆ ಹೊರಳಲಿ, ಪಾದಗಳು ಹರಿಯಾತ್ರೆ ಮಾಡಲಿ, ಮನಸ್ಸು ಹರಿಧ್ಯಾನ ಮಾಡಲಿ, ಸಂಸಾರದ ವಿಷಯವನ್ನು ಮರೆಯಲಿ, ಸಾಧು ಸಂಗವ ಬಯಸಲಿ, ಸರ್ವಾಂಗಗಳು ಹರಿಗೆ ವಂದಿಸಲಿ, ಸರ್ವತತ್ವಗಳೂ ಹರಿಯನ್ನೇ ಹೊಗಳಲಿ, ಸರ್ವವೂ ಹರಿಗೆ ಸಮರ್ಪಣೆಯಾಗಲಿ, ಜನ್ಮ ಜನ್ಮಾಂತರದಲ್ಲೂ ತನಗೆ ಇಷ್ಟು ಭಾಗ್ಯ ಕೊಟ್ಟರೆ ಸಾಕು ಇದು ಎಲ್ಲ ಹರಿದಾಸರ ನಿಲುವು".[೧೧]

ಭಕ್ತನಿಗೆ ಸ್ವಾಮಿಯ ಅನುಗ್ರಹ ಆಗ್ರಹಗಳೆರಡೂ ಅವನ ಕೃಪೆಯೆಂದೇ ಎಣಿಸಿ ಸಹಿಸುವುದೊಂದೆ ದಾರಿ ಎಂದಿದ್ದಾರೆ ಶ್ರೀಪಾದರಾಜರು.

**ಇಟ್ಹಾಂಗೆ ಇರುವೆನೋ ಹರಿಯೇ ಎನ್ನ ದೊರೆಯೇ ಪ**

**ಸೃಷ್ಟಿವಂದಿತ ಪಾದಪದುಮ ಶ್ರೀ ಹರಿಯೇ ಅ. ಪ.**

**ಸಣ್ಣ ಶಾಲ್ಯೋದನ ಬೆಣ್ಣೆ ಕಾಸಿದ ತುಪ್ಪ**
**ಚಿನ್ನದ ಹರಿವಾಣದಲಿ ಭೋಜನ**
**ಘನ್ನ ಮಹಿಮ ನಿನ್ನ ಕರುಣ ತಪ್ಪಿದ ಮ್ಯಾಲೆ ಕ–**
**ದನ್ನ ಕಾಣದೆ ಬಾಯ್ಬಿಡಿಸುವೆಯೋ ಹರಿಯೇ ॥೧**

ಇಡೀ ಬದುಕು ಪರಮಾತ್ಮನ ಕೃಪೆಯೆಂಬ ಅರಿವು ಶ್ರೀಪಾದರಾಜರದು, ಅವನು ಕೊಟ್ಟದ್ದನ್ನು ನಾವು ಸ್ವೀಕರಿಸಬೇಕು. ಸುಖವು ಬಂದಾಗ ಹಿಗ್ಗಿ ಮೆರೆಯಬಾರದು, ದುಃಖ ಬಂದಾಗ ಕುಗ್ಗಿ ಕಂಗೆಡಬಾರದು. ಸುಖ–ದುಃಖಗಳೆರಡೂ ಹರಿಯ ಚಿತ್ತವೆಂದು ಭಾವಿಸಿ ಸಮಾಧಾನದಿಂದ ಸ್ವೀಕರಿಸಬೇಕು ಎಂಬುದು ಶ್ರೀಪಾದರಾಜರ ನಿಲುವು.

ವ್ಯಾಸರಾಯರ ಆತ್ಮಶೋಧನೆಯ ಕೀರ್ತನೆಗಳು ವೈವಿಧ್ಯಮಯವಾದುದು. 'ಬಾರಯ್ಯ ಎನ್ನ ಮನ ಮಂದಿರಕೆ, ಬೇರೊಂದು ಯೋಚನೆ ಮಾಡದೆ ಸಿರಿಪತಿ' ಎಂದು ನೇರವಾಗಿ ಕರೆದಿರುವ ವ್ಯಾಸರಾಯರು, ಕಳೆದ ಜೀವನಕ್ಕಾಗಿ ವ್ಯಥೆಪಟ್ಟು ಜೀವನ ಹಸನುಮಾಡಿಕೊಳ್ಳುವಲ್ಲಿ ಭಗವಂತನ ಮೊರೆ ಹೋಗಿರುವುದು ಅನನ್ಯವಾದುದು.



**ಆವಾವ ಬಗೆಯಿಂದ ನೀನೆ ರಕ್ಷಿಸುವೆಯೊ**
**ದೇವಾದಿ ದೇವ ಶ್ರೀಕೃಷ್ಣ ನೀನೆನ್ನನು ಪ**

**ಹಿಂದಿನ ಕಾಲವ ವ್ಯರ್ಥವಾಗಿ ಕಳೆದೆನೊ**
**ಮುಂದಿನ ಗತಿ ಚಿಂತೆ ಲೇಶವಿಲ್ಲವೋ**
**ಸಂದು ಹೋಯಿತು ದೇಹದೊಳಗಿನ ಬಲವೆಲ್ಲಾ**
**ಮಂದವಾಯತು ಇಂದ್ರಿಯ ಗತಿಗಳೆಲ್ಲ೧**

**ಪುಟ್ಟಿದೆ ಭುವಿಯೊಳು ಬಹುದಿನ ಕಳೆದೆನೋ**
**ಪುಟ್ಟಿಸ ಬೇಡವೆನ್ನ ಪ**
**............................................**

**ಜೇನಿನೊಳಗೆ ಬಿದ್ದ ನೊಣದಂತೆ ಸತಿಸುತ**
**ಜನಪಾಶ ಬದ್ಧನಾದೆ**
**ಮೀನು ಮಾಂಸದಾಸೆಗ್ಹೋಗಿ ಸಿಕ್ಕಿದಂತೆ**
**ಮೋಸ ಹೋದೆನೊ ಬರಿದೆ೧೪**

**ನಿನ್ನ ಧ್ಯಾನವ ಮಾಡುತ್ತ ಮಾಡುತ್ತ**
**ಎನ್ನ ಮನ ಅನ್ಯಕ್ಕೆರಗುತಿದೆ ಪ**

.........................................
**ನೆರೆ ಹೊರೆಯಲಿ ಮನ ಹೋಗದಂದದಲಿ**
**ಕರುಣಿಸಿ ನಿಲ್ಲಿಸೊ ಸಿರಿಕೃಷ್ಣರಾಯ೧೫**

ತಮ್ಮ ಅವಗುಣಗಳನ್ನು ತಾವೇ ನಿಂದಿಸಿ, ನೆರೆ ಹೊರೆಯಲ್ಲಿ ಮನ ಹೋಗದಂತೆ ಕರುಣಿಸೊ ಸಿರಿಕೃಷ್ಣರಾಯ ಎಂದು ಕೃಷ್ಣನಿಗೆ ಮೊರೆ ಹೋಗಿದ್ದಾರೆ.

**ನಾನೆಲ್ಲಿ ಜ್ಞಾನಿಯು ನಾನೆಲ್ಲಿ ಸೃಜನನು**
**ಹೀನ ವಿಷಯಗಳನುಂಬ ಶ್ವಾನನಂತಿರುವೆ ಪ**

**ಮೂತ್ರದ ಮನೆಗಾಗಿ ಗಾತ್ರ ಬಳಲಿಸಿ ಮದನ**
**ಸೂತ್ರ ಬೊಂಬೆಯು ಎನಿಸಿ ನೇತ್ರದಿಂದ**
**ಪಾತ್ರದವರನು ನೋಡಿ ಸ್ತೋತ್ರ ಮಾಡುತ ಹಿಗ್ಗಿ**
**ರಾತ್ರೆ ಹಗಲು ಕೆಟ್ಟವಾರ್ತೆಯಲ್ಲಿರುವೆ೧೬**

'ಎಂದು ಮನುಷ್ಯನ ಶ್ವಾನ ಬುದ್ಧಿಯನ್ನು ಎತ್ತಿ ತೋರಿಸಿರುವರು. ಸದಾಚಾರ ಸಂಪನ್ನರೇ ಆಗಿದ್ದರೂ, ಪತಿತರೊಳು ಎನ್ನಂಥ ಪತಿತರೊಬ್ಬರ ಕಾಣೆ, ಎಂದಿದ್ದಾರೆ. 'ನಾಲಗೆಯ ರುಚಿಯಿಂದ ಸಾಲದಾಯಿತು ಬಯಕೆ; ಸ್ನಾನ ಧ್ಯಾನವನರಿಯೇ, ಸಾನುರಾಗದಿ ಭಕ್ತಿಖೂನವಿಲ್ಲದೆ ಡಂಭಮೌನಿಯೆನಿಸಿದೆ' ಎಂದಿದ್ದಾರೆ.

"ತಮ್ಮನ್ನು ತಾವು 'ಮನುಷ್ಯ ಪಶು' ಎಂದು ಕರೆದುಕೊಂಡು, 'ದಯೆಯಿಂದ ನೋಡಯ್ಯ' ಎಂದು ದೈನ್ಯಬಟ್ಟಿರುವರು. 'ಹುಡುಗರು ಮಾಡುವ ತಪ್ಪಿಗೆ ತಾಯಿ ಕೃಪೆಮಾಡದೆ ಬಿಡುವಳೇ?' ಅಂತೆಯೇ ನೀನೂ ನನ್ನ ಕೈ ಬಿಡಬೇಡವೆಂಬುದು ಕೃಷ್ಣನಲ್ಲಿ ದಾಸರ ಮೊರೆ. 'ಕೋಳುವೋಗದ ಮುನ್ನ ಕೋಟಿ ರಕ್ಷಿಸಬೇಕು' ಎಂಬುದೇ ಅವರ ಅಹವಾಲು."೧೭ ಕಡೆಗೆ 'ನಾ ದೋಷ ಕಠಿಣನೆಂತೆಂಬೆಯೇ, ನಿನ್ನ ಪಾದ ಪದುಮ ಪಾಪಹರವಲ್ಲವೇ? ಆ ದುಷ್ಟಶಿಲೆ, ಸೋಂಕೆ

ಋಷಿಪತ್ನಿಯಾದಳು ನೀ ದಯಮಾಡೆ ನಾ ನೀಚನೆ ಸಿರಿ ಕೃಷ್ಣ' ಎಂದು ದೇವರ ಮೇಲೆಯೇ ತಮ್ಮ ದೋಷನಿವಾರಣೆಯ ಭಾರವನ್ನು ಹೊರಿಸುವರು.

ಹರಿದಾಸರೆಲ್ಲರೂ ಮೊದಲು ತಮ್ಮ ವಯ್ಯಕ್ತಿಕ ನೆಲೆಯಲ್ಲಿ ಸಾಧನೆ ಮಾಡಿ ನಂತರ ತಮ್ಮ ಅರಿವನ್ನು ಸಮಾಜದ ಒಳಿತಿಗಾಗಿ ಬಯಸಿದವರು. ವಾದಿರಾಜರೂ ಇದಕ್ಕೆ ಹೊರತಲ್ಲ. ಎಂಟನೆಯ ವಯಸ್ಸಿನಲ್ಲೇ ಯತ್ಯಾಶ್ರಮ ಸ್ವೀಕರಿಸಿ ಧಾರ್ಮಿಕ, ಪಾರಮಾರ್ಥಿಕ ವಾತಾವರಣದಲ್ಲಿಯೇ ಬೆಳೆದ ವಾದಿರಾಜರು ಲೌಕಿಕ ಆಸೆ – ಆಕಾಂಕ್ಷೆಗಳನ್ನು ಮೀರಿ ಬೆಳೆದಿದ್ದರು.

**ಚಿತ್ತವ ಪುರಷೋತ್ತಮನಲ್ಲಿಡದೆ**
**ಉತ್ತಮರಾದವರೊಡನಾಡದೆ**
**ತತ್ವವಿಚಾರವೊಂದರಿಯದೆ ನಾನು–**
**ನ್ಮತ್ತರಸಂಗವ ಮಾಡುವೆನೇನಯ್ಯ** ೫೮

ಎಂದು ಪರಿತಪಿಸಿರುವ ವಾದಿರಾಜರು

**ಹೀನ ಸಂಗವನ್ನೆಲ್ಲ ಹಯಮುಖದೇ**
**ವನೆ ವರ್ಜಿಸುವಂತೆ ಮಾಡೊ**
**ಜ್ಞಾನಿಗಳರಸನೆ ದಯವಿಟ್ಟು ನಿನ್ನನ್ನು**
**ಧ್ಯಾನಿಸುವಂತೆ ಮಾಡೊ ಹಯವದನ** ೯೯ ಎಂದು ಪ್ರಾರ್ಥಿಸಿದ್ದಾರೆ.

**ನಿನ್ನ ಧ್ಯಾನದ ಶಕ್ತಿಯ ಕೊಡೊ**
**ಅನ್ಯರಲಿ ವಿರಕ್ತಿಯ ಕೊಡೊ**
**ನಿನ್ನ ನೋಡುವ ಯುಕ್ತಿಯ ಕೊಡೊ**
**ನಿನ್ನ ಪಾಡುವ ಭಕ್ತಿಯ ಕೊಡೊ**
**ನಿನ್ನತ್ತೆ ಬರುವ ಸಂಪತ್ತಿಯ ಕೊಡೊ**
**ಚಿತ್ತದಿ ತತ್ವದ ಕೃತ್ಯವ ತೋರೊ**
**ಮತ್ತೆ ತುದಿಯಲಿ ಎನಗೆ ಮುಕ್ತಿಯ ಕೊಡೊ**
**ಅತ್ತತ್ತಮಾಡೊ ಭವಕತ್ತಲೆಯೆನಗೆ**
**ಮುತ್ತಿದೆ ಹಯವದನ** ೨೦

ಈ ಉಗಾಭೋಗದಲ್ಲಿ ವಾದಿರಾಜರ ವ್ಯಕ್ತಿತ್ವ ಮತ್ತು ಧ್ಯೇಯಗಳನ್ನು ಗುರುತಿಸಬಹುದು. ಧ್ಯಾನದ ಶಕ್ತಿ, ಅನ್ಯ ವಿಷಯಗಳಲ್ಲಿ ವಿರಕ್ತಿ, ಅಪರೋಕ್ಷಾನುಭವದ ಯುಕ್ತಿ, ಕೀರ್ತನ ಭಕ್ತಿ, ಭಗವತ್ ಸಾಮೀಪ್ಯ, ತತ್ವಚಿಂತನೆ, ಜ್ಞಾನಾಪೇಕ್ಷೆ, ಮುಕ್ತಿ ಪದವಿಯನ್ನು ದಯಪಾಲಿಸಬೇಕೆಂದು

ವಿನಂತಿ ಮಾಡಿಕೊಳ್ಳುವರು.

ವಿಜಯೀಂದ್ರ ತೀರ್ಥರ ಕೃತಿಗಳಲ್ಲಿ ಆತ್ಮಶೋಧನೆಯ ಕೀರ್ತನೆಗಳು ಇಲ್ಲ. ನಂತರ ಬಂದ ರಾಘವೇಂದ್ರ ತೀರ್ಥರದ್ದು ಒಂದೇ ಒಂದು ಕೀರ್ತನೆ ಲಭ್ಯವಿದ್ದು ಅದು ಆತ್ಮಶೋಧನೆಗೆ ಸೇರಿದ ಕೀರ್ತನೆಯಾಗಿದೆ.

ಇಂದು ಎನಗೆ ಗೋವಿಂದ ನಿನ್ನ ಪಾದಾರ
ವಿಂದವ ತೋರೊ ಮುಕುಂದ ಪ

ಸುಂದರ ವದನನೆ ನಂದಗೋಪನ ಕಂದ
ಮಂದರೋದ್ಧರ ಆನಂದ ಇಂದಿರಾ ರಮಣ ಅ. ಪ.

ನೊಂದೆನಯ್ಯ ಭವಬಂಧನದೊಳು ಸಿಲುಕಿ
ಮುಂದೆ ದಾರಿ ಕಾಣದೆ ಕುಂದಿದೆ ಜಗದೊಳು
ಕಂದನು ಎಂದೆನ್ನ ಕುಂದುಗಳೆಸದೆ
ತಂದೆ ಕಾಯೊ ಕೃಷ್ಣ ಕಂದರ್ಪ ಜನಕನೆ

ಮೂಢತನದಿ ಬಹು ಹೇಡಿ ಜೀವ ನಾನಾಗಿ
ದೃಢಭಕುತಿಯನು ಮಾಡಲಿಲ್ಲವೊ ಹರಿಯೆ
ನೋಡಲಿಲ್ಲವೊ ನಿನ್ನ ಪಾಡಲಿಲ್ಲವೊ ಮಹಿಮೆ
ಗಾಡಿಕಾರ ಕೃಷ್ಣ ಬೇಡಿಕೊಂಬೆನೊ ನಿನ್ನ

ಧಾರುಣಿಯೊಳು ಭೂಭಾರ ಜೀವ ನಾನಾಗಿ
ದಾರಿತಪ್ಪಿ ನಡೆದೆ ಸೇರಿದೆ ಕುಜನರ
ಆರೂ ಕಾಯುವರಿಲ್ಲ ಸೇರಿದೆ ನಿನಗಯ್ಯ
ಧೀರ ವೇಣುಗೋಪಾಲ ಪಾರುಗಾಣಿಸೊ ಹರಿಯೆ ೨೧

ರಾಘವೇಂದ್ರ ತೀರ್ಥರು ಮೊದಲು ಸಂಸಾರಿಗಳಾಗಿದ್ದು ನಂತರದಲ್ಲಿ ಸಂನ್ಯಾಸ ಸ್ವೀಕರಿಸಿದವರು. ಈ ಕೀರ್ತನೆಯಲ್ಲಿ 'ನೊಂದೆನಯ್ಯ ಭವ ಬಂಧನದೊಳು ಸಿಲುಕಿ, ಎಂದು ಜನ್ಮಾಂತರದಲ್ಲಿ ಬಳಲಿರುವ ಬಗೆಯನ್ನು, ತಾವು ಮಾಡಿದ ಕುಂದುಗಳನ್ನು ಎಣಿಸದೆ ಕಂದನನ್ನು ತಂದೆ ಸಲಹುವ ರೀತಿಯಲ್ಲಿ ಕಾಯೋ ಕೃಷ್ಣ ಎಂದಿದ್ದಾರೆ. ಮೂಢತನದಿ ಇದ್ದು ದೃಢಭಕ್ತಿಯನ್ನು ಮಾಡದೆ, ಭಗವಂತನ ಕಡೆಗೆ ತಮ್ಮ ಮನಸ್ಸನ್ನು ಹರಿಸದೆ, ಅವನ ಮಹಿಮೆಗಳನ್ನು ಕೊಂಡಾಡದೆ, ಕೆಟ್ಟ ಜನರೊಡನೆ ಕೂಡಿ ವ್ಯರ್ಥ ಜೀವನವನ್ನು ಮಾಡಿದ್ದಕ್ಕಾಗಿ ವಿಷಾದಿಸಿದ್ದಾರೆ. ನಮ್ಮನ್ನು

ಇದೆಲ್ಲದರಿಂದ ಕೈ ಬಿಡದೆ ಕಡೆ ಹಾಯಿಸಿ ಕಾಪಾಡಬಲ್ಲವನು ಭಗವಂತನೊಬ್ಬನೆ ಎಂಬ ನಂಬಿಕೆ ದೃಢವಾಗಿ 'ಆರು ಕಾಯುವರಿಲ್ಲ ಸೇರಿದೆ ನಿನ್ನಗಯ್ಯ ಧೀರ ವೇಣುಗೋಪಾಲ ಪಾರಿಗಾಣಿಸೋ ಹರಿಯೆ' ಎಂದಿದ್ದಾರೆ.

ವ್ಯಾಸತತ್ವಜ್ಞರು ಯತ್ಯಾಶ್ರಮ ಸ್ವೀಕರಿಸುವ ವೇಳೆಗೆ ಸುಮಾರು ಎಪ್ಪತ್ತೆಂಟು ವರ್ಷ ವಯಸ್ಸಾಗಿದ್ದಿತು. ಯತ್ಯಾಶ್ರಮ ಸ್ವೀಕರಿಸುವ ಮುಂಚೆಯೇ ವೈರಾಗ್ಯಶಾಲಿಗಳಾಗಿ ಹರಿದಾಸರಾಗಿದ್ದ ಅವರು ಬಯಸಿದ್ದು "ವಾಸುದೇವ ವಿಠಲನ ಒಲುಮೆ"ಯೊಂದನ್ನು ಮಾತ್ರ

ಅನಂತಾನಂತ ಪಾಪ ಮಾಡುವೆ ನಾನು ಪ

ಅನಂತ ದಯಾನಿಧೆ ನೀನೋ ಹಯವದನ ಅ. ಪ.[೨೨]

ಅಪರಾಧ ಎನ್ನದಯ್ಯ ಅಪರಿಮಿತವೆ ಸರಿ ಪ

ಕೃಪಣವತ್ಸಲ ಕೃಷ್ಣ ಕೃಪೆಯ ಮಾಡುವುದಿಲ್ಲವೆ ಅ. ಪ. [೨೩]

ಎನ್ನ ಅಪರಾಧಗಳೆಣಿಸೆನೆಂದರೆ ಅದರ
ಕೊನೆಯಿಲ್ಲ ಮೊದಲಿಲ್ಲ ಹುರುಳಿಲ್ಲವೋ [೨೪]

ಹೀಗೆ ಲೌಕಿಕ ಜೀವನದಲ್ಲಿ ತಿಳಿದೊ ತಿಳಿಯದೆಯೋ ಮಾಡಿದ ತಪ್ಪುಗಳನ್ನು ನಿಸ್ಸಂಕೋಚವಾಗಿ ಒಪ್ಪಿಕೊಂಡು ಜೀವನವನ್ನು ಹಸನುಗೊಳಿಸಿಕೊಳ್ಳಲು ಬಯಸುತ್ತಾರೆ. ತಿಳಿಯದೆ ಮಾಡುವ ತಪ್ಪುಗಳನ್ನು ಮನ್ನಿಸುವ ದಯಾಮಯಿಯಾಗಿರುವುದರಿಂದಲೇ ಶ್ರೀಹರಿಯನ್ನು 'ಕೃಪಣವತ್ಸಲ' ಎಂದು ಕರೆದಿದ್ದಾರೆ. ಹುಡುಗರು ಮಾಡುವ ತಪ್ಪನ್ನು ಜನನಿಯು ಮನ್ನಿಸುವ ತೆರದಲ್ಲಿ, ನಡೆಯುವ ಕುದುರೆ ಮಲಗಿದ್ದರೆ, ಕಡೆಗೆ ಕಟ್ಟದೆ ಉಪಚರಿಸಬೇಕೆಂದು ಪ್ರಾರ್ಥಿಸುತ್ತಾರೆ. ಕೆಲವೊಮ್ಮೆ ಜೀವನದಲ್ಲಿನ ಕಹಿ ಅನುಭವಗಳಿಂದ ಮುಂದೆ ದಾರಿಕಾಣದಾದಾಗ ಮುಂದೇನೆಂಬ ಆತಂಕ ಉಂಟಾಗಿ ಭಕ್ತ ಹತಾಶ ಸ್ಥಿತಿಯನ್ನು ತಲುಪುತ್ತಾನೆ. ಇದರಿಂದ ಪಾರು ಮಾಡುಬಲ್ಲವನು ವಾಸುದೇವ ವಿಠಲನೊಬ್ಬನೆ ಎಂಬುದು ಅವರ ಅಚಲವಾದ ನಿಲುವು.

ಆರಿಗೆ ಉಸುರಲಿ ಆರಿಗೆ ಮೊರೆಯಿಡಲಿ
ಆರೆನ್ನ ಮನದಳಲು ನಿವಾರಿಸುವವರ ಕಾಣೆ[೨೫]

ಹರಿದಾಸರಾದ ಮೇಲೂ ಸಾಧನೆಯ ದಾರಿಯನ್ನು ಹಿಡಿಯದೆ ಪಶುಗಳ ರೀತಿಯಲ್ಲಿ ಆಯುಷ್ಯವನ್ನು ವ್ಯರ್ಥವಾಗಿ ಕಳೆಯುತ್ತಿರುವವರ ಬಗ್ಗೆ ದಾಸರಿಗೆ ವಿಷಾದವಿದೆ.

ಮಾತುಗಳು ನಾಲ್ಕಾಡಿ ಸಭೆಯೊಳಗೆ
ಪ್ರೀತಿ ಬಡಿಸುವೆನೊ ನರರ
ರೀತಿಯಲಿ ಶ್ರುತಿ ಸ್ಮೃತಿಗಳ ಪಠಿಸಿ ಶ್ರೀ
ನಾಥ ನಿನ್ನ ತೋಷಿಸಿದೆನೆ

ಜಪಮಣಿಗಳನು ತಿರುಹಿಸಿ । ಲೋಕರನ
ಕಪಟಗೊಳಿಸುವೆನಲ್ಲದೆ
ತಪ ಮಾಡಿದನೆ ಮನದಲಿ ನಿನ್ನಯ
ಕೃಪೆಯು ಉದಿಸುವ ತೆರದಲಿ[೨೬]

ಉಣವೆನೊ ಪರರನ್ನ ದಣಿವೆನೊ ಅದಕ್ಕೆ
ಕುಣಿವೆನೊ ಅವರಂತೆ ಗುಣವೇನು ಎನಗೆ[೨೭]

ಪಾಮರ ಜನರೊಳು ಸಿಕ್ಕಿದೆ ನಿನ್ನಯ
ನಾಮವ ಪೇಳುವ ಜನರನ್ನ ಕಾಣೆನೊ
ಸ್ವಾಮಿ ಏನು ಗತಿ ಎನ್ನ ಹೃದಯವೆಂಬ
ಧಾಮದಿ ಪೊಳೆಯೋ ವಾಸುದೇವವಿಠಲ[೨೮]

ಹೀಗೆ ಎಲ್ಲಾ ಅಪರಾಧಗಳಿಗೂ ಶರಣಾಗುವುದೊಂದೆ ಸರಿಯಾದ ದಾರಿಯೆಂದು ಅಹಂಕಾರವನ್ನು ಬಿಟ್ಟು, ಕ್ಷಮೆ ಯಾಚಿಸಿ, ನಿಷ್ಕಲ್ಮಶವಾದ ಮನಸ್ಸಿನಿಂದ ಭಗವಂತನಲ್ಲಿ ಮೊರೆ ಹೋಗುತ್ತಾರೆ. ನಮ್ಮನ್ನು ಪೊರೆವ ದೈವ 'ವಾಸುದೇವ ವಿಠಲ'ನೊಬ್ಬನೇ ಎಂಬುದು ಅವರ ದೃಢವಾದ ನಿಲುವು. 'ಮನುಜಪಶು ಎಂದು ಎನ್ನಲ್ಲಿ ದಯಮಾಡು ಅನಿಮಿತ್ಯ ಬಂಧು ವಾಸುದೇವ ವಿಠಲರೇಯಾ'[೨೯]

ಶೋತ್ರಕ್ಕೆ ನಿನ್ನ ಕಥೆ ನಾಸಕ್ಕೆ ನಿನ್ನ ಗಂಧ
ನೇತ್ರಕ್ಕೆ ನಿನ್ನ ರೂಪ ರಸನಿಗೆ ನಾಮಾಮೃತ
ಗಾತ್ರಕ್ಕೆ ನಿನ್ನ ಪಾದ ಸ್ವರುಪ ಮನೋಬುದ್ದಿ

**ಮೂತ್ರಕ್ಕೆ ಗುಣಕರ್ಮಕೊಡು ವಾಸುದೇವವಿಠಲ್ಲಂ**

ಹೀಗೆ ಎಲ್ಲವೂ ಭಗವಂತನ ಅಧೀನವೆಂದು ಸರ್ವಸ್ವವನ್ನು ಹರಿಗೆ ಒಪ್ಪಿಸಿ ತಾವು ನಿಶ್ಚಿಂತರಂತೆ ಬದುಕುತ್ತಾರೆ.

ಆದ ವಿಷಯಗಳು ಬಾಧಿಸದೆಂತೆನ್ನ ಮಾಧವ ನೀ ಪೊರೆಯೋ ದಯಾನಿಧೆ, ಎಂದು ಭಗವಂತನನ್ನು ಪ್ರಾರ್ಥಿಸುವ ವಿದ್ಯಾಪ್ರಸನ್ನ ತೀರ್ಥರು ಊರು ಊರು ಸುತ್ತಿ ದಣಿದು ಸಾರರಹಿತ ಶಾಸ್ತ್ರ ವಿಚಾರಗಳಲ್ಲಿ ಕಾಲ ಕಳೆದೆನೋ, ಎಂದು ಪಶ್ಚಾತ್ತಾಪ ಪಟ್ಟಿದ್ದಾರೆ. 'ತೋರಿಸಯ್ಯ ಬೆಳಕು ದೇವ ತೋರಿಸಯ್ಯ ದಾರಿ ತಪ್ಪಿ ದೂರ ಬಂದಿಹೆನು, ಕತ್ತಲೆ ಕವಿದಿದೆ ಕಣ್ಣಿಗೆ, ಎತ್ತಲು ಕಾಣದಿದೆ, ಚಿತ್ತವ ಬೆಳಗಿಸೊ ಮತ್ತೆ ನೋಡುವೆನು, ಉತ್ತಮ ದೃಶ್ಯವ ಭಕುತರ ಪ್ರಸನ್ನನೇ ಎಂದು ಒಮ್ಮೆ ಪ್ರಾರ್ಥಿಸಿದರೆ, ಮತ್ತೊಮ್ಮೆ 'ಶ್ರೀ ಪತಿಯೆ ನಿನ್ನ ಪ್ರೇರಣೆಯಲ್ಲವೇ ಸರ್ವ ಪಾಪ ಪುಣ್ಯಕೆ, ಎಂದು ಬಲವಾಗಿ ಭಗವಂತನ ಮೇಲೆಯೇ ದೋಷ ನಿವಾರಣೆಯ ಹೊರೆಯನ್ನು ಹೊರಿಸುವರು. 'ಸಿರಿಯು ಬೇಡವೆನಗೆ, ಪರಿ ಪರಿಯಲಿ ನಿನ್ನ ಚರಣ ಸೇವೆ ಕೊಡೆಂದು ಅನನ್ಯ ರೀತಿಯಲ್ಲಿ ಸಂಪೂರ್ಣವಾಗಿ ಭಗವಂತನಲ್ಲಿ ಶರಣಾಗತರಾಗಿದ್ದಾರೆ.

'ಏನು ಗತಿ ಏನುಗತಿ ಇನಕುಲೇಶ, ಹೀನ ವಿಷಯದಿ ಮನ ಶ್ವಾನನಂತಿಟ್ಟ ಎನಗೇನು' ಎಂದು ಪರಿತಪಿಸುವ ಪದ್ಯುಮ್ನ ತೀರ್ಥರು 'ಹೀನ ಬುದ್ಧಿ ಬಿಡಿಸಿ ಜ್ಞಾನ ನಿನ್ನಲಿರಿಸಿ ಗಾನಲೋಲ ಕಾಯೋ ಶ್ರೀನರಹರಿಯೇ' ಎಂದು ಭಗವಂತನಲ್ಲಿ ಮೊರೆ ಹೋಗಿದ್ದಾರೆ. 'ಹುಚ್ಚು ಹಿಡಿದಿದೆ, ಎನಗೆ ಹುಚ್ಚು ಹಿಡಿದಿದೆ ತುಚ್ಛ ವಿಷಯವೆಂಬಂಥ ಅಚ್ಚು ಮದ್ದು ನೆತ್ತಿಗೇರಿ ಎಂದು ನಿಸ್ಸಂಕೋಚವಾಗಿ ತಮ್ಮ ಆತ್ಮವಿಮರ್ಶೆ ಮಾಡಿಕೊಳ್ಳುವ ಇವರು 'ಹ್ಯಾಂಗಾದರೂ ಎನ್ನ ನೀ ರಕ್ಷಿಸಬೇಕೋ ಸಾಗರಶಯನ ಕೃಷ್ಣಾ' ಎಂದು ಪ್ರಾರ್ಥಿಸುತ್ತಾರೆ.

ಲೋಕ ಸುಖ ಮತ್ತು ಸಂಸಾರ ಸುಖಗಳು ನಶ್ವರವೆನ್ನುವ ಭಾವನೆ ದಾಸರದು. 'ಲೇಶ ಸುಖವ ಕಾಣೆ ಇನ್ನು ಈ ಜಗದೊಳು' ಎಂಬುದು ಇವರ ಅನುಭವ, ಸಂಪಾದನೆಗಾಗಿ ತಿರುಗಾಟ, ಮೋಸ, ಠಕ್ಕು ಹೊಟ್ಟೆ ಹೊರೆಯಲು ಹೀನ ಜನರ ಸೇವೆ ಇವು ದಾಸರಿಗೆ ಬೇಸರ ತರಿಸಿದವು. ನಿತ್ಯ ಕರ್ಮಗಳನ್ನು ಮರೆತು, ದೇವರನ್ನು ಪೂಜಿಸದೆ ಹೀನ ವಿಷಯಗಳಿಗೆ ಮನಸೋತು, ಮಾನವರಿಗೆ ಕೈ ಮುಗಿದು, ಶ್ವಾನ ಸೂಕರನಂತೆ ಕೊರಗಿ, ಮಾನವ ಜನ್ಮ ವ್ಯರ್ಥವಾಯಿತೆಂದು

ದುಃಖಿಸುತ್ತಾರೆ. ಈ ಆತ್ಮಶೋಧನೆಯಿಂದ ಉಂಟಾದ ವೈರಾಗ್ಯ ದಾಸತ್ವಕ್ಕೆ ದಾರಿ ಮಾಡಿಕೊಡುತ್ತದೆ. ಬದುಕಿರುವಾಗ ಮತ್ತು ಬದುಕನ್ನು ಮುಗಿಸುವಾಗ ನಮ್ಮನ್ನು ಕಾಪಾಡಬಲ್ಲವನು ದೇವರೊಬ್ಬನೇ ಎಂಬ ನಂಬಿಕೆ ದೃಢವಾಗುತ್ತದೆ.[೩೧]

"ನಮಗೆ ಅತ್ಯಂತ ಆತ್ಮೀಯರಾದವರ ಹತ್ತಿರ ವೈಯಕ್ತಿಕ ವಿಷಯಗಳನ್ನು ಹೇಳಿಕೊಂಡು ಮನಸ್ಸಿನ ಭಾರವನ್ನು ಕಡಿಮೆ ಮಾಡಿಕೊಳ್ಳುವಂತೆ ಹರಿದಾಸರು ತಮ್ಮ ದೋಷಗಳನ್ನು ತಮಗೆ ಆತ್ಮೀಯನಾದ ಹರಿಯಲ್ಲೇ ನಿವೇದಿಸಿಕೊಳ್ಳುತ್ತಾರೆ. ಉದಾರ ಚರಿತನಾದ ಹರಿ ತಮ್ಮ ತಪ್ಪುಗಳನ್ನು ಮನ್ನಿಸಿ ಸನ್ಮಾರ್ಗದಲ್ಲಿ ನಡೆಸುತ್ತಾನೆಂಬ ನಂಬಿಕೆ ಅವರದು. ತಮ್ಮ ಲೌಕಿಕ ಜೀವನವನ್ನು ವೈಯಕ್ತಿಕ ಬದುಕನ್ನು ವಿಶ್ಲೇಷಿಸಿ ತಮ್ಮದು ಸಾರ್ಥಕ ಬದುಕಲ್ಲ ಎಂದು ಭಾವಿಸಿ ಹರಿದಾಸರು ಆತ್ಮಸಮರ್ಪಣೆ ಮಾಡಿಕೊಳ್ಳುತ್ತಾರೆ. ಭಕ್ತ ಈ ಹಂತವನ್ನು ತಲುಪಿದನೆಂದರೆ ತನ್ನ ಸಾಧನೆಯ ಮಾರ್ಗದಲ್ಲಿ ಬಹುಪಾಲು ಕ್ರಮಿಸಿದಂತೆಯೇ".[೩೨]

## ಅಧ್ಯಾಯ ೩ ಅಡಿಟಿಪ್ಪಣಿಗಳು

೧. ಡಾ. ಅನಂತಪದ್ಮನಾಭರಾವ್. 'ಹತ್ತೊಂಬತ್ತನೇ ಶತಮಾನದ ಹರಿದಾಸ ಸಾಹಿತ್ಯ', ಪು–೩೨

೨. 'ಶ್ರೀ ಶ್ರೀಪಾದರಾಜರ ಮತ್ತು ಶ್ರೀವ್ಯಾಸರಾಯರ ಕೀರ್ತನೆಗಳು', ಸಮಗ್ರ ದಾಸಸಾಹಿತ್ಯ, ಸಂಪುಟ ೧, ಪು–೬೨

೩. ಅದೇ, ಪು–೬೩

೪. ಅದೇ, ಪು–೬೮

೫. ಅದೇ, ಪು–೬೯

೬. ಅದೇ, ಪು–೬೫

೭. ಅದೇ, ಪು–೭೪

೮. ಡಾ. ವರದರಾಜರಾವ್, 'ಶ್ರೀಪಾದರಾಜರ ಕೃತಿಗಳು', ಪು–XVIII

೯. ಅದೇ, ಪು–XIX

೧೦. 'ಶ್ರೀ ಶ್ರೀಪಾದರಾಜರ ಮತ್ತು ವ್ಯಾಸರಾಯರ ಕೃತಿಗಳು', ಸಮಗ್ರ ದಾಸಸಾಹಿತ್ಯ, ಸಂಪುಟ ೧, ಪು–೬೮

೧೧. ಡಾ. ಅನಂತಪದ್ಮನಾಭರಾವ್, 'ಹತ್ತೊಂಬತ್ತನೇ ಶತಮಾನದ ಹರಿದಾಸ ಸಾಹಿತ್ಯ', ಪು–೩೯

೧೨. 'ಶ್ರೀ ಶ್ರೀಪಾದರಾಜರ ಮತ್ತು ಶ್ರೀ ವ್ಯಾಸರಾಯರ ಕೀರ್ತನೆಗಳು', ಸಮಗ್ರ ದಾಸಸಾಹಿತ್ಯ, ಸಂಪುಟ ೧, ಪು–೬೪

೧೩. ಅದೇ, ಪು–೨೧೯

೧೪. ಅದೇ, ಪು–೨೪೦

೧೫. ಅದೇ, ಪು–೨೩೮

೧೬. ಅದೇ, ಪು–೨೩೪

೧೭. ಡಾ. ಟಿ.ಎನ್. ನಾಗರತ್ನ, ಶ್ರೀ ವ್ಯಾಸರಾಯರ ಕೃತಿಗಳು', ಪು–XXI

೧೮. ಡಾ. ಟಿ.ಎನ್. ನಾಗರತ್ನ, 'ಶ್ರೀ ವಾದಿರಾಜರ ಕೀರ್ತನೆಗಳು', ಪು–೧೯೧

೧೯. ಅದೇ, ಪು–೧೬೪

೨೦. ಅದೇ, ಪು–೧೯೫

೨೧. ‘ವಿದ್ಯಾಪ್ರಸನ್ನ ತೀರ್ಥರು ಹಾಗೂ ಇತರ ಯತಿಗಳ ಕೀರ್ತನೆಗಳು’, ಸಮಗ್ರ ದಾಸಸಾಹಿತ್ಯ, ಸಂಪುಟ ೨೮, ಪು–೯

೨೨. ಅದೇ, ಪು–೭೧

೨೩. ಅದೇ, ಪು–೭೨

೨೪. ಅದೇ, ಪು–೯೨

೨೫. ಅದೇ, ಪು–೭೩

೨೬. ಅದೇ, ಪು–೯೧

೨೭. ಅದೇ, ಪು–೯೫

೨೮. ಅದೇ, ಪು–೯೭

೨೯. ಅದೇ, ಪು–೯೨

೩೦. ಅದೇ, ಪು–೮೫

೩೧. ‘ಮಧುರಾನಂದ ಬೋಧೆ’, ಪು–೨೦
(ವಿವರಗಳು ತಿಳಿಯದ ಈ ಹಳೆಯ ಹಾಡಿನ ಪುಸ್ತಕದಲ್ಲಿ ಅನೇಕ ದಾಸರ ಪದಗಳಿವೆ. ಶ್ರೀ ಜಿ. ಅಶ್ವತ್ಥನಾರಾಯಣ ಅವರ ಬಳಿ ಈ ಪ್ರತಿ ಇದೆ)

೩೨. ಡಾ. ಅನಂತಪದ್ಮನಾಭರಾವ್, ‘ಹತ್ತೊಂಬತ್ತನೇ ಶತಮಾನದ ಹರಿದಾಸ ಸಾಹಿತ್ಯ’, ಪು–೪೨

ಅಧ್ಯಾಯ ೪

# ಭಗವಂತನ ಆರಾಧನೆ ಮತ್ತು ಭಕ್ತಿ

ಭಕ್ತಿಯ ಇತಿಹಾಸ ದೊಡ್ಡದು. "ಭಕ್ತಿಯೇ ಮೋಕ್ಷಕ್ಕೆ ಸಾಧನ ಎಂದು ನಂಬಿದವರು ಹರಿದಾಸರು. ಧನ, ಕುಲ, ರೂಪ, ತಪಸ್ಸು, ವಿದ್ಯೆ, ಅಧ್ಯಯನ, ಕರ್ಮಾಚರಣೆ, ಅಧಿಕಾರ, ಬಲ, ಇದಾವುದರಿಂದಲೂ ಹರಿಯನ್ನು ಒಲಿಸಿಕೊಳ್ಳಲು ಸಾಧ್ಯವಿಲ್ಲವೆಂದು ಭಕ್ತಿಗೆ ಪ್ರಾಧಾನ್ಯ ನೀಡಿದವರು"[೧] ಇವರ ಭಕ್ತಿಯ ಸ್ವರೂಪವನ್ನು ಅವರ ಆರಾಧನಾ ವೈವಿಧ್ಯಗಳ ಹಿನ್ನಲೆಯಲ್ಲಿ ತಿಳಿದುಕೊಳ್ಳಬಹುದು. ಶ್ರೀಮಧ್ಭಾಗವತದ ಸಪ್ತಮ ಸ್ಕಂದದಲ್ಲಿ ವೈವಿಧ್ಯಮಯವಾದ ಭಕ್ತಿಯನ್ನು ಕುರಿತ ಒಂದು ಶ್ಲೋಕವಿದೆ.

**'ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಂ**
**ಅರ್ಚನಂ ವಂದನಂ ದಾಸ್ಯಂ ಸಖ್ಯಂ ಆತ್ಮನಿವೇದನಮ್'**

ಈ ನವವಿಧಗಳನ್ನು ಭಕ್ತಿಮಾರ್ಗಗಳೆಂದು ಕರೆದಿದ್ದಾರೆ. ಈ ಮಾರ್ಗಗಳನ್ನನುಸರಿಸಿ ಕೃತಕೃತ್ಯರಾದ ಭಕ್ತರನ್ನು ಕುರಿತ ಒಂದು ಸಂಸ್ಕೃತ ವೃತ್ತದಲ್ಲಿ ಹೀಗೆ ಹೇಳಿದೆ.

**ವಿಷ್ಣೋಸ್ತು ಶ್ರವಣೇ ಪರೀಕ್ಷಿದಭವತ್ ವೈಯಾಸಕಿಃ ಕೀರ್ತನೇ**
**ಪ್ರಹ್ಲಾದ ಸ್ಮರಣೇ ತದಂಘ್ರಿಭಜನೇ ಲಕ್ಷ್ಮೀ ಪೃಥುಃ ಪೂಜನೇ**
**ಅಕ್ರೂರಸ್ತಭಿವಂದನೇ ಚ ಹನುಮಾನ್ ದಾಸ್ಯೇ ಸಖೇಚಾರ್ಜುನಃ**
**ಸರ್ವಸ್ಯಾತ್ಮನಿವೇದನೇ ಬಲಿರಭೂತ್ ಕೈವಲ್ಯಮೇಷಾಃ ಸಮಃ**

"ಪರೀಕ್ಷಿದ್ರಾಜನು ಶ್ರವಣದಿಂದಲೂ, ನಾರದನು ಕೀರ್ತನೆಯಿಂದಲೂ, ಪ್ರಹ್ಲಾದನು ಸ್ಮರಣೆಯಿಂದಲೂ, ಲಕ್ಷ್ಮಿದೇವಿ ದೇವರ ಪಾದಭಜನೆಯಿಂದಲೂ, ಪೃಥುಮಹಾರಾಜನು ಪೂಜೆಯಿಂದಲೂ, ಅಕ್ರೂರನು ಅಭಿವಂದನೆಯಿಂದಲೂ, ಹನುಮಂತನು ದಾಸ್ಯದಿಂದಲೂ, ಅರ್ಜುನನು ದೇವರ ಸಖ್ಯದಿಂದಲೂ, ಬಲಿಚಕ್ರವರ್ತಿ ಸರ್ವಸಮರ್ಪಣ ಭಾವದಿಂದಲೂ ಒಂದೇ ತೆರನಾದ ಕೈವಲ್ಯ ಪದವಿಯನ್ನು ಪಡೆದರೆಂದು ನವವಿಧ ಭಕ್ತಿ ಮಾರ್ಗಗಳ ಮೇಲ್ಮೆಯನ್ನು ನಿದರ್ಶನಪೂರ್ವಕವಾಗಿ ಇಲ್ಲಿ ಹೇಳಿದೆ".[೨]

ಈ ಮೇಲಿನದು ನವವಿಧ ಭಕ್ತಿಮಾರ್ಗದ ವಿಭಜನೆಯಾದರೆ, "ಆ ಭಕ್ತಿಯ ವೈವಿಧ್ಯವನ್ನು ಸಾಧಿಸಿದಂತಹ ಭಕ್ತರ ಸಾಹಿತ್ಯವನ್ನು ಸವಿಯುವ, ರಸಾಸ್ವಾದನೆ ಮಾಡುವ ದೃಷ್ಟಿಯಿಂದ ಆ ಭಕ್ತಿಸಾಹಿತ್ಯವನ್ನು ವಿವಿಧ ಭಕ್ತಿಭಾವಗಳಿಗೆ ಅನುಗುಣವಾಗಿ ಐದು ವಿಭಾಗಗಳಲ್ಲಿ ಅಡಕ ಮಾಡಬಹುದು. ಅವನ್ನು ಪಂಚವಿಧ ಭಾವಗಳೆಂದು ಹೆಸರಿಸಲಾಗಿದೆ. ಇಡೀ ಕೀರ್ತನೆಯ ಭಾವ ವೈವಿಧ್ಯವನ್ನು ಒಟ್ಟಾಗಿ ಅನುಭವಿಸುವಲ್ಲಿ ಈ ಪಂಚಭಾವಗಳ ವಿಭಜನೆಯೇ ಸೂಕ್ತವೆನಿಸುತ್ತದೆ. ದಾಸ್ಯ, ಸಖ್ಯ, ಮಧುರ, ವಾತ್ಸಲ್ಯ, ಮತ್ತು ಶಾಂತ ಇವೇ ಆ ಪಂಚಭಾವಗಳು."[೩]

## ೪.೧ ದಾಸ್ಯ ಭಾವ

ಭಕ್ತನ ಪಾಲಿಗೆ ಭಗವಂತನು ಒಡೆಯನೆನ್ನಿಸಿದರೆ ಭಕ್ತನ ಮಾತು ದಾಸ್ಯಪರವಾಗುವುದು. ಈ ಜಗತ್ತಿನ ಒಡೆಯ, ಸ್ವಾಮಿ, ದೊರೆ ಸರ್ವತಂತ್ರ ಸ್ವತಂತ್ರನಾದ ಶ್ರೀಹರಿ. ಭಕ್ತರೆಲ್ಲರೂ ಅವನ ಸೇವಕರು ಎಂದು ಭಾವಿಸಿ ಆರಾಧಿಸುವುದೇ ದಾಸ್ಯ ಭಕ್ತಿ. ಹೀಗೆ ಭಗವಂತನನ್ನು ಒಡೆಯನೆಂದು, ಭಗವಂತನ ದಾಸರೆಂದು ಆರಾಧಿಸುವ ಭಕ್ತರೇ ಹರಿದಾಸರು. ಅವರ ಸಾಹಿತ್ಯವನ್ನು ದಾಸಸಾಹಿತ್ಯ ಎಂದು ಕರೆಯುವಲ್ಲಿಯೇ ಈ ಭಾವ ಅಂತರ್ಗತವಾಗಿರುವುದನ್ನು ಕಾಣಬಹುದು. ಹರಿದಾಸರಾಗಬೇಕೆಂಬ ಬಯಕೆ ಸಾಮಾನ್ಯವಾಗಿ ಎಲ್ಲಾ ಹರಿದಾಸ ಯತಿಗಳಲ್ಲೂ ಕಾಣಬಹುದು. ಒಬ್ಬ ನಿಜವಾದ ಹರಿದಾಸನ ಲಕ್ಷಣಗಳು ಹೇಗಿರಬೇಕು? ಕೇವಲ ಹರಿದಾಸನಾದರೆ ಸಾಲದು, ಬೂಟಾಟಿಕೆಯ ಬಾಹ್ಯಾಚರಣೆಗಳಿಗಿಂತ ಮುಖ್ಯವಾದುದು ಅಂತರಂಗದ ನಿಜವಾದ ಭಕ್ತಿ. ಭಕ್ತಿಯ ಜೊತೆಗೆ ಸರ್ವಸಮರ್ಪಣ ಮನೋಭಾವ ಅವನದಾಗಿರಬೇಕು ಎಂದು ಶ್ರೀಪಾದರಾಜರು ಪರೋಕ್ಷವಾಗಿ ನುಡಿದಿದ್ದಾರೆ.

**'ಸುಮ್ಮನೆ ವೈಷ್ಣವನೆಂಬಿರಿ ಪರ**
**ಬ್ರಹ್ಮ ಸುಜ್ಞಾನವರಿಯದ ಮನುಜನ'**

**ಮುಖವ ತೊಳೆದು ನಾಮವನಿಟ್ಟೆನಲ್ಲದೆ**
**ಸುಖ ತೀರ್ಥಶಾಸ್ತ್ರವನೋದಿದನೆ**
**ಸುಖಕೆ ಶೃಂಗಾರಕೆ ಮಾಲೆ ಹಾಕಿದವನಲ್ಲದೆ**
**ಭಕುತಿ ರಸದಲ್ಲಿ ಮುಳುಗಿದೆನೇನಯ್ಯ**
**..................................................**

ಗಂಗೆಯಲಿ ಮೈಬಣ್ಣ ತೊಳೆದೆನಲ್ಲದೆ ಭವ
ಹಿಂಗುವ ಸ್ನಾನವ ಮಾಡಿದೆನೆ
ರಂಗವಿಠಲನ ನಿಜವಾದ ದಾಸರ
ಸಂಗ ಸುಖವೆಂದು ತಿಳಿದೆನೇನಯ್ಯ॥

ಈ ಕೀರ್ತನೆಯಲ್ಲಿ ತಮ್ಮ ತೋರಿಕೆಯ ಭಕ್ತಿಯನ್ನು ಚಿತ್ರಿಸಿಕೊಂಡು, ಪ್ರಾಮಾಣಿಕ ಹರಿದಾಸನಾದವನು ಬ್ರಹ್ಮಜ್ಞಾನವನ್ನು ಪಡೆದಿರಬೇಕು. ಸತತ ನಾರಾಯಣ ಕೃಷ್ಣನಿಗೆ ಶರಣು ಎನ್ನುತ್ತಿರಬೇಕು, ಶಾಸ್ತ್ರ ಪುರಾಣಗಳನ್ನು ಓದುತ್ತಿರಬೇಕು. ಹರಿಯಾತ್ರೆ ಮಾಡಬೇಕು, ಹರಿಮೂರ್ತಿ ನೋಡಬೇಕು ಹರಿದಾಸರ ಸಂಘ ಮಾಡಬೇಕು, ಹರಿಸ್ಮರಣೆ ಮಾಡಬೇಕು. ತಮ್ಮಲ್ಲಿ ಈ ಒಂದೂ ಗುಣವೂ ಇಲ್ಲವೆಂದು ವಿನಯವನ್ನು ತೋರಿದ್ದಾರೆ, ವ್ಯಾಸರಾಯರೂ ಸಹ ಇದೇ ಭಾವನೆಯನ್ನು ಒಂದು ಕೀರ್ತನೆಯಲ್ಲಿ ವ್ಯಕ್ತಪಡಿಸಿದ್ದಾರೆ.

ಏನು ಸುಖವೋ ಎಂಥಾ ಸುಖವೋ ಹರಿಯ
ಧ್ಯಾನ ಮಾಡುವವರ ಸಂಗ ಪ

ತಂಬೂರಿ ಮೀಟುತ ದ್ವಯ
ಅಂಬಕದಿ ಬಾಷ್ಪ ಬಿಂದು
ತುಂಬಿ ಆನಂದದಿಂದ
ಸಂಭ್ರಮ ವಾಗಿಹರ ಸಂಗ
..........................................

ನಡೆವುದು ನುಡಿವುದು
ಕೊಡುವುದು ಕೊಂಬುವುದು
ಒಡೆಯನ ಪ್ರೇರಣೆಯೆಂದು
ನುಡಿದು ಹಿಗ್ಗುವರ ಸಂಗ

ಸೃಷ್ಟಿ ಗೊಡೆಯನ ಮನ
ವಿಟ್ಟು ಭಜಿಸುತ ಜ್ಞಾನ
ಶಿಷ್ಟರಾಗಿ ಸಿರಿ ಕೃಷ್ಣ
ಗಿಷ್ಟರಾಗಿಪ್ಪರ ಸಂಗ॥

ಎಂದು ಹರಿದಾಸರ ಸಂಗಕ್ಕೂ, ಗುರುಕರುಣೆಗೂ ಎಣೆಯಿಲ್ಲವೆಂದಿದ್ದಾರೆ. ಹರಿದಾಸರಾದ ಬಗ್ಗೆ ವ್ಯಾಸರಾಯರಿಗೆ ಧನ್ಯತಾ ಭಾವವವಿದೆ. ಇನ್ನೊಂದು ಕೀರ್ತನೆಯಲ್ಲಿ ತಮ್ಮ ಶಿಷ್ಯರಾದ ಪುರಂದರ ದಾಸರ ಬಗ್ಗೆ ಮೆಚ್ಚುಗೆಯನ್ನು ಸೂಸುತ್ತಾ, ಒಬ್ಬ ಆದರ್ಶ ಹರಿದಾಸ ಹೇಗಿರಬೇಕೆಂದು

ಹೇಳಿದ್ದಾರೆ.

**ದಾಸರೆಂದರೆ ಪುರಂದರದಾಸರಯ್ಯ ಪ**

**ವಾಸುದೇವ ಕೃಷ್ಣನ್ನ ಸೂಸಿ ಪೂಜಿಸುವ ಅ.ಪ.**

**ಗ್ರಾಸಕ್ಕಿಲ್ಲದೆ ಪೋಗಿ ಪರರ ಮನೆಗಳ ಪೊಕ್ಕು**
**ದಾಸನೆಂದು ತುಲಸಿ ಮಾಲೆಯ ಧರಿಸಿ**
**ಬೇಸರಿಲ್ಲದೆ ಅವರ ಕಾಡಿ ಬೇಡಿ ಬಳಲಿಸುತ**
**ಕಾಸುಗಳಿಸುವ ಪುರುಷನವ ದಾಸನೇ**

ಹೀಗೆ ಪುರಂದರದಾಸ ದಾಸಗುಣವನ್ನು ಮೆಚ್ಚಿಕೊಂಡು, ಹಾಗೆಯೇ ಡಾಂಭಿಕ ದಾಸರನ್ನು ಹೀಯಾಳಿಸಿದ್ದಾರೆ. 'ಹರಿದಾಸರ ಸಂಗವೊಂದಿದ್ದರೆ ದುರಿತ ಭಯವೂ ಇಲ್ಲ, ನರಕದ ಭೀತಿಯೂ ಇಲ್ಲ' ಎಂದಿದ್ದಾರೆ. ತಮ್ಮಲ್ಲಿರುವ ಭಗವಂತನನ್ನು ತಿಳಿಯದ ತಮಗೆ ಭಗವಂತನನ್ನು ತೋರಿಸಿಕೊಟ್ಟವರು ಹರಿದಾಸರು ಎಂಬುದನ್ನು ಮತ್ತೊಂದು ಸುಳಾದಿಯಲ್ಲಿ ತೋಡಿಕೊಂಡಿದ್ದಾರೆ.

**ನಿಧಿಯ ಮೇಲೆ ಇದ್ದು ನಿಧಿಯನರಿಯದಂತೆ**
**ತನ್ನ ಕಂಠಮಣಿಯ ತಾ ಮರೆತಂತೆ**
**ಕಣ್ದೆರೆಯದ ಹಸುಳೆ ತಾಯನರಿಯದಂತೆ**
**ಎನ್ನಲ್ಲಿ ಹೊಂದಿಪ್ಪ ನಿನ್ನನರಿಯದಂತೆ**
**ನಿನ್ನ ತೋರಿದರೆನಗೆ ನಿನ್ನ ದಾಸರು ಸಿರಿಕೃಷ್ಣ**

ಎಂದು ಮೊರೆ ಹೊಕ್ಕರೆ, ವಾದಿರಾಜರು 'ಆಶಾಪಾಶದಿ ಸಿಲುಕಿ, ಘಾಸಿಪಟ್ಟೆನೊ ಬಹಳ ವಾಸುದೇವನೆ ನಿನ್ನ ದಾಸನೆಂದೆನಿಸೆನ್ನ ಎಂದು ಹರಿಯ ದಾಸ್ಯವನ್ನು ಬಯಸಿದ್ದಾರೆ.

'ವ್ಯಾಸತತ್ವಜ್ಞರು ಭಗವಂತನಲ್ಲಿ ದಾಸ್ಯ ಭಕ್ತಿಗಾಗಿ ಹಂಬಲಿಸಿರುವುದು ಅನನ್ಯವಾಗಿದೆ. 'ಅನ್ಯ ಸಾಧನೆಗಳು ಕೊಡು ಕೊಡದಲೆ ಬಿಡು, ಉಣಿಸೆನ್ನಯ ಕರ್ಮ ಪಣ್ಣಾದರೆ, ಘನ್ನ ವಾಸುದೇವವಿಠಲರೇಯ ನಿನ್ನ ಚರಣಸ್ಮೃತಿ ಅನವರತವೀಯೋ' ಎಂದಿದ್ದಾರೆ ದೇವರು ಬೇರೇನಾದರೂ ಕೊಡಲಿ, ಕೊಡದಿದ್ದರೆ ಬಿಡಲಿ ಹರಿಸೇವೆ ಮತ್ತು ಹರಿದಾಸತನ ಜನ್ಮ ಜನ್ಮಕ್ಕೂ ಇರಲಿ ಎಂಬುದು ವ್ಯಾಸ ತತ್ವಜ್ಞರ ಅಪೇಕ್ಷೆ. ವಿದ್ಯಾರತ್ನಾಕರ ತೀರ್ಥರು

**ಗೋಪಾಲ ಪಾಲಿಸೊ**
**ನಿನ್ನ ಪಾದಸೇವಕನಿವನೆಂದು ನೀ ಭಾವಿಸಿ**
**ಗೋಪಾಲ ಪಾಲಿಸೊ** **ಪ**

ಎಂದು ಭಗವಂತನ ಮೊರೆ ಹೋಗಿದ್ದಾರೆ. ವಿದ್ಯಾಪ್ರಸನ್ನ ತೀರ್ಥರು ಒಂದು ಕೀರ್ತನೆಯಲ್ಲಿ

**ಶರಣಾಗತಿಯೊಂದೇ ಸಾಧನ**
**ಶರಣಾಗತನಾದೆ ಮಾಧವ** **ಪ**

**ಶರಣಾಗತಿಯಿಂದ ಹರಿಯ ಪ್ರಸಾದವು**
**ಹರಿಯ ಪ್ರಸಾದವು ಪುರುಷಾರ್ಥಕೆ ಸಾಧನ** **ಅ.ಪ**
..............................................................

**ಹರಿಯ ತ್ರಿವಿಧ ಪೂಜೆಗಳಲಿ ರತಿಯು**
**ಹರಿಯ ಪ್ರಸನ್ನತೆಯಲಿ ನಂಬುಕೆಯು**
**ಹರಿದಾಸನು ನಾನೆಂಬುವ ನಂಬಿಕೆ**
**ಶರಣಾಗತಿಯಿದು ಮೋಕ್ಷ ಫಲಕೆ ಸಾಧನ**

ಹೀಗೆ ಕಾಯ, ವಾಚ, ಮನಸಾ ಭಗವಂತನಿಗೆ ಸಂಪೂರ್ಣ ಶರಣಾಗತರಾಗಿದ್ದಾರೆ. ಸೋದೆ ಮಠದ ವಿಶ್ವೇಂದ್ರ ತೀರ್ಥರು 'ನಿನ್ನ ದಾಸರ ತಪ್ಪನೆಣಿಸದೆ ಪೊರೆಯುವೆ ನಾನೊಬ್ಬ ದಾಸನೆಂದರಿದು ನೀ ಪೊರೆಯೋ' ಎಂದು ದಾಸ್ಯವನ್ನು ಬೇಡಿದರೆ, ಮತ್ತೊಂದು ಕೀರ್ತನೆಯಲ್ಲಿ

**ದಾಸಗೆ ಭಯವೆಲ್ಲಿ**
**ವಾಸವನನುಜನ**
**ದಾಸಗೆ ಭಯವೆಲ್ಲಿ** **ಪ**

..............................
**ರಾಜಾಧಿರಾಜನಿಗೂ ಭಯವೆಂದೂ ತಪ್ಪದು**
**ರಾಜೇಶ ಹಯಮುಖನೊಲಿದವನಿಗೆ ಭಯ**

ರಾಜಾಧಿರಾಜನಿಗೂ ಭಯ ಎಂದಿಗೂ ತಪ್ಪದು, ಆದರೆ ಭಗವಂತನಾದ ದಾಸರಿಗೆ ಭಯವೆಂದಿಗೂ ಬಾರದು ಎಂದಿದ್ದಾರೆ. ಹೀಗೆ ಎಲ್ಲಾ ಹರಿದಾಸ ಯತಿಗಳೂ ಹರಿದಾಸರಾಗಬೇಕೆಂದು ಹಂಬಲಿಸಿ, ಹಲವು ರೀತಿಗಳಲ್ಲಿ ಪರಿತಪಿಸಿ ಅದಕ್ಕಾಗಿ ಭಗವಂತನ ಮೊರೆ ಹೋಗಿದ್ದಾರೆ. ಕಡೆಗೆ ಸರ್ವವನ್ನು ಹರಿಗೆ ಒಪ್ಪಿಸಿ ನಿಶ್ಚಿಂತೆಯಿಂದ ಬದುಕುತ್ತಾರೆ.

ಹರಿದಾಸರು ಹರಿಯದಾಸ್ಯ ಮತ್ತು ಹರಿದಾಸರ ದಾಸ್ಯ ಎರಡನ್ನು ಭಕ್ತಿಯಿಂದ ಸ್ವೀಕರಿಸುತ್ತಾರೆ. ಹರಿದಾಸ್ಯದಂತೆಯೇ ಹರಿದಾಸರ ದಾಸ್ಯವು ದಾಸರಿಗೆ ಹೆಚ್ಚು ಪ್ರಿಯವಾದದ್ದು. ಶ್ರೀಪಾದರಾಜರು 'ವಾಸುದೇವ ನಿನ್ನ ದಾಸರ ದಾಸ್ಯವ ಕೊಡು' ಎಂದು ಬೇಡಿದರೆ, ವ್ಯಾಸರಾಯರು 'ಚಿತ್ತವಕೊಟ್ಟು ಕಾಯಿ ಕಂಡ್ಯ ಮತ್ತೊಬ್ಬ ನಾನಲ್ಲ ನಿನ್ನ ಭೃತ್ಯರ ಭೃತ್ಯು' ಎಂದಿದ್ದಾರೆ. ವಾದಿರಾಜರು ತಮ್ಮ ಅಕಾರ್ಯಗಳನ್ನು ತೆರೆದಿಟ್ಟು, ತಾವು ಹೇಗೆ ಭಗವಂತನ ದಾಸರ ದಾಸರಾಗಲು ಸಾಧ್ಯ ಎಂದು ಪರಿತಪಿಸಿದ್ದಾರೆ. 'ನಿನ್ನ ದಾಸರ ದಾಸನೆಂತಾಹೆನೈ ಕೃಷ್ಣ ಅನ್ನಂತ ಅಪರಾಧಕಾಕರದವನು' ಎಂದು ಕಳವಳಿಸಿದ್ದಾರೆ. ಇದೇ ಭಾವವನ್ನು ವಿದ್ಯಾರತ್ನಾಕರ ತೀರ್ಥರಲ್ಲಿಯೂ ಕಾಣಬಹುದು. 'ದಾಸರದಾಸರ ದಾಸ ದಾಸನಾಗುವೆನೆಂದು, ಬೇಡುವೆ ದಯಾಸಿಂಧೂ ನೀಡು ವರವ ಬಂಧೋ' ಎಂದು ಭಗವಂತನ ಮೊರೆ ಹೋಗಿದ್ದಾರೆ.

ಮುಂದೆ ತಮ್ಮ ಮೇಲೆ ತಾವೆ ದಾಸ್ಯ ಭಕ್ತಿಯನ್ನು ಆರೋಪಿಸಿಕೊಂಡು ಭಗವಂತ ತಮ್ಮ ಒಡೆಯನೆಂದು ನಾವು ಅವನ ಸೇವಕರೆಂದು ಸಾಧನೆ ಮಾಡಿರುವುದನ್ನು ಎಲ್ಲ ಹರಿದಾಸ ಯತಿಗಳಲ್ಲೂ ಕಾಣಬಹುದು. ಹರಿದಾಸರ ಆರ್ತನಾದ, ದೈನ್ಯವಾಣಿ ತುತ್ತತುದಿಗೇರಿರುವುದನ್ನು ಇಲ್ಲಿ ಕಾಣಬಹುದು.

**ಬಾರೋ ಮನೆಗೆ ಗೋವಿಂದ ನಿನ್ನಂಘ್ರಿಕಮಲವ**
**ತೋರೊ ಎನಗೆ ಮುಕುಂದ ನಲಿದಾಡು ಮನದಲಿ**
**ಮಾರಪಿತ ಆನಂದ ನಂದನ್ನ ಕಂದ**
**.................................................................... ಪ**

**ನೀನೆಗತಿ ಎನಗಿಂದು ಉದ್ಧರಿಸೊ ಬ್ಯಾಗನೆ**
**ದೀನ ಜನರಿಗೆ ಬಂಧು ನಾ ನಿನ್ನ ಸೇವಕ**
**ಶ್ರೀನಿವಾಸ ಎಂದೆಂದೂ-ಕಾರುಣ್ಯ ಸಿಂಧೂ॥**

ಹೀಗೆ ತಾವು ಅವನ ಸೇವಕರೆಂದು ತಮ್ಮನ್ನು ಉದ್ದರಿಸಬೇಕೆಂದು ಅವರು ಭಿನ್ನೈಸಿರುವ ರೀತಿ ಅನನ್ಯವಾದುದು. ಶ್ರೀವ್ಯಾಸರಾಯರೂ ತಮ್ಮ ಒಂದು ಸುಳಾದಿಯಲ್ಲಿ ಈ ಸ್ವಾಮಿ-ಸೇವಕ ಸಂಬಂಧವನ್ನು ಬಹಳ ಸ್ಪಷ್ಟವಾಗಿ ನಿರ್ದೇಶಿಸಿದ್ದಾರೆ.

**ಆಳಿದ ನೀನು ನಿನ್ನಾಳು ನಾನು**
**ತಂದೆ ನೀನು ನಿನ್ನ ಕಂದ ನಾನು**

ಶರಣ್ಯ ನೀನು ನಿನ್ನ ಶರಣಾಗತ ನಾನು
ದಯಾಳು ನೀನು ನಿನ್ನ ದಯಕೆ ಪಾತುರ ನಾನು
ನೋವ ನೋಡಿನ್ನು ಕಾವರಾರಿಲ್ಲೆಂದು
ಶ್ರೀಕೃಷ್ಣ ಎನ್ನನು ಕಾಯಬೇಕೈ ತಂದೆ[೧೩]

ಎಂದು ಆ ಸ್ವಾಮಿಯೆದುರು ಕೈಜೋಡಿಸಿದ್ದಾರೆ. ಇಲ್ಲಿ ವ್ಯಾಸರಾಯರು ದಾಸ್ಯ ಭಾವದ ಪರಾಕಾಷ್ಠೆಯನ್ನು ತಲುಪಿದ್ದಾರೆ. ವಾದಿರಾಜರು ತಾವು ಶ್ರೀಹರಿಯ ಸೇವಕನೆಂದು ಒಪ್ಪಿಕೊಂಡು 'ಸೇವಕನೆಲೊ ನಾನು, ನಿನ್ನಯ ಪಾದ ಸೇವೆ ನೀಡಲೊ ನೀನು' ಎಂದು ಪ್ರಾರ್ಥಿಸಿದರೆ, ಮತ್ತೊಂದೆಡೆ 'ಬಿಡೆನೊ ಬಿಡೆನೊ ನಿನ್ನ ಚರಣ ಕಮಲವ, ಎನ್ನ ಹೃದಯಮಧ್ಯದೊಳಿಟ್ಟು ಭಜಿಸುವೆ ಅನುದಿನ, ಎಂದು ದೇವರಲ್ಲಿ ದೃಢವಾದ ಅಚಲವಾದ ನಂಬಿಕೆಯನ್ನು, ವಿಶ್ವಾಸವನ್ನು ವ್ಯಕ್ತಪಡಿಸಿದ್ದಾರೆ.

"ದಾಸ್ಯ ಭಕ್ತಿ ಸರ್ವ ಸಮರ್ಪಣ ಮನೋಭಾವವನ್ನು ಮೂಡಿಸುತ್ತದೆ. ಬದುಕಿನ ಸುಖ–ದುಃಖಗಳ ಬಗ್ಗೆ ತಟಸ್ಥ ಭಾವನೆಗಳನ್ನು ಉಂಟು ಮಾಡುತ್ತದೆ. ಹರಿಸರ್ವೋತ್ತಮತ್ವದ ನಂಬಿಕೆಯನ್ನು ದೃಢಪಡಿಸುತ್ತದೆ. ಈ ಕಾರಣದಿಂದಲೇ ಹರಿದಾಸ ಯತಿಗಳು ಮತ್ತು ಹರಿದಾಸರು ಹರಿಯ ದಾಸ್ಯ ಮತ್ತು ಹರಿದಾಸರ ದಾಸ್ಯ ಎರಡನ್ನು ಭಕ್ತಿಯಿಂದ ಸ್ವೀಕರಿಸಿರುತ್ತಾರೆ. 'ಸೋಹಂ' ಭಾವನೆಯು ಅಭಿಮಾನ ಗರ್ವಕ್ಕೆ ಕಾರಣವೆಂದು ಭಾವಿಸಿದ ದಾಸರು ದಾಸ್ಯ ಭಾವಕ್ಕೆ ಮನ್ನಣೆ ನೀಡಿದರು. ರೋಗ ರುಜಿನಗಳ ಬಾಧೆ, ಹುಟ್ಟು ಸಾವುಗಳ ಆವರ್ತನೆ, ಅರಿಷಡ್ವರ್ಗಗಳ ಉಪಟಳ, ಬದುಕಿನ ಕಷ್ಟ ಎಲಕ್ಕೂ ದಾಸತ್ವದ ಮೂಲಕವೇ ಪರಿಹಾರವನ್ನು ಕಂಡುಕೊಂಡರು. ತಮ್ಮ ಮಾರ್ಗದಲ್ಲೇ ನಡೆಯಲು ಉಪದೇಶಿಸಿದರು".[೧೩]

## ೪.೨ ಸಖ್ಯಭಾವ

ಭಗವಂತನನ್ನು ಗೆಳೆಯ ಒಡನಾಡಿ, ಆಪ್ತ ಎಂಬ ಭಾವನೆಯಿಂದ ಆರಾಧಿಸುವುದೇ ಸಖ್ಯಭಕ್ತಿ, "ಈ ಸ್ನೇಹದ ಪರಿಧಿಯಲ್ಲಿ ಭಕ್ತನಾದವನು ದೇವರನ್ನು ಪ್ರಶ್ನಿಸುವ, ದಂಡಿಸುವ ಮೂದಲಿಸುವ, ಪರಿಹಾಸ್ಯ ಮಾಡುವ ಹಕ್ಕನ್ನು ಸ್ಥಾಪಿಸಿಕೊಳ್ಳುತ್ತಾನೆ. ಭಕ್ತನ ಈ ರೀತಿಯ ಭಗವದಾರಾಧನೆಯಿಂದ ಭಗವಂತನ ಸಲಿಗೆಗಳು ಬೇಕೆಂಬ ಅವನ ಆಂತರಿಕ ಅಭಿಲಾಷೆ ನಮಗೆ ಅರಿವಾಗುತ್ತದೆ".[೧೪]

"ಸಖ್ಯ ಭಾವವನ್ನು ಪ್ರತಿಪಾದಿಸುವಲ್ಲಿ ಹರಿದಾಸರು ರಚಿಸಿರುವ ನಿಂದಾಸ್ತುತಿಯ ಕೀರ್ತನೆಗಳು ಪ್ರಧಾನ ಪಾತ್ರ ವಹಿಸುತ್ತವೆ."[೧೫] ಭಕ್ತನಾದವನು ಭಗವಂತನ ದಾಸನಾದ ಮೇಲೆ ಭಗವಂತನಲ್ಲಿ ಸಲಿಗೆ ಬೆಳೆಯುವುದು ಸಹಜ. ಭಕ್ತಿಗೆ ಒಲಿಯುವವನೂ ಭಕ್ತಿಪ್ರಿಯನಾದವನು ಭಗವಂತ. ಅರ್ಜುನನಿಗೆ ಬಂಡಿಯ ಬೋವನಾದದ್ದು, ಬಲಿಯ ಮನೆಯ ಬಾಗಿಲು ಕಾದ್ದದ್ದು, ಈ ಗೆಳೆತನ ಆತ್ಮೀಯತೆಯೇ ಸಖ್ಯ ಭಾವದ ಅಡಿಪಾಯ. ಶ್ರೀಪಾದರಾಜರು ಶ್ರೀಕೃಷ್ಣನಲ್ಲಿ ಅತ್ಯಂತ ಆತ್ಮೀಯ ಭಾವದಿಂದ ನಡೆದುಕೊಂಡ ಒಂದು ಕೀರ್ತನೆ ಹೀಗಿದೆ.

**ಮರೆತೆಯೆನೋ ರಂಗಾ ಮಂಗಳಾಂಗ**
**ತುರು-ಕರು ಕಾಯ್ವಲ್ಲಿ ತೊಂಡನಾಗಿದ್ದೆನ್ನ ಪ**

**ಕೋಲು ಕೈಯಲ್ಲಿ ಕೊಳಲು ಜೋಲುಗಂಬಳಿ ಹೆಗಲ**
**ಮ್ಯಾಲೆ ಕಲ್ಲಿ ಚೀಲ ಕೊಂಕಳಲ್ಲಿ**
**ಕಾಲುಗಡಗವನಿಟ್ಟು ಕಾಡೊಳಿಹ ಪಶುಹಿಂಡ**
**ಲಲಾಸುವ ಬಾಲಕರ ಮ್ಯಾಳದೊಳಗಿದ್ದೆನ್ನ**

**ಕಲ್ಲುಮಣಿ ಕವಡೆಯನು ಕಾಡೊಳಿಹ ಗುಲಗಂಜಿ**
**ಸಲ್ಲದೊಡವೆಯ ನೀನು ಸರ್ವಾಂಗಕೆ**
**ಅಲ್ಲೆಸೆಯೆ ಧರಿಸಿ ನವಿಲುಗರಿಗಳ ಗೊಂಡೆ**
**ಅಲ್ಲಿಗೊಲ್ಲರ ಕೂಡ ಚೆಲ್ಲಾಟ ಮಾಡುತಲಿ**

**ಸಿರಿದೇವಿ ಬಂದು ಸೇರಿದ ಬಳಿಕ ಲೋಕದಲಿ**
**ಸಿರಿ ಅರಸನೆಂದು ಸೇವಕರರಿವರೋ**
**ಶರಣಾಗತರ ಪೊರೆವ ಶ್ರೀರಂಗವಿಠಲಯ್ಯ**
**ನರಸಿಂಗ ನೀನಿರುವ ಪರಿಯು ಮುಂದಿನ ಸಿರಿಯು**[೧೬]

ಶ್ರೀಪಾದರಾಜರು ಚಿಕ್ಕಂದಿನಲ್ಲಿ ದನಕರುಗಳನ್ನು ಕಾಯುತ್ತಿದ್ದರೆಂದು ನಂಬಿಕೆ ಇದೆ. ಶ್ರೀ ಕೃಷ್ಣನೂ ಗೋಪಾಲಕಾನಾಗಿದ್ದವನು. ಇಬ್ಬರೂ ಬಾಲ್ಯದಲ್ಲಿ ಆತ್ಮೀಯತೆಯಿಂದ ಒಡನಾಟದಿಂದ ಬೆಳೆದ ಚಿತ್ರಣವಿದೆ. ಈ ರೀತಿ ತಮ್ಮೊಡನೆ ಆಟ-ಪಾಠಗಳಲ್ಲಿ ಭಾಗಿಯಾಗುತ್ತಿದ್ದ ಕೃಷ್ಣ ಲಕ್ಷ್ಮಿಯನ್ನು ಕೈ ಹಿಡಿದ ಮೇಲೆ, ತಮ್ಮಿಂದ ತಮ್ಮ ಗೆಳೆಯರಿಂದ ದೂರವಾದನೆಂದೂ, ಅಲ್ಲಿಂದ ಮುಂದೆ ತಾವು ಭಗವಂತನ ಸೇವಕರಾದೆವೆಂದು ಭಾವಿಸಿರುವುದಾಗಿ ಶ್ರೀಪಾದರಾಜರು ಹೇಳಿದ್ದಾರೆ. ಈ ಇಡೀ ಕೀರ್ತನೆಯಲ್ಲಿ ಶ್ರೀಪಾದರಾಜರು ವ್ಯಕ್ತಪಡಿಸಿರುವ ಸಖ್ಯಭಾವ

ಅನನ್ಯವಾದುದು.

ವ್ಯಾಸರಾಯರು ಬಹಳ ಪರಿಹಾಸ್ಯ ಮಾಡುತ್ತಾ 'ಏನ ಬೇಡಲಿ ನಿನ್ನ ದೇವಾಧಿದೇವ. ಏನಹುದೊ ನಿನ್ನೊಳಗೆ ಮಹಾನುಭಾವ' ಎಂದು ವ್ಯಂಗ್ಯವಾಗಿ ಪ್ರಶ್ನಿಸುತ್ತಾ, 'ಮನೆಯ ಬೇಡಲೆ ವನಧಿ ಹಾಸಿಗೆಯ ವಟಪತ್ರ ....... ತಿನ್ನುವುದಕ್ಕೆ ಬೇಡಲೆ ನವನೀತ ಚೋರ, ಒಡವೆಗಳ ಬಯಸೆ ಶಿಖಿಪಿಂಛ ತುಳುಸಿ ಪತ್ರ, ಉಡುವುದಕೆ ಕೇಳುವೆನೆ ಸ್ತ್ರೀವಸನ ಚೋರ' ಎಂದು ಹೀಗೆ ನಾನಾ ಪರಿಯಾಗಿ ದೂಷಿಸುತ್ತಾ, ದೇವರಲ್ಲಿನ ತಮ್ಮ ಅಚಲವಾದ ನಂಬಿಕೆಗೆ ಭಂಗ ಬಾರದಂತೆ 'ಭಕ್ತರನು ವಂಚಿಸುತ ಬಚ್ಚಿಟ್ಟಿರುವ ಮುಕ್ತಿ ಕಾಂತೆಯ ಕೊಡು ಸುಖಿಪೆನೊ ಶ್ರೀಕೃಷ್ಣಾ' ಎಂದು ಬೇಡುವಲ್ಲಿ ಅವರ ಹುಸಿ ಕೋಪವು ಕರಗಿ ಮೊನಚಾದ ನಿಂದನೆಯ ಮಾತುಗಳೆಲ್ಲಾ ಸ್ತುತಿಯಾಗಿ ಮಾರ್ಪಾಡಾಗಿದೆ.

ವಾದಿರಾಜರು ಭಗವಂತನನ್ನು ನಿಂದಿಸುತ್ತಾ ಅವನ ದಶಾವತಾರವನ್ನು ವರ್ಣಿಸಿದ್ದಾರೆ.

**ಹ್ಯಾಂಗೆ ಕೊಟ್ಟನು ಹೆಣ್ಣ ಸಾಗರನು ಈ ವರೆಗೆ** ಪ

**ಶೃಂಗಾರ ಪುರುಷರು ಬಹುಮಂದಿಯಿರಲು** ಅ. ಪ.

**ಗುಪ್ತನಾರುವ ಮೈಯ್ಯಿ ಬಿಟ್ಟಿದ್ದ ಬಿರುಗಣ್ಣು**
**ಮುಟ್ಟನೋಡಿದರೆ ಮೈಯತಿ ಕಠಿಣವು**
**ಸೊಟ್ಟ ಮೋರೆಯು ಇವಗೆ ಎಷ್ಟುದ್ದ ಹಲ್ಲುಗಳು**
**ಇಷ್ಟು ಘೋರಮುಖದಳಿಯನೆಲ್ಲಿ ದೊರೆಕಿದನೊ**

**ಬಡವನು ಭಿಕ್ಷುಕನು ಬಡಬನಂದದಿ ಕೋಪವು**
**ನೋಡಿದರೆ ತಲೆ ಜಟಿಯು ಕಟ್ಟಿಹುದು**
**ಬೆಡಗುನುಡಿಗಾರ ಜಾರ ಚೋರನಿಗೆ**
**ನೋಡಿ ನೋಡಿ ಹೆಣ್ಣ ಹ್ಯಾಂಗೆ ಕೊಟ್ಟನು**

**ಭಂಡನಾಗಿರುವನು ಕಂಡವರೊಡನೆ ಕಾಳಗವ**
**ಕೊಂಡುಬಹ ಬಲು ಉದ್ದಂಡನಿವನು**
**ಅಂಡಜವಾಹನಗೆ ಯೋಗ್ಯವಾದ ಹೆಣ್ಣ**
**ಕಂಡುಕಂಡೀ ಹಯವದನಗೆ ಕೊಟ್ಟನ್ಹ್ಯಾಗೆ॥**

ಶ್ರೀಹರಿಯ ವಿಕಾರರೂಪವನ್ನು ವಿಚಿತ್ರಗಳನ್ನು ವರ್ಣಿಸುತ್ತಾ, ಇಂಥವನಿಗೆ ಸುಲಕ್ಷಣೆಯೂ, ಚೆಲುವೆಯೂ ಆದ ತನ್ನ ಮಗಳನ್ನು ಸಮುದ್ರರಾಜ ಹೇಗೆ ಧಾರೆಯೆರೆದು ಕೊಟ್ಟ ಎಂದು ಆಶ್ಚರ್ಯ ವ್ಯಕ್ತಪಡಿಸಿದ್ದಾರೆ. ಮೇಲ್ನೋಟಕ್ಕೆ ಶ್ರೀಹರಿಯನ್ನು ಹಿಗ್ಗಾ ಮುಗ್ಗಾ ಬೈದಿದ್ದರೂ ಆಯಾ ಅವತಾರಗಳಲ್ಲಿ ಎಂತೆಂತಹ ದುಷ್ಟರನ್ನು ಸಂಹರಿಸಿ ಲೋಕಕಲ್ಯಾಣಕ್ಕೆ ಕಾರಣವಾದನೆಂದು ಹೇಳುತ್ತಾ ಆ ಮೂಲಕ ದಶಾವತಾರ ಸ್ತುತಿ ಮಾಡಿರುವುದು ಈ ಕೀರ್ತನೆಯ ವೈಶಿಷ್ಟ್ಯವಾಗಿದೆ. 'ಹ್ಯಾಂಗೆ ಮೆಚ್ಚಿದೆ ಹೆಂಗಳೆಯರನ್ನೆ, ಹಲವು ರೂಪ ತಾಳಿದವನ, ಎಂದು ಪ್ರಾರಂಭವಾಗುವ ಮತ್ತೊಂದು ಕೀರ್ತನೆಯಲ್ಲೂ ಇದೇ ಭಾವ ವ್ಯಕ್ತವಾಗಿದೆ. ಶ್ರೀಹರಿಯ ವಿಕಾರರೂಪವನ್ನು ಬಣ್ಣಿಸುತ್ತಾ ಇಂಥವನನ್ನು ಹೇಗೆ ಮೆಚ್ಚಿದೆಯೆಂದು ಲಕ್ಷ್ಮಿದೇವಿಯನ್ನೇ ಕೇಳುತ್ತಾ ಅಣಕವಾಡಿದ್ದಾರೆ. ಇಲ್ಲಿಯೂ ಹರಿಯ ಅವತಾರಗಳನ್ನು ಅವನ ಅದ್ಭುತ ಸಾಮರ್ಥ್ಯಗಳನ್ನು ವರ್ಣಿಸಿದ್ದಾರೆ.

ವ್ಯಾಸತತ್ವಜ್ಞರು 'ಜ್ಞಾನಾನಂದ ಬಲದಿ ಎನಗಿಂತ ಕೃಷ್ಣಯ್ಯ ನಿನಗೇನು ಮಿಗಿಲಿದೆ'[೧೮] ಎಂಬ ನಿಂದಾಸ್ತುತಿ ಕೀರ್ತಿನೆಯಲ್ಲಿ "ಜ್ಞಾನ, ಆನಂದ, ಶಕ್ತಿ ಇವುಗಳಲ್ಲಿ ಭಕ್ತ ದೇವರಿಗಿಂತ ಕಡಿಮೆಯಿಲ್ಲ. ದೇವರು ಸತ್ಯವನ್ನು ಮಾತ್ರಬಲ್ಲ. ಭಕ್ತ ಸತ್ಯಮಿಥ್ಯೆಗಳೆರಡನ್ನೂ ಬಲ್ಲ. ಇಡೀ ಜಗತ್ತಿನ ಸೃಷ್ಟಿ, ಸ್ಥಿತಿ ಲಯ ಮಾಡುವ ಶಕ್ತಿಯನ್ನು ಭಗವಂತ ಹೊಂದಿದ್ದರೆ, ಭಕ್ತಿಯೇ ಭಕ್ತನ ಬಲವಾಗಿದೆ. ಸ್ವಾಮಿಯಾಗಿ ಸುಖಿಸುವ ಸೌಖ್ಯ ದೇವರದು. ದಾಸನಾಗಿ ಸುಖಿಸುವ ಸೌಖ್ಯ ಭಕ್ತನದು, ಇದರ ಜೊತೆಗೆ ಜ್ಞಾನ, ಭಕ್ತಿ, ವೈರಾಗ್ಯ ಸುಖಗಳನ್ನು ಹರಿಯೇ ಕರುಣಿಸಿದ್ದಾನೆ. ತಾನು ತೋರಿದ ಕರುಣೆಗೆ ತಾನೇ ವಿವಶನಾಗಿರುವ ದೇವರು ಭಕ್ತ ಏನೆಂದರೂ ಕೋಪಿಸಿಕೊಳ್ಳುವುದಿಲ್ಲ ಹೀಗೆ ಭಕ್ತ ದೇವರಲ್ಲಿ ತೋರುವ ಸಖ್ಯಭಾವದ ನಿರೂಪಣೆ ಇಲ್ಲಿದೆ".[೧೯]

ವಿದ್ಯಾರತ್ನಾಕರ ತೀರ್ಥರು ಒಂದು ನಿಂದಾಸ್ತುತಿಯ ಕೀರ್ತನೆಯಲ್ಲಿ

**ಶಾರದೇಂದುಮುಖಿ ನೀರಜನಯನಳೆ**
**ಬಾರೆಲೆ ಬಾಗಿಲ ತೆಗಿಯಲೆ ಭಾಮೆ** **ಪ**

**ಯಾರಯ್ಯ ಬಾಗಿಲ ಹೊರಗೆ ನಿಂತಿರುವನು**
**ಜಾರ ಪುರುಷನಂತೆ ತೋರುವೆ ನೀನು** **ಅ. ಪ.**

.........................................................

**ಈ ಪರಿ ಸರಸವನಾಡುವ ನಾಮಗಿರಿ**
**ನರಹರಿ ರೂಪ ರಮಾ ರಮೇಶರು**
**ವಿಹರಿಪ ಬಗೆಯನು ಸ್ಮರಿಸುವ ಸುಜನರ**
**ಪರಮಪುರುಷ ಹರಿ ಪೊರೆವುದು ನಿಜ**[೨೦]

ಬಾಗಿಲ ತೆರೆಯಲೆ ಭಾಮೆ ಎಂದು ಪ್ರಾರಂಭವಾಗುವ ಈ ಸುದೀರ್ಘ ಕೀರ್ತನೆಯಲ್ಲಿ ಪ್ರತಿಯೊಂದು ನುಡಿಯಲ್ಲಿಯೂ ಭಗವಂತನ ದಶಾವತಾರಗಳಲ್ಲಿ ಒಂದೊಂದನ್ನು ತಿಳಿಯಾಗಿ ವ್ಯಂಗ್ಯಮಾಡುತ್ತಾ ಇಂಥ ವೇಷಧಾರಿಯಾದ 'ರಮಾ ರಮೇಶರು ವಿಹರಿಪ ಬಗೆಯನು ಸ್ಮರಿಸುವ ಸುಜನರ ಪರಮಪುರುಷ ಹರಿ ಪೊರೆವುದು ನಿಜ' ಎಂದು ಶ್ರೀಹರಿಯಲ್ಲಿ ಅಚಲವಾದ ವಿಶ್ವಾಸ ವ್ಯಕ್ತಪಡಿಸಿದ್ದಾರೆ.

ವಿದ್ಯಾಪ್ರಸನ್ನ ತೀರ್ಥರು ಕೃಷ್ಣನನ್ನು ನಿಂದಿಸುತ್ತಲೇ ಅವನ ಲೀಲಾ ವಿನೋದಗಳನ್ನು ಚಿತ್ರಿಸಿದ್ದಾರೆ.

**ಏತಕೆ ಈ ಪರಿ ಮೋಸ ವಚನಗಳು**
**ನಾಚಿಕೆಯಿಲ್ಲವೇನೋ ಕೃಷ್ಣ** **ಪ**

**ಯೋಚಿಸುತಿರೆ ನಿನ್ನ ಸತತ ಮನದಲಿ**
**ಯೋಚಿಸುತಿರುವೆಯೋ ಪರರನ್ನು** **ಅ. ಪ.**

**............................**
**ಅಂತರಂಗಗಳನರಿಯಲು ನಿನ್ನಯ**
**ತಂತ್ರಗಳೆಲ್ಲವು ನಟನೆಗಳು**
**ಚಿಂತೆಯ ಪಡದೆ ಸ್ವತಂತ್ರನಾಗಿರುವೆ**
**ಸಂತಸದಲಿ ಪ್ರಸನ್ನನಾಗೆಲೊ** ಎಂದಿದ್ದಾರೆ[೨೧]

ಮತ್ತೊಂದು ಕೀರ್ತನೆಯಲ್ಲಿ 'ನೀನೆ ಅನಾಥನಾಗಿರಲು ಅನ್ಯರಿಗೆ ಏನು ದಾನವ ನೀ ಮಾಡುವೆಯೋ, ಎಂದು ಭಗವಂತನನ್ನೇ ಪ್ರಶ್ನಿಸುತ್ತಾ, ಅವನ ಅನಂತ ಅವತಾರಗಳನ್ನು ಅಪರಿಮಿತವಾದ ಶಕ್ತಿಯನ್ನು ವರ್ಣಿಸುತ್ತಾ ಅವನ ಪಾರಮ್ಯವನ್ನು ಅರಿಯಲು ಪರಿತಪಿಸಿದ್ದಾರೆ.

**ನಾನಾ ವೇಷಗಳನ್ನು ನಿನಗ್ಯಾಕೊ ಹರಿಯೆ**
**ನಿನ್ನ ಭಕ್ತರು ನಿನ್ನ ಅರಿಯದೆ ಬಿಡರು**[೨೨]

ಎಂಬ ನಿಂದಾಸ್ತುತಿ ಕೀರ್ತನೆಯಲ್ಲಿ ವಾದಿರಾಜರು ವಿಷ್ಣುವಿನ ದಶಾವತಾರವನ್ನು ಚಿತ್ರಿಸಿದ್ದಾರೆ.

"ಹೀಗೆ ಸಖ್ಯ ಭಕ್ತಿಯಲ್ಲಿ ದಾಸರು ಹರಿಯನ್ನು ಸಲುಗೆಯಿಂದ ಮಾತನಾಡಿಸುತ್ತಾರೆ. ಅತ್ಮೀಯತೆಯಿಂದ ದೂಷಿಸುತ್ತಾರೆ. ತಮ್ಮ ಅಸಮಾಧಾನಗಳನ್ನೆಲ್ಲ ನಿವೇದಿಸಿಕೊಂಡು ದುಗುಡ ಕಡಿಮೆಯಾಗಿ ಮನಸ್ಸು ಸಮಸ್ಥಿತಿಗೆ ಬಂದಾಗ ಮತ್ತೆ ಶರಣಾಗುತ್ತಾರೆ. ನಿಂದೆ, ಆಪಾದನೆ ಮತ್ತು ಮೂದಲಿಕೆಗಳನ್ನು ಮರೆತು ಕೃಪೆ ಮಾಡುವಂತೆ ಪ್ರಾರ್ಥಿಸುತ್ತಾರೆ".[೨೩]

**೪.೩ ಮಧುರ ಭಾವ**

ಹರಿದಾಸರು ಸರ್ವಸಮರ್ಪಣ ಭಾವದಿಂದ ಭಗವಂತನನ್ನು 'ಪತಿ' ಎಂದು ಆರಾಧಿಸಿ, ಭಕ್ತ ಮತ್ತು ಭಗವಂತನಲ್ಲಿ ಸತಿ-ಪತಿ ಭಾವವನ್ನು ಕಲ್ಪಿಸಿಕೊಂಡು ಸಾಧನೆ ಮಾಡುವುದೇ ಮಧುರ ಭಕ್ತಿ, ಲೌಕಿಕ ಪ್ರೇಮದ ಪರಿಧಿಯನ್ನು ದಾಟಿ ಅಲೌಕಿಕತೆಯ ಸೀಮೆಯನ್ನು ಪ್ರವೇಶಿಸಿದಾಗ ಈ ಮಧುರಭಾವ ಉಂಟಾಗುತ್ತದೆ. ದೈಹಿಕ ಮಿಲನದ ಪ್ರಶ್ನೆಯೇ ಇಲ್ಲದ, ಕೇವಲ ಆತ್ಮ-ಪರಮಾತ್ಮರ ಮಿಲನದ ಸಂಕೇತವೇ ಮಧುರಭಕ್ತಿ.

ಹರಿದಾಸ ಯತಿಗಳಲ್ಲಿ ಮಧುರ ಭಾವದ ಕೃತಿಗಳು ಸಾಕಷ್ಟಿವೆ. ಈ ಮಧುರಭಾವದ ಕೃತಿಗಳನ್ನು ಪ್ರತಿಪಾದಿಸಿದವರಲ್ಲಿ ಶ್ರೀಪಾದರಾಜರು ಮತ್ತು ವ್ಯಾಸರಾಯರು ಮೊದಲಿಗರು. ಶ್ರೀಪಾದರಾಜರು ಭಾಗವತದಲ್ಲಿರುವ ಭ್ರಮರಗೀತೆ, ಗೋಪಿಗೀತೆ ಮತ್ತು ವೇಣುಗೀತೆಗಳ ಸಾರವನ್ನೆಲ್ಲಾ ತಮ್ಮ ಕೃತಿಗಳಲ್ಲಿ ಅಳವಡಿಸಿದ್ದಾರೆ. ಅದಲ್ಲದೆ, ಬಿಡಿಬಿಡಿಯಾಗಿ ರಚಿಸಿರುವ ಕೀರ್ತನೆ, ಉಗಾಭೋಗ, ಸುಳಾದಿಗಳೂ ಅಷ್ಟೇ ಮಾಧುರ್ಯ ಪೂರ್ಣವಾಗಿದೆ.

ಬಿಲ್ಲ ಹಬ್ಬಕ್ಕಾಗಿ ಕೃಷ್ಣನು ಬೃಂದಾವನವನ್ನು ಬಿಟ್ಟು ಮಧುರೆಗೆ ಹೋಗುವ ಸುದ್ದಿ ಎಲ್ಲ ಕಡೆ ಹರಡುತ್ತದೆ. ಕೃಷ್ಣನನ್ನು ಒಂದು ಕ್ಷಣವು ಅಗಲಿರಲಾರದ ಗೋಪಿಯರಿಗೆ ಕೃಷ್ಣನ ಪಯಣದ ಸುದ್ದಿ ಬರಸಿಡಿಲೆರಗಿದಂತಾಗುತ್ತದೆ. ಈ ವಿಷಯವನ್ನು ಪರಸ್ಪರ ಮಾತನಾಡಿಕೊಂಡು ಮರುಗುತ್ತಾರೆ.

**ಕೇಳಿದ್ಯಾ ಕೌತುಕವನ್ನು ಕೇಳಿದ್ಯಾ ಪ**

**ಕೇಳಿದ್ಯಾ ಕೌತುಕವನ್ನು ನಾ**
**ಕೇಳಿದೆ ನಿನಗಿಂತ ಮುನ್ನು ಆಹಾ**
**ಚಾಳಿಕಾರ ಕೃಷ್ಣ ಪೇಳದೆ ಮಧುರೆಗೆ**

**ಕೋಳಿ ಕೂಗದ ಮುನ್ನ ನಾಳೆ ಪಯಣವಂತೆ॥ ಅ.ಪ.**

ಕೃಷ್ಣ ಮಧುರೆಗೆ ಹೊರಟಿರುವ ವಿಚಾರವನ್ನು ತಿಳಿದು ಶ್ರೀಕೃಷ್ಣನನ್ನು ಅಡ್ಡಗಟ್ಟಿ ಅವನನ್ನು ತಡೆಯಲು ಪ್ರಯತ್ನಿಸಿರುವ ಸಂದರ್ಭವನ್ನು 'ವೃತ್ತನಾಮ'ದ ರೂಪದಲ್ಲಿ ನಿರೂಪಿಸಿದ್ದಾರೆ.

**ಮಾನನಿಧಿ ಕೃಷ್ಣ ಮಧುರೆಗೈದುವನಂತೆ**
**ಏನು ಪಥವಮ್ಮ ನಮಗೆ॥ ಪ**

ಎಂದು ಆತಂಕಕ್ಕೀಡಾದ ಗೋಪಿಯರು, ಅವನು ಮಧುರೆಗೆ ತೆರಳಿದ ನಂತರ ವಿಧಿಯನ್ನೇ ದೂಷಿಸುತ್ತಾರೆ. ಒಬ್ಬ ಗೋಪಿಕೆ ಹೀಗೆ ತನ್ನ ವೇದನೆಯನ್ನು ಬಿಡಿಸುವಳು.

**ವಿಧಿಗೆ ದಯವಿಲ್ಲವಕ್ಕ ಎಮ್ಮ ಮೇಲೆ**
**ಯದುಪತಿಯನಗಲಿಸಿದ ಒಮ್ಮಿಂದಲೊಮ್ಮೆ ಅ.ಪ.**

**ಎವೆಯ ಮರೆಯ ಮಾತನಾಡಿ ಪೋದ ಯಾಕೋ ವಿಧಿಯೇ**
**ಸುಳಿಗುರಳು ಕಡೆಗಣ್ಣ ನೋಟದಿಂದಲಿ**
**ಕವಕವಿಸಿ ನಗುತಿಪ್ಪ ಮುದ್ದು ಮುಖವನು**
**ತವಕದಿಂದ ಮರಳಿ ಮರಳಿ ನೋಡೆದ್ಹೋದೆವ್॥**

ಎಂದು ತನ್ನ ಆತಂಕವನ್ನು ತೋಡಿಕೊಳ್ಳುತ್ತಾ 'ಹಕ್ಕಿಯ ಮ್ಯಾಲುಳ್ಳ ದಯವನ್ನು ನಮ್ಮ ಮ್ಯಾಲೆ ಇಕ್ಕದೆ ಹೋದ್ಯೋ ವಿಧಿಯೇ' ರೆಕ್ಕೆ ಎರಡುಳ್ಳರೆ ಮಧುರೆಗೆ ಪೋಗಿ ಫಕ್ಕನೆ ಶ್ರೀಹರಿಯೊಡನೆ ಕೂಡುತ್ತಿದ್ದೆವಲ್ಲ ಎಂದು ದುಃಖಿಸಿದ್ದಾಳೆ.

ಶ್ರೀಕೃಷ್ಣನು ಮಧುರೆಗೆ ಹೋದ ಮೇಲೆ ಗೋಪಿಯರು ಪಡುವ ವಿರಹಯಾತನೆ ಅಷ್ಟಿಷ್ಟಲ್ಲ. ಈ ವಿರಹ ವೇದನೆಯನ್ನು ಶ್ರೀಪಾದರಾಜರು ಮತ್ತೆ ಮತ್ತೆ ತರುತ್ತಾರೆ. ಕಂದಿ ಕುಂದಿ ಹೋದ ಗೋಪಿಯರಿಗೆ ಅಲ್ಲಿರುವ ಚೇತನ – ಅಚೇತನ ವಸ್ತುಗಳೆಲ್ಲ ಕೃಷ್ಣನ ನೆನಪನ್ನೇ ಉಂಟುಮಾಡುತ್ತದೆ. ಇದನ್ನು ಒಂದು ಸುಳಾದಿಯಲ್ಲಿ ಶ್ರೀಪಾದರಾಜರು ಮನೋಜ್ಞವಾಗಿ ಚಿತ್ರಿಸಿದ್ದಾರೆ.

**ಈ ವನದೆಡೆಗಳು ಈ ಲತೆವನಗಳು**
**ಈ ನದಿಪುಳನಗಳೀ ಶಶಿಶಿಲೆಗಳು**
**ಈ ಸುರತರು ನೆಳಲು ಶುಕ ಪಿಕ ರವ**

**ಯಾಕೆ ಮಾಧವನ ಮರೆಯಲೀಯದಿವೆ ಕೆಳದಿ**
**ಈ ಮುಗುಳುನಗೆಯ ಸೊಬಗ**
**ಈ ಸುರತರು ನೆಳಲೀ ರತಿಯ**
**ಈ ಸುರತವನರಿದ ಬಾಲೆಯರೆಂತೊ**
**ಈ ಸುಗುಣಮಯ ರಂಗವಿಠಲನೆ ಕೆಳದಿ**[೨೭]

ಎಂದು ಶ್ರೀಕೃಷ್ಣನೊಡನೆ ಕಳೆದ ಮಧುರಕ್ಷಣಗಳನ್ನು ಗೆಳತಿಯೊಂದಿಗೆ ಹೇಳಿಕೊಂಡು ಗೋಪಿಯೊಬ್ಬಳು ದುಃಖಿಸುತ್ತಾಳೆ. ಮಧುರೆಗೆ ಪೋದ ಮಾಧವನು ಮತ್ತೆ ಹಿಂದುರುಗುವುದಿಲ್ಲವೆ ಆತಂಕ ಅವಳಿಗೆ. ಅವರೋ ರತಿವಿದಗ್ಧರು! ನಮ್ಮ ರಂಗನೋ ರಸಿಕ ಚಕ್ರಿ! ಎಂದ ಮೇಲೆ ಅವನು ಬರುವುದು ಅಸಾಧ್ಯದ ಮಾತು ಎಂಬುದು ಅವಳ ನಿಲುವು. ಕಡೆಗೆ 'ಅವನ ಹಂಬಲವೆಮಗೆ ಜೀವನವವ್ವಾ ಭುವನಮೋಹನ ರಂಗವಿಠಲನು ಕರುಣಿಯೆ! ಎಂದಿದ್ದಾರೆ. ಹೀಗೆ ಮಧುರೆಗೆ ತೆರಳಿದ ಕೃಷ್ಣನನ್ನು ಅಗಲಿದ ಗೋಪಿಯರು ವಿರಹ ವೇದನೆ, ಆತಂಕ, ತಲ್ಲಣಗಳನ್ನು ಬಿಡಿ–ಬಿಡಿಯಾಗಿ ಚಿತ್ರಿಸಿದ್ದರೆ, ಭಾಗವತವನ್ನು ಆಧರಿಸಿ ಕನ್ನಡದಲ್ಲಿ ಬರೆದಿರುವ ಭ್ರಮರಗೀತೆಯಲ್ಲಿ ಇನ್ನೂ ಉಜ್ವಲವಾಗಿ ಹೊರಹೊಮ್ಮಿದೆ.

**ಭೃಂಗಾ ನಿನ್ನಟ್ಟಿದನೇ ಶ್ರೀರಂಗ ಮಧುರೆಲಿ ನಿಂದು**
**ಅಂಗಜಲುಬ್ಧಕ ಪುಗೋಲಂಗಳ ತಡೆಯನಿಕ್ಕಿ**
**ಅಂಗನೇರೆಂಬೋ ಹುಲ್ಲೆ ಮೃಗಂಗಳಿಗೆ ಗುರಿಯೆಚ್ಚು**
**ಹಿಂಗಿಸುತೈಧಾನೆ ಅಸುವ ಹೇ ಕಿತವಾ**[೨೮]

ಎಂದು ಪ್ರಾರಂಭವಾಗುವ ದೀರ್ಘ ಕೃತಿಯಲ್ಲಿ ಮಧುರೆಗೆ ತೆರಳಿದ ಕೃಷ್ಣನನ್ನು ನೆನೆದು,. ಭ್ರಮರವೊಂದನ್ನು ಸಂಬೋಧಿಸಿ, ಗೋಪಿಯರು ಮಾಡಿದ ವಿರಹಾಲಾಪವನ್ನು ಸೊಗಸಾಗಿ ಚಿತ್ರಿಸಿದ್ದಾರೆ. ಇಲ್ಲಿ ಕೇವಲ ಗೋಪಿಯರ ಪ್ರಣಯ ಪ್ರಪಂಚ ಮಾತ್ರವಲ್ಲದೆ, ವಿರಹದ ಪರಧಿಯಿಂದ ಆಚೆಗೆ ಬಂದಿರುವ ಕೃಷ್ಣನ ರಾಣಿಯರಾದ ರುಕ್ಮಿಣಿ ಮತ್ತು ಸತ್ಯಭಾಮೆಯರ ವಾಗ್ವಾದ, ಘರ್ಷಣೆ, ಸವತಿ ಮಾತ್ಸರ್ಯಗಳನ್ನು ಇವನ್ನೆಲ್ಲ ಅತ್ಯಂತ ಜಾಗರೂಕತೆಯಿಂದ ನಿರ್ವಹಿಸುವ ಕೃಷ್ಣನ ಜಾಣ್ಮೆಯನ್ನು ಕಾಣಬಹುದು. ಶ್ರೀಪಾದರಾಜರು ಪ್ರತಿಪಾದಿಸಿರುವ ಮಧುರಭಾವದಲ್ಲಿ ಗೋಪಿಯರು ನಿಷ್ಕಲ್ಮಷವಾದ ಪ್ರೇಮದಿಂದ ಶ್ರೀಕೃಷ್ಣ ಪ್ರಿಯರಾಗಿರುವುದು ಇತರ ಭಕ್ತರಿಗೆ ಮಾದರಿಯಾಗಿದೆ.

ವ್ಯಾಸರಾಯರ ಮಧುರ ಭಾವದ ಬಿಡಿ-ಬಿಡಿ ಕೃತಿಗಳಲ್ಲಿ ಬೃಂದಾವನದ ಸೌಂದರ್ಯವನ್ನು ಅತ್ಯಂತ ರಮ್ಯವಾಗಿ ಚಿತ್ರಿಸಿದ್ದಾರೆ. 'ಅಂಗಜನಯ್ಯನು ಗೋಕುಲಕೆ ಹೋಗುವಾಗ ಕಂಗಳ್ಹಬ್ಬದ ಉಬ್ಬಿನೇನ್ ಬಣ್ಣಿಪೆನಾ' ಎಂದು ಪ್ರಾರಂಭವಾಗುವ ಒಂದು ಕೀರ್ತನೆಯಲ್ಲಿ ಆ ಗೋಕುಲದ ವೈಭವವನ್ನು ಹದಿನೇಳು ನುಡಿಗಳ ದೀರ್ಘಕೃತಿಯಲ್ಲಿ ವರ್ಣಿಸಿದ್ದಾರೆ. ಶ್ರೀಕೃಷ್ಣನ ಸಾನ್ನಿಧ್ಯದಿಂದ ಅಲ್ಲಿನ ಸಮಸ್ತ ವಾತಾವರಣವೇ ಚೈತನ್ಯಪೂರ್ಣವಾಗುವುದು.

**ಕೆಲರು ಕೋಗಿಲೆಯಂತೆ ಕೆಲರು ನವಿಲಿನಂತೆ**
**ಕೆಲರು ಹಂಸದಂತೆ ಸಾರಸದಂತೆ**
**ಗಳರವದಿಂ ಗೋಪರು ಕೂಗೆ ಋತುಗಳು**
**ನಳಿನಾಕ್ಷನ ಸೇವೆಗೆ ಕೂಡಿದಂತಿರೆ**

ಎನ್ನುವಲ್ಲಿ ವ್ಯಾಸರಾಯರ ಕವಿ ಸಾಮರ್ಥ್ಯವನ್ನು ಗಮನಿಸಬಹುದು. ಕೃಷ್ಣನ ಆಗಮನದಿಂದ ಗೋಕುಲ ಎಷ್ಟು ವೈಭವಪೂರ್ಣವಾಯಿತು. ಅಲ್ಲಿನ ಜನರ ಸಂಭ್ರಮ ಸಡಗರಕ್ಕೆ ಪಾರವೇ ಇಲ್ಲ. ಈ ಸನ್ನಿವೇಶವನ್ನು ವ್ಯಾಸರಾಯರು ಎಷ್ಟು ಸುಂದರವಾಗಿ ಕಲ್ಪಿಸಿದ್ದಾರೆನ್ನುವುದನ್ನು ಕೀರ್ತನೆಯ ಉದ್ದಕ್ಕೂ ಕಾಣಬಹುದು.

**ನಾರಂದನ ವೀಣೆ, ಗೋಪನ ಕಿನ್ನರಿ,**
**ಗೀರ್ವಾಣ ದುಂದುಭಿ, ಗೋಪರ ಮುರಜ,**
**ಆ ರಂಭೆಯಾಟ, ಗೋಪರ ತಾಂಡವ**
**ಕ್ಷೀರೋದಕದಂತೆ ಕಲೆಸಿ ಬೆರೆಸಿರೆ**

**ರಸ ತುಂಬಿ ತುಳುಕುವ ಕೊಳಲ ರವಂಗಳು**
**ಹಸುಗಳ ಕೊರಳ ಘಂಟೆಗಳ ನಿನಾದ**
**ಎಸೆವಳಗಂದಿಯ ಅಂಬಾರವಂಗಳು**
**ಪಸರಿಸೆ ಗೋವಳೆಯರು ಸಡಗರಿಸಿ**

**ಜಂಗುಳಿ ಗತಿಯರ ಮುಖ ಕನ್ನಡಿ, ಉರೋ**
**ಜಂಗಳೆ ಮಂಗಳ ಪೂರ್ಣಕುಂಭಗಳು**
**ಕಂಗಳೆ ನೀಲೋತ್ಪಲಂಗಳು ಕರಗಳೆ**
**ತುಂಗ ಪಲ್ಲವ ತೋರಣದಂತೆಸೆಯೆ**

**ಚೆಂದದ ನೋಟವು ಮಂಗಳಾರತಿಯಾಗೆ**

**ಮಂದಹಾಸವು ಪೂಮಳೆಯಾಗೆ ಆ**
**ನಂದ ಪುಳಕಗಳೆ ಕೋಡಿಯಾಗೆ ಗೋಪ**
**ವೃಂದವಿದಿರುಗೊಳ್ಳ ಬಂದರೊಲವಿಲಿ**

ಈ ಮೇಲಿನ ನುಡಿಗಳಲ್ಲಿ ಗೋಕುಲದ ಮಹತ್ವವೇನೆಂಬುದು ಅಭಿವ್ಯಕ್ತವಾಗಿದೆ. ನಾರದರ ವೀಣೆಯ ಮಾಧುರ್ಯ ಒಂದೆಡೆಯಾದರೆ, ರಂಭೆ ಮೊದಲಾದವರ ನೃತ್ಯ ಒಂದೆಡೆ, ಗೋಪಾಲಕರ ಕಿನ್ನರಿ ವಾದ್ಯ, ಕುಣಿತದ ವೈಭವ ಇವೆಲ್ಲವೂ ಏಕಕಾಲದಲ್ಲಿ ಮೇಳೈಸಿದರೆ, ಹೂವಿನ ಮಳೆಗರೆದಿರುವುದರಲ್ಲಿ ಆಶ್ಚರ್ಯವೇನಿಲ್ಲ. ಭಕ್ತರು ಭಗವಂತನನ್ನು ಎದುರುಗೊಳ್ಳುವ ಈ ದೃಶ್ಯ ರಮಣೀಯವಾಗಿ ಚಿತ್ರಿತವಾಗಿದೆ.

ಗೋಪ ಗೋಪಿಯರ ಈ ಸಂಭ್ರಮದಲ್ಲಿ ತಾವೂ ಭಾಗಿಗಳಾಗಲೂ ದೇವಾನುದೇವತೆಗಳೂ ಸಹ ಅಲ್ಲಿಗೆ ಆಗಮಿಸಿದರಂತೆ

**ಇತ್ತ ಗೋವಳರಾಟಕೆ ತಲೆದೂಗುತ**
**ಅತ್ತ ದೇವತೆಗಳ ಸ್ತುತಿ ಕೇಳುತ್ತ**
**ಇತ್ತ ಗೋವಳೆಯರ ನಗಿಸುತ್ತ ನಗುತ್ತ**
**ಅತ್ತಿತ್ತ ಮುನಿಗಳ ಸ್ತುತಿ ಕೇಳುತ್ತ**

**ಕಂಜಾಸನ ನಮಿಸಲು ಕೈಹಿಡಿದೆತ್ತಿ ಮೃ**
**ತ್ಯುಂಜಯ ವಂದಿಸೆ ಬಾ ಯೆನ್ನುತ್ತ**
**ಅಂಜಲಿ ಪುಂಜದ ಇಂದ್ರಾದಿಗಳನ್ನು**
**ಕಂಜನೇತ್ರಗಳ ಸನ್ನೆಯಲಿ ಮನ್ನಿಸುತ**

**ಸಿರಿ ವನಿತೆಗೆ ವನಮಾಲೆ ಉಯ್ಯಾಲೆ**
**ಮೊರೆವಳಿಕುಲಗಳ ರವ ಸಂಗೀತ**
**ವರ ಮುತ್ತಿನ ಹಾರ ಚಾಮರ ಶ್ರೀಕೃಷ್ಣ**
**ನುರಮಧ್ಯವೆ ಮಂಟಪವಾಗೆಸೆಯೆ**

ಹೀಗೆ ಶ್ರೀಕೃಷ್ಣನ ಆಗಮನದಿಂದ ಇಡೀ ಗೋಕುಲ ಸ್ವರ್ಗವಾಗಿ ಮಾರ್ಪಾಡಾಯಿತು. ಅಲ್ಲಿದ್ದ ಗೋಪ–ಗೋಪಿಯರೇ ಅಲ್ಲದೇ ಚೇತನ – ಅಚೇತನ ವಸ್ತುಗಳು ಮೃಗಪಕ್ಷಿಗಳೂ, ಗಿಡಮರಗಳೂ, ಅಪೂರ್ವ ಸುಖವನ್ನು ಹೊಂದಿದವು. "ಈ ಸಂಭ್ರಮಕ್ಕೆ ಮಾರುಹೋದ ಬ್ರಹ್ಮ, ಶಿವರು ಅಲ್ಲಿಗೆ ಬಂದು ಹೇಗೆ ಹರಿಯ ಪ್ರೀತಿಗೆ ಪಾತ್ರರಾದರು ಎನ್ನುವುದನ್ನು ಶ್ರೀ ವ್ಯಾಸರಾಯರು

ಮನಮುಟ್ಟುವಂತೆ ಚಿತ್ರಿಸಿದ್ದಾರೆ. ಬ್ರಹ್ಮನು ನಮಸ್ಕರಿಸಲು ಆತನನ್ನು ಹರಿ ಕೈಹಿಡಿದು ಎತ್ತಿದನಂತೆ! ಈಶ್ವರನು ವಂದಿಸಲು 'ಬಾ' ಎಂದು ಹತ್ತಿರ ಕರೆದನಂತೆ! ಇಂದ್ರಾದಿ ದೇವತೆಗಳು ತನ್ನ ಕಣ್ಣಿನಿಂದಲೇ ಮನ್ನಿಸಿದನಂತೆ! (ಈ ಕ್ರಮದಲ್ಲಿ ವಿದಿತವಾಗುವ ದ್ವೈತ ಸಿದ್ಧಾಂತದ ತಾರತಮ್ಯವನ್ನು ಗಮನಿಸಬಹುದು)"೩೦.

ಹೀಗೆ ಶ್ರೀಕೃಷ್ಣನು ಗೋಕುಲದಲ್ಲಿದ್ದಾಗ ಬೃಂದಾವನದ ಅಂದ-ಚೆಂದ, ಗೋಪಿಯರ ಜೊತೆಗಿನ ಅವನ ಮಧುರ ಬಾಂಧವ್ಯ, ಕೃಷ್ಣ ಮಧುರೆಗೆ ತೆರಳಿದಾಗ ಅವರು ಅನುಭವಿಸುವ ವಿರಹ ವೇದನೆ ಇವೆಲ್ಲಾ ವ್ಯಾಸರಾಯರು ಮಧುರ ಭಾವದ ಅನೇಕ ಕೀರ್ತನೆಗಳಲ್ಲಿ ಮನೋಜ್ಞವಾಗಿ ಚಿತ್ರಿಸಿದ್ದಾರೆ.

ವ್ಯಾಸರಾಯರ ಮಧುರಭಾವದ ಕೃತಿಯಲ್ಲಿ ಮತ್ತೊಂದು ವಿಶಿಷ್ಟವಾದದು ಮುತ್ತೈದೆಯ ಕಲ್ಪನೆ. ಪರಮಾತ್ಮನನ್ನು ಪತಿಯೆಂದು ಭಾವಿಸಿ ತಾವೇ ಅವನ ಪತ್ನಿ ಮುತ್ತೈದೆಯೆಂದು ಸತಿ-ಪತಿ ಭಾವದಲ್ಲಿ ಕಲ್ಪಿಸಿಕೊಂಡು ತಮ್ಮ ಈ ಮುತ್ತೈದೆತನದ ಸೌಭಾಗ್ಯಕ್ಕೆ ಕಾರಣನಾದ ಶ್ರೀಹರಿಯನ್ನು

**ಎಂದೆದೆನ್ನ ಮನದಿಂದ ಅಗಲದಿರೋ**
**ನಂದ ನಂದನನೆ ಆನಂದ ಮೂರುತಿಯೆ ಪ**

**ಬಹುಕಾಲ ನಿನ್ನ ಶ್ರವಣವೆಂಬ ಹೊನ್ನೋಲೆಯ**
**ಬಹುಮಾನದಿಂದೆನ್ನ ಕಿವಿಯೊಳಿಟ್ಟು**
**ಮಹಿತ ಮಂಗಳ ಸೂತ್ರವೆಂಬೊ ದಾಸ್ಯವನ್ನು**
**ಮಹದಾನಂದದಿ ಎನ್ನ ಕೊರಳೊಳ್ ಕಟ್ಟಿದೆಯಾಗಿ**೩೧

ಎಂದು ಹೇಳಿ ಮಧುರ ಬಾಂಧವ್ಯದಿಂದ ಶ್ರೀಹರಿಯನ್ನು ಬಂಧಿಸಿದ್ದಾರೆ. ಹರಿಯ ಶ್ರವಣವೆಂಬ ಹೊನ್ನೋಲೆ, ದಾಸ್ಯವೆಂಬ ಮಂಗಳಸೂತ್ರ, ಸ್ಮರಣೆಯೆಂಬ ಭೂಷಣ, ಸುಜ್ಞಾನವೆಂಬ ನಿಧಿ ಈ ಒಂದೊಂದು ಸೌಭಾಗ್ಯದ ಚಿಹ್ನೆಗೂ ಮಧ್ವಮತದ ಒಂದೊಂದು ತತ್ವವನ್ನು ಅನ್ವಯಿಸಿ ಹೇಳಿದ್ದಾರೆ. ಶ್ರೀಹರಿಯ ಅಚ್ಚುಮೆಚ್ಚಿನ ಸತಿಯಾಗಿ ಮೆರೆದಿದ್ದಾರೆ.

ವಾದಿರಾಜರೂ ಸಹ ಶ್ರೀಪಾದರಾಜ, ವ್ಯಾಸರಾಯರಂತೆ ಭಾಗವತವನ್ನು ಅವಲಂಬಿಸಿ ಮಧುರಭಾವದ ಕೃತಿಗಳನ್ನು ರಚಿಸಿದ್ದಾರೆ.

ಶ್ರೀ ರಂಗ ಬಾರನೆ ಪ

ಕರೆದರಿಲ್ಲಿ ಬಾರನೆ ಕಾಂತೆ ಮುಖವ ತೋರನೆ ಮ
ಧುರ ಪುರದ ಅರಸನೆ ಕೂಡಿ ಎನ್ನ ರಮಿಸನೆ ಅ.ಪ.

ಮುನಿಸು ಮನದಲ್ಲಿಟ್ಟನೆ ಮೋಹವನ್ನು ಬಿಟ್ಟನೆ
ಮನದಿ ಛಲವ ತೊಟ್ಟನೆ ಮನೆಗೆ ಬಾರದೆ ಬಿಟ್ಟನೆ

ಎಂತು ನಂಬಿ ಇದ್ದನೆ ಎಂತು ಗುರುತು ಮರೆತನೆ
ಪಂಥವ್ಯಾತಕೆ ಕಲಿತನೆ ಕಾಂತೇರ ಕೂಡಿ ಮೆರೆದನೆ

ಸೋಳ ಸಾಸಿರ ಗೋಪಿಸಹಿತ ಜಲದಲಾಡಿ ಪೋದನೆ
ಸೆಳೆದು ಒಬ್ಬಳ ಒಯ್ದನೆ ಚೆಲುವ ಹಯವದನನ್ನೆ[೭]

ಶ್ರೀಕೃಷ್ಣನ ಮುರಳಿಯಗಾನಕ್ಕೆ ಮನಸೋತ ಗೋಪಿಯರು ಮನೆ, ಮಠ, ಮಕ್ಕಳು, ಪತಿಯನ್ನು ತೊರೆದು ಶ್ರೀಕೃಷ್ಣನೊಂದಿಗೆ ಸೇರಿ ಆನಂದದಲ್ಲಿ ಮೈಮರೆಯುತ್ತಾರೆ. ಕೃಷ್ಣನೆ ಅವರುಗಳನ್ನು ಕಂಡು ನಾನಾ ರೀತಿಯಲ್ಲಿ ಸಂತೈಸಿ ಬುದ್ಧಿಮಾತುಗಳನ್ನು ಹೇಳಿ, ಅವರನ್ನು ಅವರವರ ಮನೆಗೆ ಕಳುಹಿಸಲು ಪ್ರಯತ್ನಿಸುವನು. ಅದು ಸಾಧ್ಯವಾಗದೇ ಹೋದಾಗ ಅವನೇ ಇದ್ದಕ್ಕಿದ್ದಂತೆ ಕಣ್ಮರೆಯಾಗುವನು. ಅವರೆಲ್ಲರೂ ತಮ್ಮ ಸ್ವಾಮಿಯಾದ ಕೃಷ್ಣನನ್ನು ಹುಡುಕುತ್ತಾ ಕಾಡು ಮೇಡುಗಳನ್ನು ಸುತ್ತುತ್ತಾರೆ. ಅಲ್ಲಿ ಒಂದು ಕಡೆಯಲ್ಲಿ ಅವರ ಕಣ್ಣಿಗೆ ಪರಮಾತ್ಮನ ಹೆಜ್ಜೆಯ ಗುರುತು ಸಿಕ್ಕುತ್ತದೆ. ಹಾಗೆಯೇ ಪಕ್ಕದಲ್ಲಿ ತರುಣಿಯೊಬ್ಬಳು ನಡೆದಿರುವ ಪಾದದ ಗುರುತೂ ಸಿಕ್ಕುತ್ತದೆ. ಆ ಒಬ್ಬಳೇ ಗೋಪಿಯ ಪುಣ್ಯವನ್ನು ಕೊಂಡಾಡುತ್ತ ಬೇರೆ ಗೋಪಿಯರು ಮತ್ತಷ್ಟು ದುಃಖಿತರಾಗುತ್ತಾರೆ. "ಶ್ರೀಕೃಷ್ಣನು ಈ ರೀತಿ ಕರೆದೊಯ್ದ ಒಬ್ಬ ಗೋಪಿಯೇ ಆತನ ಅಚ್ಚು ಮೆಚ್ಚಿನ ರಾಧೆಯಾಗಿರಬೇಕೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ".[೩೩]

ವ್ಯಾಸತತ್ವಜ್ಞರು ಒಂದು ಕೀರ್ತನೆಯಲ್ಲಿ

ಎನ್ನಯ ನಾಯಕಿಯ ಸ್ವಾಮಿಯ ಕಂಡಂತೆ
ನಿನ್ನ ನೋಡಲಾಯಿತೊ ಪ್ರಾಣಪ್ರಿಯ ದೂತನೆ
ಚೆನ್ನಾಗಿ ನೋಡೊ ಇವಳ ಪರಿಯನ್ನು
ಬಿನ್ನಪ ಮಾಡುವೆ ಅಪರಾಧಗಳ

ನಿನ್ನಂತ ಘಟಕರ ಇನ್ನೊಬ್ಬರ ಕಾಣೆ
ಮನವಿಟ್ಟು ನೀವೆನೆ ವಾಸುದೇವವಿಠಲಂಗೆ
ಬಿನ್ನೈಸಿ ಕೊಡಿಸೊ ಘನ್ನ ದಯಾನಿಧೆ॥

ಈ ಸುಳಾದಿಯಲ್ಲಿ ಮುಗ್ಧಗೋಪಿಯೊಬ್ಬಳ ಸ್ಥಿತಿಯನ್ನು ಚಿತ್ರಿಸಲಾಗಿದೆ. ಕೃಷ್ಣನನ್ನು ಕಂಡ ಕೂಡಲೇ ಎಲ್ಲ ಹಳೆಯ ನೆನಪುಗಳು ಮರೆಯಾಗಿ ಕೃಷ್ಣನಿಗಾಗಿ ಹಂಬಲಿಸುವ ಬಗೆಯನ್ನು ಸೊಗಸಾಗಿ ಚಿತ್ರಿಸಿದ್ದಾರೆ.

ವಿದ್ಯಾಪ್ರಸನ್ನತೀರ್ಥರು 'ಬಾರೆ ಸಖಿ ಪೋಗಿ ರಾಸಕ್ರೀಡೆಯಾಡುವ, ಸಾರಸಾಕ್ಷ ಕೃಷ್ಣನು ತಾ ಕೊಳಲನೂದುವ ಎಂದು ಪ್ರಾರಂಭವಾಗುವ ಕೀರ್ತನೆಯಲ್ಲಿ ಸಖಿಯೊಬ್ಬಳು ಕೃಷ್ಣ ಯಾರೆಂದು ಅನುಮಾನ ವ್ಯಕ್ತಪಡಿಸುತ್ತಾ ಅವನ ಸಂಪೂರ್ಣ ಪರಿಚಯ ಮಾಡಿಕೊಟ್ಟು ಕಡೆಗೆ 'ಸಕಲ ಲೋಕನಾಥನೀತನೆಂದು ತಿಳಿಯಿತು ಸಕಲವನರ್ಪಿಸುವುದೊಂದೆ ಮಾರ್ಗ ಉಳಿಯಿತು' ಎಂದು ಸಕಲವನ್ನು ಭಗವಂತನಿಗೆ ಅರ್ಪಿಸಿದ್ದಾರೆ.

ಮುರಳಿಯಧರ ಶ್ರೀ ಕೃಷ್ಣನ ನೋಡಲು
ಏನೋ ಸಂತೋಷ ಏನೋ ವಿನೋದ ಪ

ಹರಿವಳು ಯಮುನೆಯು ಮೆಲ್ಲನೆ ನೋಡಲು
ಗೋವಿಂದನನನು ಪರಮಾನಂದದಿ ಅ. ಪ.

ಕೊಳಲೂದಲು ಶ್ರೀಕೃಷ್ಣನು ನಾದದ
ಸುಳಿ ಬಾಡುವುದೆಂಬುವ ಭೀತಿಯಲಿ
ಜಲ ಮೂಲನು ಬೆಳದಿಂಗಳ ಕರಗಳ
ತಳಿರುಗಳಿಂದಲಿ ತಳ ಸೇರಿಸುವ

ಶೃಂಗಾರ ಶರಧಿ ತರಂಗಗಳೆದ್ದವು
ರಂಗನ್ನ ವದನ ಶಕಾಂಕನ್ನ ನೋಡಿ
ಅಂಗನೆಯರು ತಮ್ಮಂಗಗಳಲಿ
ಭಂಗವ ಪಡೆದರನಂಗನ ಶರದಿ

ಭುವನವ ತುಂಬಿತು ಗಗನವು ತುಂಬಿತು
ದಿವಿಜರ ಲೋಕಗಳೆಲ್ಲವು ತುಂಬಿತು
ಕವಿಗಳು ಬೆರಗಾದರು ವರ್ಣಿಸಲೀ

ಸವಿ ಮುರಳಿಯು ನಾದದ ಪ್ರವಹನನು

ತುರುಗಳ ಪಯಧರ ಸ್ರವಿಸಿತು ಕ್ಷೀರವ
ಕರೆದರ ಮೋದದ ಕಂಬನಿಯೆಲ್ಲರು
ಮರೆತರು ನರಲೋಕದ ಮಂದಿಗಳು
ಅರಿತು ಮೋಕ್ಷದ ಸುಖವೆಂತೆಂಬುದ

ಈಶನು ಕೈಲಾಸದಲಿ ಕುಣಿದನು
ಶೇಷನು ಸಾಸಿರ ಫಣಗಳನಾಡಿದ
ದೋಷರಹಿತ ವಾಣೀಶನ ವದನ ವಿ
ಕಾಸವು ಬೆಳಗಿತು ನಾಕು ದಿಕ್ಕುಗಳ

ಆ ಸಮಯವ ಇತಿಹಾಸಗಳಲಿ ಕವಿ
ವ್ಯಾಸರಿಗಲ್ಲದೆ ವರ್ಣಿಸಲಳವೆ
ಭಾಸುರ ಸುಂದರ ವದನ ಪ್ರಸನ್ನನು
ರಾಸಕ್ರೀಡೆಯ ರಸವನು ಹರಿಸುತ್ತ॥

ಶ್ರೀಕೃಷ್ಣನ ದರ್ಶನ ಮಾತ್ರದಿಂದ ಆಗುವ ಸಂತೋಷ ಯಮುನಾ ನದಿ ತೀರದಲಿ ಗೋವಿಂದನ ಕೊಳಲ ಗಾನದಿಂದ ಉಂಟಾಗುವ ಆನಂದ ಮತ್ತು ಪರಿಣಾಮವನ್ನು ಮನೋಜ್ಞವಾಗಿ ಚಿತ್ರಿಸಿದ್ದಾರೆ. ಇಂತಹ ದೃಶ್ಯವನ್ನು ಕವಿ ವ್ಯಾಸರಿಗಲ್ಲದೆ ಬೇರಾರಿಗೂ ವರ್ಣಿಸಲು ಸಾಧ್ಯವಿಲ್ಲ ಎಂದು ಬೆರಗಾಗಿದ್ದಾರೆ ಇದೇ ಭಾವದ ಮತ್ತೊಂದು ಕೀರ್ತನೆಯಲ್ಲಿ

ಮುರಳಿಯ ನಾದವ ಕೇಳಿ ಬನ್ನಿರಿ ಪ

ಮುರಳಿಯ ನಾದವ ಕೇಳಿ ಅ. ಪ.

ಮದುರಾನಾಥನು ಮುರಳಿಯನೂದಲು
ಸುರಿವುದನಾನಂದಜಲ ನಯನದಲಿ
..................................................
ಶ್ಯಾಮಲಾಂಗನು ತನ್ನ ಕೋಮಲ ಕರದಲಿ
ಆ ಮುರಳಿಯ ಪಿಡಿಯೆ ಹೃದಯದಲಿ
ಪ್ರೇಮವು ತುಂಬುವುದು॥

ಎಂದು ಭಗವಂತನ ಸಾಂಗತ್ಯದಿಂದ ಉಂಟಾಗುವ ಅಲೌಕಿಕ ಪ್ರೇಮವನ್ನು ಮೀರಿದ

ಆಧ್ಯಾತ್ಮಿಕ ಸುಖವನ್ನು ಅನನ್ಯವಾಗಿ ಚಿತ್ರಿಸಿದ್ದಾರೆ. 'ರಮಿಸುವೆವೆಂದಿಗೆ ಮುರಳೀಧರನ ಸುಮನಸ ವಂದಿತ ವಿಮಲ ಚರಿತನ, ಎಂದು ಪ್ರಾರಂಭವಾಗುವ ಕೀರ್ತನೆಯಲ್ಲಿ ಕೃಷ್ಣ ಸಾಂಗತ್ಯಕ್ಕಾಗಿ ಹಾತೊರಯುತ್ತಾ ಕಾತುರದಿಂದ ಪರಿತಪಿಸುವ ಚಿತ್ರವನ್ನು ಕಾಣಬಹುದು. ಹೀಗೆ ಅನೇಕ ಬಿಡಿ ಕೀರ್ತನೆಗಳಲ್ಲಿ ವಿದ್ಯಾಪ್ರಸನ್ನತೀರ್ಥರು ಮಧುರ ಭಾವವನ್ನು ಅತ್ಯಂತ ಸೊಗಸಾಗಿ ಅಭಿವ್ಯಕ್ತಿಸಿದ್ದಾರೆ.

ವಿಶ್ವೇಂದ್ರ ತೀರ್ಥರು ಒಂದು ಕೀರ್ತನೆಯಲ್ಲಿ ಗೋಪಿಯರ ಗುಣಗಾನ ಮಾಡಿದ್ದಾರೆ. 'ಕಾಳಿಯ ಫಣದಲ್ಲಿ ಮೋದದಿಂ ಕುಣಿಯಲು, ಸಾಲು ಸಾಲಾಗಿಯೇ ತವಕದಿಂ ನಿಂತರು, ಬೆಣ್ಣೆ ಕದ್ದರು ಸಣ್ಣ ಮಾತಾಡರು, ಕಣ್ಣು ಕೆಂಪಾಗಿ ತಾವೆಂದಿಗೂ ನುಡಿಯರು, ಸುಂದರಾಂಗಿಯ ಸೀರೆಯ ಸೆಳೆದರೂ, ನಂದನೊಳೆನ್ನಯ ಸುದ್ದಿಯ ಪೇಳರು, ತರುವ ನಾನೇರ್ದರೂ ಸೀರೆಯ ಕದ್ದರೂ, ಕರಗಳ ಜೋಡಿಸಿ ಬೇಡುತ್ತ ನಿಂತರು, ಪತಿಗಳ ಶಿಕ್ಷೆಯನ್ನೀಕ್ಷಿಸದೆ ಎನ್ನೊಳು, ರತಿಸುಖಾಂಬುಧಿಯಲ್ಲಿ ತೇಲಿಕೊಂಡಿರ್ದರು'[..] ಎಂದು ಗೋಪಿಯರ ಮಧುರ ಭಾವದ ಮುಗ್ಧ ಭಕ್ತಿಯನ್ನು ಚಿತ್ರಿಸಿದ್ದಾರೆ.

ಹರಿದಾಸ ಯತಿಗಳು ರಚಿಸಿರುವ ಮಧುರಭಾವದ ಕೃತಿಗಳಲ್ಲಿ ಶ್ರೀಕೃಷ್ಣ ಮತ್ತು ಗೋಪಿಯರ ಪಾತ್ರವೇ ಪ್ರಧಾನವಾಗಿದೆ. ಶೃಂಗಾರವನ್ನು ಮೀರಿದ ಮಧುರ ಭಕ್ತಿಯನ್ನು ಕಾವ್ಯ ವಸ್ತುವಾಗಿ ಮಾಡಿದ್ದು ಯತಿಗಳಾದ ಶ್ರೀಪಾದರಾಜರ ಹಿರಿಮೆ. ಮುಂದೆ ಎಲ್ಲಾ ಹರಿದಾಸರೂ ಇದನ್ನು ಮುಂದುವರೆಸಿದರು. ಹರಿದಾಸರೇ ಇಲ್ಲಿ ಗೋಪಿಯರಾಗಿ ಕೃಷ್ಣನ ಅಗಲಿಕೆಯಿಂದ ಉಂಟಾದ ವಿರಹ, ಆತಂಕ, ಕಾತರ, ಭಯ, ಸಂದೇಹ, ಧನ್ಯತೆ ಮೊದಲಾದ ಭಾವಗಳಲ್ಲಿ ಸಿಲುಕಿ ನೊಂದು ಬೆಂದು ಕಡೆಗೆ ವಿಷಯರಹಿತವಾದ ಭಕ್ತಿಯಿಂದ ಆನಂದವನ್ನು ಹೊಂದುತ್ತಾರೆ.

### ೪.೪ ವಾತ್ಸಲ್ಯ ಭಾವ

ಭಗವಂತನನ್ನು ಮಗುವೆಂದು ಭಾವಿಸಿ, ಭಕ್ತರು ಭಗವಂತನಿಗೆ ತಾಯಿಯು ತೋರುವ ಅಕ್ಕರೆ ಅಭಿಮಾನಗಳನ್ನು ತೋರಿದರೆ ಅದೇ ವಾತ್ಸಲ್ಯ ಭಕ್ತಿ. ಹರಿದಾಸರಿಗೆ ಕೃಷ್ಣನನ್ನು ವರ್ಣಿಸುವುದೆಂದರೆ ಎಲ್ಲಿಲ್ಲದ ಉತ್ಸಾಹ. ಅವರಿಗೆ ಭಾಗವತವು ಪ್ರಮಾಣ ಗ್ರಂಥವಾಗಿರುವುದರಿಂದ ಅಲ್ಲಿನ ದಶಮಸ್ಕಂಧದ ಕಥೆಯನ್ನು ಇಲ್ಲಿ ಧಾರಾಳವಾಗಿ

ಬಳಸಿಕೊಂಡಿದ್ದಾರೆ. ತಾಯಿ ಮತ್ತು ಮಗುವಿನ ಸಂಬಂಧ ಸಾರ್ವಕಾಲಿಕವಾದುದು. ಪ್ರತಿಯೊಬ್ಬ ತಾಯಿಯು ತನ್ನ ಮಗುವನ್ನು ಜೋಗುಳ ಹಾಡಿ, ಆಟ-ಪಾಠಗಳನ್ನು ನೋಡಿ ಎತ್ತಿ ಮುದ್ದಾಡಿ, ಹಿಗ್ಗುತ್ತಾಳೆ. ಕಂದನ ತೊದಲ್ನುಡಿಯನ್ನು ಕೇಳಿ ಆನಂದಿಸುತ್ತಾಳೆ. ಮಗು ಅತ್ತು ಹಠ ಮಾಡಿದಾಗ, ಮುದ್ದಾಗಿ ನಕ್ಕಾಗ, ತುಂಟಾಟಮಾಡಿದಾಗ ಅದೆಲ್ಲವನ್ನು ಬಾಲಕೃಷ್ಣನಲ್ಲಿ ಕಂಡು ಹರಿದಾಸರು ಇಂತಹ ಬಾಲಕೃಷ್ಣನನ್ನು ಸಲಹುವ ಯಶೋದೆಯ ಪುಣ್ಯವನ್ನು ಕೊಂಡಾಡುತ್ತಾ ಅವಳೇ ಧನ್ಯಳೆಂದಿದ್ದಾರೆ.

ಹೀಗೆ ಹರಿದಾಸರು ಯಶೋದೆಯ ಭಾಗ್ಯವನ್ನು ಕೊಂಡಾಡುತ್ತಾ, ತಾವು ಸಹ ಯಶೋದೆಯ ಸ್ಥಾನದಲ್ಲಿ ನಿಂತು ಮಾತೃ ಹೃದಯದ ಆನಂದವನ್ನು ಅನುಭವಿಸಿದ್ದಾರೆ. ಶ್ರೀಪಾದರಾಜರಾದಿಯಾಗಿ ಎಲ್ಲ ಹರಿದಾಸರಲ್ಲೂ ಈ ವಾತ್ಸಲ್ಯ ಒಂದಲ್ಲ ಒಂದು ರೀತಿಯಲ್ಲಿ ಅಭಿವ್ಯಕ್ತವಾಗಿದೆ. ಹರಿದಾಸ ಸಾಹಿತ್ಯ ಪ್ರವರ್ತಕರಾದ ಶ್ರೀಪಾದರಾಜರಲ್ಲಿ ಈ ವಾಲತ್ಸಲ್ಯಭಾವ ಉಜ್ವಲವಾಗಿ ಹೊರಹೊಮ್ಮಿದೆ. "ಹರಿದಾಸರಿಗೆ ಶ್ರೀಕೃಷ್ಣನಾಗಲಿ, ಶ್ರೀರಾಮನಾಗಲಿ ಕೇವಲ ಲೌಕಿಕದ ಶಿಶುವಲ್ಲ. ಅವರು ಹುಟ್ಟಿನಿಂದಲೇ ದೈವಾಂಶ ಸಂಭೂತರು. ಅವರ ಆಟಪಾಠಗಳು ಭಗವಂತನು ತನ್ನ ಭಕ್ತರಿಗಾಗಿ ತೋರಿದ ಲೀಲೆಗಳು. ಆದ್ದರಿಂದ, ಈ ದೇವಾನುದೇವತೆಗಳ ಬಾಲ್ಯವನ್ನು ಚಿತ್ರಿಸುವ ನೆಪದಲ್ಲಿ ಅವರ ಅಲೌಕಿಕ ವ್ಯಾಪಾರಗಳನ್ನೆಲ್ಲಾ ಪಟ್ಟಿಮಾಡುವರು. ಹೀಗಾಗಿ ಹರಿದಾಸರು ಪ್ರತಿಪಾದಿಸಿರುವ ವಾತ್ಸಲ್ಯಭಾವದಲ್ಲಿ ಲೌಕಿಕ ಮತ್ತು ಅಲೌಕಿಕಗಳ ಭಾವ ಸಮನ್ವಯವಿದೆ"[೩೮]

ಹರಿದಾಸ ಸಾಹಿತ್ಯ ಆದ್ಯ ಪ್ರವರ್ತಕರಾದ ಶ್ರೀಪಾದರಾಜರಲ್ಲಿ ಈ ವಾತ್ಸಲ್ಯಭಾವ ಉಜ್ವಲವಾಗಿ ಹೊರಹೊಮ್ಮಿದೆ. 'ಪೋಪು ಹೋಗೋಣ ಬಾರೋ ರಂಗ ಪೋಪು ಹೋಗೋಣ' ಎಂದು ಬಾಲಕೃಷ್ಣನನ್ನು ಕರೆಯುವಲ್ಲಿ ಸ್ವತಃ ಶ್ರೀಪಾದರಾಜರೇ ಯಶೋಧೆಯಾಗಿ ಬಿಟ್ಟಿದ್ದಾರೆ. 'ಪೋಪು' ಎನ್ನುವ ಬಾಲಭಾಷೆಯಂತೂ ಕೀರ್ತನೆಗೆ ಸೊಬಗು ನೀಡಿದೆ. ಮಗ ಕೃಷ್ಣನು ಸ್ವಲ್ಪ ಸಮಯ ಕಾಣದಿದ್ದರೂ ಯಶೋಧೆಗೆ ಎಲ್ಲಿಲ್ಲದ ಆತಂಕ, ಕಳವಳ, ತುಂಟ ಕೃಷ್ಣನು ಆಟ ಮುಗಿಸಿ ಮನೆಗೆ ಬಂದಾಗ ಆತನನ್ನು ಕುರಿತು ಹಲವು ರೀತಿಯಲ್ಲಿ ಪ್ರಶ್ನಿಸಿ, ವಿಚಾರಣೆ ಮಾಡುತ್ತಾಳೆ.

**ಎಲ್ಲ್ಯಾಡಿ ಬಂದ್ಯೋ ಎನ್ನ ರಂಗಯ್ಯಾ ನೀ**

**ಎಲ್ಲ್ಯಾಡಿ ಬಂದ್ಯೋ ಎನ್ನ ಕಣ್ಣಮುಂದಾಡದೆ**
**.............................................................. ಪ**

**ಅಷ್ಟದಿಕ್ಕಲಿ ಅರಸಿ ಕಾಣದೆ ಬಹಳ**
**ದೃಷ್ಟಿಗೆಟ್ಟನು ನಿನ್ನ ನೋಡದೆ ಇ–**
**ನ್ನೆಷ್ಟು ಹೇಳಲಿ ಕೇಳಬಾರದೆ ರಂಗ**
**ವಿಠಲ ನೀ ಎನ್ನ ಕಣ್ಣ ಮುಂದಾಡದ್ಯೋ**

ಮಗ ಎಲ್ಲೂ ಹೋಗದೆ ತನ್ನ ಕಣ್ಣಮುಂದಾಡ ಬೇಕೆಂಬುದೇ ಗೋಪಿಯ ಬಯಕೆ. ಇನ್ನೊಂದು ಕೀರ್ತನೆಯಲ್ಲಿ

**ಎಲ್ಲಾಡಿ ಬಂದ್ಯೋ ನೀ ಹೇಳಯ್ಯ**
**ನಿಲ್ಲು ನಿಲ್ಲು ಗೋಪಲಕೃಷ್ಣಯ್ಯಾ ಪ**

**ನೊಸಲಲ್ಲಿ ಕಿರುಬೆವರಿಟ್ಟದೆ ಅಲ್ಲಿ**
**ಹೊಸಪರಿ ಸುದ್ದಿಯು ಹುಟ್ಟದೆ**
**ಪುಸಿಯಲ್ಲ ಈ ಮಾತು ಮುಟ್ಟದೆ ನಿನ್ನ**
**ನಸುನಗೆ ಕೀರ್ತಿ ಹೆಚ್ಚಿದೆ**

**ಬೆರಳ ಉಂಗುರವೆಲ್ಲಿ ಹೋಗಿದೆ ನಿನ್ನ**
**ಕೊರಳ ಪದಕವೆಲ್ಲಿ ನೀಗಿದೆ**
**ಸರಕೆಲ್ಲ ಅವಳಲ್ಲಿ ಸಾಗಿದೆ ಆ**
**ತರುಣಿ ಮಹಿಮೆ ಹೀಂಗಾಗಿದೆ**

**ಕಳ್ಳತನವ ಹೀಗೆ ಮಾಡಿದೆ ನಿನ್ನ**
**ಸುಳ್ಳು ಕಡೆಗೆ ನಾ ನೋಡಿದೆ**
**ಎಲ್ಲರಿಗೂ ಠಕ್ಕು ಮಾಡಿದೆ**
**ಚೆಲುವ ರಂಗವಿಠಲ ನಗೆಗೀಡಾದ್ಯೋ**

ಎಂದು ಮಗು ತುಂಟ ಕೃಷ್ಣನನ್ನು ನಿಲ್ಲಿಸುತ್ತಾಳೆ. ಆಟವಾಡಿ ಬಂದ ಕೃಷ್ಣನ ಹಣೆಯಲ್ಲಿ ಬೆವರ ಹನಿ ಹರಿಯುತ್ತಿದೆ. ಅವನು ಹಾಕಿಕೊಂಡಿದ್ದ ಉಂಗುರ, ಧರಿಸಿದ್ದ ಪದಕಗಳು ಮಾಯವಾಗಿದೆ. ಇದೆಲ್ಲ ಯಾರಿಗೆ ಕೊಟ್ಟು ಕಳೆದುಕೊಂಡನೋ ಎಂಬ ಸಿಟ್ಟು ಬೇರೆ. ಜೊತೆಗೆ ಅವನ ಮೇಲೆ ಹಲವು ದೂರುಗಳು ಬಂದಿವೆ. ಅವನು ಬೆಣ್ಣೆಯನ್ನು ಕಳ್ಳತನ ಮಾಡಿದ್ದು, ತನಗೆ ಸುಳ್ಳು ಹೇಳಿದ್ದು ಎಲ್ಲರಿಗೂ ಠಕ್ಕು ಮಾಡಿದ್ದು ಹೀಗೆ ಆತ ಮಾಡಿದ ಎಲ್ಲ ಅಕಾರ್ಯಗಳನ್ನು ಪ್ರಸ್ತಾಪಿಸುತ್ತಾಳೆ.

‘ದೃಷ್ಟಿ ತಾಕಿತೋ ಬೀದಿ ಮೆಟ್ಟಬ್ಯಾಡವೋ ನಾರಿಯರೆಲ್ಲ ಕಣ್ಣಿಟ್ಟು ಹೀರುವರೋ ನಿನ್ನ’[೪೧] ಎಂದು ಪ್ರಾರಂಭವಾಗುವ ಕೀರ್ತನೆಯಲ್ಲಿ ಮುದ್ದು ಗೋಪಾಲ ಕೃಷ್ಣನ ಸೌಂದರ್ಯವನ್ನು ವರ್ಣಿಸಿದ್ದಾರೆ. ಕೃಷ್ಣನ ಮುರಳಿಯ ಗಾನಕೆ ಆಕರ್ಷಿತರಾದ ಗೋಪಿಯರು ಶ್ರೀಕೃಷ್ಣನನ್ನು ಮುತ್ತುವರು. ಅದಕ್ಕಾಗಿ ಶ್ರೀಕೃಷ್ಣನಿಗೆ ಗೋಪಿಯರ ಬಗ್ಗೆ ಎಚ್ಚರದಿಂದಿರಲು ತಿಳಿಸುತ್ತಾ ಮತ್ತೆ ಬುದ್ಧಿಮಾತುಗಳನ್ನು ಹೇಳುವಳು. ಆದರೆ ಅವನು ಅಮ್ಮನ ಮಾತನ್ನು ಕೇಳುವನೇ ಅಲ್ಲ. ಭಕ್ತಿಯಿಂದ ತನ್ಮಯರಾದ ಗೋಪಿಯರಿಗೆ ಶ್ರೀಕೃಷ್ಣನ ಪಾದ ದರ್ಶನವಾದರೆ ಸಾಕು ಎಂಬ ಧನ್ಯತೆ.

**ಇಕ್ಕೊ ನೋಡೆ ರಂಗನಾಥನ ಚಿಕ್ಕ ಪಾದವ ಪ**

**ಸಿಕ್ಕಿತೆ ಶ್ರೀಲಕ್ಷ್ಮಿಪತಿಯ ದಿವ್ಯ ಪಾದವ ಅ.ಪ**

**ಶಂಖ ಚಕ್ರ ಗದಾ ಪದ್ಮ ಅಂಕಿತ ಪಾದವ**
**ಅಂಕುಶ ಕುಲಿಶ ಧ್ವಜರೇಖಾ ಅಂಕಿತ ಪಾದವ**
**ಪಂಕಜಾಸನನ ಹೃದಯದಲ್ಲಿ ನಲಿಯುವ ಪಾದವ**
**ಸಂಕಟಹರಣ ವೆಂಕಟೇಶನ ದಿವ್ಯ ಪಾದವ**

**ಲಲನೆ ಲಕ್ಷ್ಮಿಯಂಕದಲ್ಲಿ ನಲಿವ ಪಾದವ**
**ಜಲಜಾಸನನ ಅಭೀಷ್ಟವೆಲ್ಲ ಸಲಿಸುವ ಪಾದವ**
**ಮಲ್ಲರ ಗೆಲಿದು ಕಂಸಾಸುರನ ಕೊಂದ ಪಾದವ**
**ಬಲಿಯ ಮೆಟ್ಟಿ ಭಾಗೀರಥಿಯ ಪಡೆದ ಪಾದವ**

**ಬಂಡೆಯ ಬಾಲೆಯ ಮಾಡಿದ ಉದ್ದಂಡ ಪಾದವ**
**ಬಂಡಿಲಿದ್ದ ಶಕಟಾಸುರನ ಒದ್ದ ಪಾದವ**
**ಅಂಡಜ ಹನುಮರ ಭುಜದೊಳೊಪ್ಪುವ ಪಾದವ**
**ಕಂಡೆವೇ ಶ್ರೀರಂಗವಿಠಲನ ದಿವ್ಯ ಪಾದವ**[೪೨]

ಎಂದು ಆ ಪುಟ್ಟ ಮುದ್ದು ಪಾದದಿಂದ ಧನ್ಯರಾದವರ ಮಹಾತ್ಮೆಯನ್ನೆಲ್ಲಾ ವರ್ಣಿಸುತ್ತಾ, ಆ ಮೂಲಕ ಭಗವಂತನ ಅವತಾರಗಳನ್ನು ಕೊಂಡಾಡುತ್ತಾ ಕೃತಾರ್ಥರಾಗುವರು.

ಶ್ರೀ ಕೃಷ್ಣನ ಅಗಲಿಕೆಯನ್ನು ಸಹಿಸಲಾಗದೆ ಸದಾ ಅವನ ಸಾನ್ನಿಧ್ಯಕ್ಕಾಗಿ, ಅವನ ಪಾದದರ್ಶನಕ್ಕಾಗಿ ಕೆಲವು ಗೋಪಿಯರು ಹಾತೊರೆದರೆ, ಮತ್ತೆ ಕೆಲವು ಗೋಪಿಯರು ‘ನಿನ್ನ ಮಗನ ಲೀಲೆಯ ತಾಳಲಾರೆವೆ ನಾವು ತರಳನ ದುಡುಕ, ಹೇಳಬಾರದೆ ಗೋಪಾಲಕೃಷ್ಣಗೆ ಬುದ್ಧಿ ಅಮ್ಮ’,[೪೩] ಎಂದು ತಮ್ಮ ದೂರುಗಳ ಸರಮಾಲೆಯನ್ನು ಯಶೋಧೆಗೆ ಹೇಳುವರು. ಇದನ್ನು

ಕೇಳಿದ ಯಶೋಧೆ ಅದಕ್ಕೆ ಪ್ರತಿಕ್ರಿಯಿಸುತ್ತಾ 'ಏಕೆ ದೂರುವಿರೇ ರಂಗಯ್ಯನ ಏಕೆ ದೂರುವಿರೇ, ಸಾಕು ನಿನ್ನ ದೂರ ಬಲ್ಲೆನು ಈ ಕುವರನಾಕೃತ್ಯ ಮಾಳ್ವನೆ, ದಟ್ಟಡಿಯಿಡಲು ಬಾರದ ಕೃಷ್ಣ ಕೊಟ್ಟಿಗೆಯಲಿ ಇಂದು ಕರುಗಳ ಬಿಟ್ಟನೇ'? ಎಂದು ಎಲ್ಲ ಆಪಾದನೆಗಳನ್ನು ನಿರಾಕರಿಸುತ್ತಾಳೆ.

ಈ ರೀತಿ ತಪ್ಪು ಮಾಡಿದ ಮಗನನ್ನು ಒಪ್ಪಿಟ್ಟುಕೊಳ್ಳುವ ಯಶೋದೆಯ ಮಾತೃವಾತ್ಸಲ್ಯದ ಭಾವುಕತೆಯನ್ನು ಇಲ್ಲಿ ಕಾಣಬಹುದು. ಈ ಎಲ್ಲ ದೂರನ್ನು ಕೇಳಿದ ಕೃಷ್ಣನು ತನ್ನನ್ನು ತಾನು ಸಮರ್ಥಿಸಿಕೊಳ್ಳುತ್ತಾನೆ.

**ಹರವಿಯ ಹಾಲು ಕುಡಿಯಲು ಎನ್ನ ಹೊಟ್ಟೆ**
**ಕೆರೆಯೇನೆ ಹೇಳಮ್ಮಯ್ಯ**
**ಕರೆದು ಅಣ್ಣನ ಕೇಳಮ್ಮ ಉಂಟಾದರೆ**
**ಒರಳಿಗೆ ಕಟ್ಟಮ್ಮಯ್ಯ**[೪೪]

ಎಂದು ಮುದ್ದು ಮುದ್ದಾಗಿ ತೊದಲ್ನುಡಿಗಳಲ್ಲಿ ಮಾತನಾಡಿದಾಗ ಅದನ್ನು ಕೇಳಿದ ಯಶೋದೆಯ ಕೋಪ ಕರಗಿ, ಅವನ ಮೇಲೆ ಪ್ರೀತಿ ಉಕ್ಕಿ 'ಶೃಂಗಾರದ ಮಗನೆತ್ತಿ ರಂಗವಿಠಲನ ಪಾಡಿ ಉಡುಪಿಯ ಉತ್ತುಂಗ ಕೃಷ್ಣನ ತೂಗಿದಳು'.

'ಲಾಲಿ ಗೋವಿಂದ ಲಾಲಿ ಕೌಸಲ್ಯ ಬಾಲ ಶ್ರೀರಾಮ ಲಾಲಿ'[೪೫] ಎಂಬ ಲಾಲಿ ಪದದ ಕಲ್ಪನೆಯಂತೂ ವಿಶಿಷ್ಟವಾದುದು. ದೇವತೆಗಳು ಪರಮಾತ್ಮನನ್ನೇ ತೊಟ್ಟಿಲಲ್ಲಿ ಮಲಗಿಸಿ ಜೋಗುಳ ಹಾಡುತ್ತಾರೆ, ಇಲ್ಲಿ ಭೂಮಿಯೇ ಚಿನ್ನದ ತೊಟ್ಟಿಲು, ನಾಲ್ಕು ವೇದಗಳೇ ಸರಪಳಿಗಳು, ಸೂರ್ಯಚಂದ್ರರೇ ಕಲಶಗಳು ಈ ಜೋಗುಳ ಪದಗಳನ್ನು ನೆಪ ಮಾಡಿಕೊಂಡು ದಶಾವತಾರವನ್ನು ಮನೋಜ್ಞವಾಗಿ ಚಿತ್ರಿಸಿದ್ದಾರೆ.

ವ್ಯಾಸರಾಯರೂ ಸಹ ಶ್ರೀ ಕೃಷ್ಣನ ಬಾಲ್ಯವನ್ನು ಎದೆ ತುಂಬಿ ಹಾಡಿದ್ದಾರೆ 'ನಿನ್ನ ಮಗನೇನೆ ಗೋಪಿ ಚೆನ್ನಾರಿ ಚೆಲುವ ಉಡುಪಿಯ ಕೃಷ್ಣರಾಯ' ಎಂದು ಪ್ರಶ್ನಿಸುತ್ತಾ

**ಮುಂಗುರುಳು ಮುಂದಲೆಗೆ ಬಂಗಾರದರಳೆಲೆ**
**ರಂಗು ಮಾಣಿಕದುಂಗುರವಿಟ್ಟು**
**ಪೊಂಗೆಜ್ಜೆ ತೊಡರು ಅಂದಿಗೆ ಘಲು ಘಲುರೆನೆ**
**ಅಂಗಳದಲಾಡುತ ಈ ಮುದ್ದುಬಾಲ**
**.............................................................."**[೪೬]

ಎಂಬ ಬಾಲಕೃಷ್ಣನ ಚೆನ್ನಾರಿ ಚೆಲುವನ್ನು ವರ್ಣಿಸಿದ್ದಾರೆ. ಇದೇ ರೀತಿಯ ಇನ್ನೊಂದು ಕೀರ್ತನೆ 'ಕಣ್ಣಿಗೆ – ಕಟ್ಟಿದಂತಿದೆ ಬಣ್ಣದ ಕೊಳಲ ಭಾವಿಸಿ ನೋಡಬಾರದೆ' ಎಂದು ಪ್ರಾರಂಭವಾಗುವ ಕೀರ್ತನೆಯಲ್ಲೂ ಕೃಷ್ಣನ ಅಂದ – ಚಂದವನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ. ಮತ್ತೊಂದು ಕೀರ್ತನೆಯಲ್ಲಿ

'ಕಡಗೋಲು ತಾರೆನ್ನ ಚಿನ್ನವೆ
ಮೊಸರೊಡೆದರೆ ಬೆಣ್ಣೆಬಾರದು, ಮುದ್ದುರಂಗ'

**ಅಣ್ಣನ ಒಡಗೊಂಡು ಬಾರೈಯ–ಸವಿ**
**ಬೆಣ್ಣೆಯ ಮುದ್ದೆಯ ಮೆಲುವಿರಂತೆ**
**ಬಣ್ಣದ ಸರವನ್ನು ಕೊರಳಲ್ಲಿ ಹಾಕುವೆ**
**ಚಿಣ್ಣರೊಡನೆ ಆಡಕಳುಹುವೆ ರಂಗ**

**ಪುಟ್ಟ ಬಜ್ಜೆಯ ತಂದು ನಿನ್ನಯ ಚಿನ್ನದ**
**ತೊಟ್ಟಿಲ ಕಾಲಿಗೆ ಕಟ್ಟಿಸುವೆ**
**ಬಟ್ಟಲ ತುಂಬಿದ ಸಕ್ಕರೆ ನಿನಗೀವೆ**
**ಕಟ್ಟಾಣಿ ಮುತ್ತಿನ ಸರವನೀವೆ**

**ಬಡವರ ಭಾಗ್ಯದ ನಿಧಿಯೆ ಗೋಕುಲ**
**ದೊಡೆಯನೆ ಮಾಣಿಕ್ಯದ ಹರಳೆ**
**ಕಡುಮುದ್ದು ಉಡುಪಿನ ಬಾಲಕೃಷ್ಣಯ್ಯ**
**ದುಡುಕ ಮಾಡುವರೇನೊ ಪೆಂಗಳೊಳುರಂಗ,,**

ಯಶೋಧೆ ಮೊಸರುಕಡೆಯಲು ಕೂತಾಗ ಬಾಲಕೃಷ್ಣ ಕಡೆಗೋಲನ್ನು ತೆಗೆದುಕೊಂಡು ಹೊರಟುಬಿಡುತ್ತಾನೆ. ಕೃಷ್ಣನಿಗೆ ಬೆಣ್ಣೆ, ಬಣ್ಣದ ಸರ, ಸಕ್ಕರೆಯನ್ನು ಕೊಡುವ ಭರವಸೆ ನೀಡಿ, ಆ ಪುಟ್ಟ ಕಂದನ ಮನಸ್ಸನ್ನು ಪ್ರೀತಿಯಿಂದ ಗೆದ್ದು, ತಾಳ್ಮೆಯಿಂದ ಮಗುವನ್ನು ಒಲಿಸಿಕೊಳ್ಳುವ ಮಾತೃ ಹೃದಯದ ಜಾಣ್ಮೆ ನೈಪುಣ್ಯತೆಗಳನ್ನು ವ್ಯಾಸರಾಜರು ಚಿತ್ರಿಸುತ್ತಾರೆ. ಮತ್ತೊಂದು ಕೀರ್ತನೆಯಲ್ಲಿ

ತುಂಟ ಕೃಷ್ಣನ ಕಾಟವನ್ನು ಸಹಿಸಲಾರದೆ ಗೋಪಿಯರು ಯಶೋದೆಯಲ್ಲಿ ದೂರುವರು.

**ಕೇಳೆ ಯಶೋದೆ ನಿನ್ನ ಮಗ ಲೂಟಿಯು** ಪ

**ತಾಳಲಾರೆವೆ ನಾವು ತರಳನ ದುಡುಕು**
**ಪೇಳಬಾರದೆ ಗೋಪಾಲಕೃಷ್ಣಗೆ ಬುದ್ಧಿ**

**ಅಮ್ಮಾ – ಇದು ಚೆನ್ನಾಯಿತು ತಿಳಿದವನಲ್ಲವೆ**
**ನೀ ಕೇಳೆ ಯಶೋದೆ ನಿನ್ನ ಮಗನ ಲೂಟಿಯು[೪೮]      ಅ.ಪ.**

ಎಂದು ಮೊದಲು ಮಾಡಿ, ಅವನು ಕಣ್ಣು ತಪ್ಪಿಸಿ ಹಾಲು, ಮೊಸರು, ಬೆಣ್ಣೆಗಳನ್ನು ಕದ್ದದ್ದು, ಕೋಲಿನಿಂದ ನೀರಿನ ಗಡಿಗೆಯಲ್ಲಿ ಎಂಜಲುಗುಳಿ ಹೋದದ್ದು, ತಮ್ಮ ಸೀರೆಗಳನ್ನು ಕದ್ದದ್ದು ಹೀಗೆ ಅವನ ಪುಂಡಾಟಗಳ ಪಟ್ಟಿಯನ್ನೇ ಯಶೋದೆಯ ಮುಂದಿಡುವರು. 'ಎಷ್ಟು ಜನ್ಮದಲಿ ಮಾಡಿದಳೊ ಗೋಪಿ ಶ್ರೀಕೃಷ್ಣನ ಲೀಲೆಯನು ನೆನೆದು ಹಿಗ್ಗುವ ಸುಕೃತ' ಎಂದು ಯಶೋದೆ ಕೃಷ್ಣನನ್ನು ಮಗನಾಗಿ ಪಡೆಯಲು ಎಷ್ಟು ಜನ್ಮಗಳಲ್ಲಿ ಪುಣ್ಯ ಮಾಡಿದ್ದಾಳೋ ಎಂದು ಅವಳ ಭಾಗ್ಯವನ್ನು ಕೊಂಡಾಡುತ್ತಾರೆ. ಹಾಗೆಯೇ ಅವಳು ಕೃಷ್ಣನಿಗೆ ನಾನಾ ಅಲಂಕಾರಗಳನ್ನು ಮಾಡುವ ಕೃಷ್ಣನಿಗೆ ಲಾಲನೆ – ಪಾಲನೆ ಮಾಡುವ, ಅವನ ಲೀಲೆಗಳನ್ನು ಕಂಡು ಹಿಗ್ಗುವ ಅವನನ್ನು ತೂಗಿ ಮುದ್ದಾಡುವ, ಅವನಿಗೆ ಆಟವಾಡಿಸುವ ರೀತಿಗಳನ್ನು ಕಲ್ಪಿಸಿಕೊಂಡು, ಅವಳೇ ಧನ್ಯಳೆಂದಿದ್ದಾರೆ. ಬಹುಶಃ ವ್ಯಾಸರಾಯರ ಇಂತಹ ಕೀರ್ತನೆಗಳಿಂದ ಸ್ಫೂರ್ತಿ ಪಡೆದೆ ಪುರಂದರ ದಾಸರು 'ಆಡಿಸಿದಳೆಶೋಧೆ ಜಗದೋದ್ಧಾರನ, ಮಗನೆಂದು ತಿಳಿದು' ಮುಂತಾದ ಕೀರ್ತನೆಗಳನ್ನು ರಚಿಸಿರಬೇಕು.

ಶ್ರೀಪಾದರಾಜ, ವ್ಯಾಸರಾಯರಂತೆ ವಾದಿರಾಜರೂ ಸಹ ಶ್ರೀಕೃಷ್ಣನ ಬಾಲ್ಯವನ್ನು ಹಲವು ರೀತಿಯಲ್ಲಿ ವರ್ಣಿಸಿದ್ದಾರೆ. 'ಕಡು ಮುದ್ದು ಮೋಹನನನಾದ ಈ ಸೊಬಗ ನಮ್ಮುಡುಪಿನ ಕೃಷ್ಣರಾಯನ ನೋಡು ನೋಡು'[೪೯] ಎಂಬ ಕೀರ್ತನೆಯಲ್ಲಿ ಉಡುಪಿಯ ಮುದ್ದು ಕೃಷ್ಣನ ಸೊಬಗನ್ನು ಸುಂದರವಾಗಿ ಚಿತ್ರಸಿದ್ದಾರೆ. 'ಕುಣಿದಾಡೊ ರಂಗ ನಲಿದಾಡೊ, ಕುಣಿದಾಡೊ ಕುಂದಣದ ಸರಳೆ ನಲಿದಾಡೊ ಮಾಣಿಕದ ಹರಳೆ,'[೫೦] ಎಂದು ಮೊದಲಾಗುವ ಕೀರ್ತನೆಯಲ್ಲಿ ಶ್ರೀಕೃಷ್ಣನ ನಾಟ್ಯದ ಸೊಬಗಿಗೆ ಮಾರುಹೋಗಿ ಆತನ ಪಾದ ಸ್ಪರ್ಶ ಮಾತ್ರದಿಂದಲೇ ಹೇಗೆ ಭಕ್ತರನ್ನು ಉದ್ಧರಿಸಿದನೆಂಬುದನ್ನು ಪ್ರಸ್ತಾಪಿಸುತ್ತಾರೆ. ಶ್ರೀರಾಮನು ಅಹಲ್ಯೆಯನ್ನು ಉದ್ಧರಿಸಿದ್ದು, ಕೃಷ್ಣಾವತಾರದಲ್ಲಿ ಶಕಟಾಸುರನನ್ನು ಸಂಹರಿಸಿದ್ದು, ಕಾಳಿಂಗ ಮರ್ದನ ಮಾಡಿದ್ದು, ಬಲಿಯನ್ನು ಮೆಟ್ಟಿದ್ದು ಎಲ್ಲವೂ ಈ ಹಸುಳೆ ಪಾದವಲ್ಲವೇ ಎಂದು ಭಗವಂತನ ಪಾದ ಮಹಿಮೆಯನ್ನು ಕೊಂಡಾಡುತ್ತಾರೆ. ಇದು ಬಹುಶಃ ಶ್ರೀಪಾದರಾಜರ 'ಇಕೋ ನೋಡೆ ರಂಗನಾಥನ ಚಿಕ್ಕ ಪಾದವ' ಕೀರ್ತನೆಯಿಂದ ಪ್ರೇರಣೆ ಹೊಂದಿ ರಚಿಸಿರಬಹುದು. ಇನ್ನೊಂದು ಇದೇ ರೀತಿಯ

ಕೀರ್ತನೆ 'ಎಂಥಾ ಪಾವನ ಪಾದವೋ ಕೃಷ್ಣಯ್ಯಾ ಇನ್ನೆಂಥಾ ಚೆಲುವ ಪಾದವೊ'[೫೧] ಎಂಬ ಕೀರ್ತನೆಯಲ್ಲಿ ಪಾದ ಮಹಾತ್ಮೆಯನ್ನು ಸ್ತುತಿಸಿದ್ದಾರೆ. ಭಗವಂತನ ಪಾದವನ್ನು ಕಾಣಬೇಕೆಂಬುದೇ ಅವರ ಅದಮ್ಯ ಹಂಬಲ.

ಕೃಷ್ಣನ ಕಾಟವನ್ನು ತಾಳಲಾರದೆ ಗೋಪಿಯರು 'ಕೇಳಲೊಲ್ಲನೆ ಎನ್ನ ಮಾತನು ರಂಗ ಕಾಳೀಮರ್ದನ ಕೃಷ್ಣಗೆ ಹೇಳೆ ಗೋಪ್ಯಮ್ಮ ಬುದ್ಧಿ'[೫೨] ಎಂದು ಯಶೋದೆಗೆ ಕೃಷ್ಣನ ಮೇಲೆ ದೂರು ನೀಡಿದರೆ ಗೋಪಿಯರ ದೂರನ್ನು ಸಹಿಸಲಾರದೆ ಯಶೋದೆ 'ಎನ್ನಾಣೆ ಬ್ಯಾಡ ಬ್ಯಾಡವೋ ರಂಗ ನಿನಗಿದು ಚೆನ್ನಗಿತೇರ ಗೋವಿಂದ. ಎಂದು ಬೇಡಿಕೊಳ್ಳುತ್ತಾಳೆ. ಯಶೋದೆಯ ಮಾತಿಗೆ, ಪ್ರಶ್ನೆಗೆ, ಕೃಷ್ಣನು ತನ್ನನ್ನು ತಾನು ಸಮರ್ಥಿಸಿಕೊಳ್ಳುತ್ತಾ ಮುದ್ದಾಗಿ ಪ್ರತಿಕ್ರಿಯಿಸುವನು. ಉತ್ತರ ಪ್ರತ್ಯುತ್ತರದ ತಂತ್ರ ಈ ಕೀರ್ತನೆಗೆ ಸೊಬಗು ನೀಡಿದೆ. 'ಎನ್ನಪ್ಪ ಕಂದನೆ ಚಿಣ್ಣ ಗೋಪೇರು ಬಂದು ನಿನ್ನ ದೂರುತಲೈದಾರೋ ಗೋವಿಂದ, ಎಂದು ಪ್ರಶ್ನಿಸಿದರೆ 'ಕನ್ನೇರು ಕೊಬ್ಬಿಂದ ಅನ್ಯಾಯ ನುಡಿತಾರೆ ಇನ್ನೇನು ಮಾಡಲಮ್ಮ ಗೋಪೆಮ್ಮ ಎನ್ನುತ್ತಾನೆ. ಹೀಗೆ ಅವರ ಪ್ರಶ್ನೋತ್ತರಗಳು ಸಾಗುತ್ತದೆ. ಕೃಷ್ಣನು ಎಲ್ಲೂ ಸೋಲದೆ ತನ್ನನ್ನು ತಾನು ಸಮರ್ಥಿಸಿಕೊಳ್ಳುತ್ತಾನೆ. ಕಡೆಗೆ ಯಶೊದೆಯೆ ಸೋತು

**ಬಾಯೆನ್ನ ರನ್ನವೆ ಬಾಯೆನ್ನ ಚಿನ್ನವೆ**
**ಬಾಯೆನ್ನ ಮೋಹದ ಗಿಣಿಯೆ ಗೋವಿಂದ**
**ಬಾಯೆಂದು ಯಶೋದೆ ಕರೆದಳು ಬಿಗಿದಪ್ಪಿ**
**ಬಾಯೆನ್ನ ಹಯವದನ ಗೋವಿಂದ [೫೩]**

ಎನ್ನುತ್ತಾ ಮಗನನ್ನು ಅಕ್ಕರೆಯಿಂದ ಬಿಗಿದಪ್ಪುತ್ತಾಳೆ ಎಂದು ಹೇಳುತ್ತಾ ಸಹಜವಾಗಿ ಮುಕ್ತಾಯ ಮಾಡುತ್ತಾರೆ.

'ಏನು ಸುಕೃತವ ಮಾಡಿದಳೊ ಯಶೋದೆ ಶ್ರೀನಿದಿಯಾದ ಕೃಷ್ಣನ್ನ ಕರೆದು ಮುದ್ದಿಸುವಳಂತೆ ಎಂದು ಯಶೋದೆಯ ಪುಣ್ಯವನ್ನು ಕೊಂಡಾಡುತ್ತಾರೆ.

**ಗಂಗಾಜನಕಗೆ ಗಡಿಗೆನೀರೆರೆವಳಂತೆ**
**ಮಂಗಳಾಂಗಗೆ ಭಾಮೆ ಶೃಂಗರಿಪಳಂತೆ**
**ತುಂಗ ಭೂಧರನ್ನ ತೊಟ್ಟಿಲೊಳು ತೂಗುವಳಂತೆ**
**ಕಂಗಳಿಗಗೋಚರನ ಕರೆದಪ್ಪಿಕೊಂಬಳಂತೆ[೫೪]**

ಈ ಇಡೀ ಕೀರ್ತನೆ ಹೀಗೆ ಸಾಗುತ್ತದೆ.. ಎಲ್ಲವನ್ನೂ ಅರಿತ ಸರ್ವೋತ್ತಮನಾದ ಭಗವಂತನಿಗೆ ಯಶೋದೆ ನಾನಾ ರೀತಿಯಲ್ಲಿ ಲಾಲನೆ – ಪಾಲನೆ ಮಾಡುತ್ತಿರುವುದನ್ನು ಕಂಡು ಆಶ್ಚರ್ಯಚಕಿತರಾಗಿ ಉದ್ಗಾರ ತೆಗೆದಿದ್ದಾರೆ. ತಮಗೂ ಭಗವಂತನನ್ನು ಎತ್ತಿ ಆಡಿಸುವ ಯಶೋದೆಯಂತಹ ಭಾಗ್ಯ ಸಿಗಬೇಕೆಂಬುದು ವಾದಿರಾಜರ ಬಯಕೆ. 'ಲಾಲಿ ಶ್ರೀಹಯವದನ ಲಾಲಿ ರಂಗವಿಠಲ ಲಾಲಿ ಗೋಪಿನಾಥ ಲಕ್ಷ್ಮೀ ಸಮೇತ'೫೫ ಎಂಬ ಪಲ್ಲವಿಯಿಂದ ಪ್ರಾರಂಭವಾಗುವ ಈ ಚಿಕ್ಕ ಕೀರ್ತನೆಯಲ್ಲಿ ಹರಿಗೆ ಹರಿಯ ಲೀಲೆಗಳನ್ನು ಹೇಳುತ್ತಾ, ಅವನ ತುಂಟಾಟಗಳನ್ನು ತಾಳದೆ, ಅವನನ್ನು ಸಮಾಧಾನಪಡಿಸಿ ಮಲಗಿಸುವ ಕೆಲಸವನ್ನು ಯಶೋದೆಯು ನಂದಗೋಪನಿಗೆ ಒಪ್ಪಿಸಿ ಬಿಡುವುದನ್ನು ಸೊಗಸಾಗಿ ಚಿತ್ರಿಸಿದ್ದಾರೆ.

ವಿದ್ಯಾಪ್ರಸನ್ನತೀರ್ಥರು ಯಶೋಧೆ ತನ್ನ ಭಾಗ್ಯಕ್ಕೆ ತಾನೇ ಹೆಮ್ಮೆಪಡುತ್ತಾ ಅಕ್ಕರೆಯಿಂದ ಜಗದೀಶನಾದ ಕೃಷ್ಣನನ್ನು ತೊಟ್ಟಿಲಲ್ಲಿಟ್ಟು ತೂಗುವ ಚಿತ್ರವನ್ನು ಮನೋಜ್ಞವಾಗಿ ಚಿತ್ರಿಸಿದ್ದಾರೆ.

**ಕಂದನ ತೂಗಿದಳು ಯಶೋದೆ ಕಂದನ ತೂಗಿದಳು ಪ**

**ಇಂದಿರಾರಮಣನ ಅಂದವದನದಲಿ**
**ಮಂದಹಾಸವ ನೋಡಿ ನಂದದಿ ಹಿಗ್ಗುತ ಅ.ಪ**

**ತಾಮರಸಾಕ್ಷನ ಕೋಮಲಾಂಗವ ನೋಡಿ**
**ಆ ಮಹಿಳೆಯು ಬಲು ಪ್ರೇಮಭರಿತಳಾಗಿ**

**ಜಗಜಗಿಸುವ ನವಮಣಿಯ ತೊಟ್ಟಿಲಲಿ**
**ಜಗದೀಶನು ತನ್ನ ಮಗನೆಂದು ತಿಳಿಯುತ**

**ಪದುಮನಾಭನನು ಹೃದಯದಿ ನೆನಯುತ**
**ಮದದಿಂದಲಿ ದಿವ್ಯ ಪದಗಳ ಪಾಡುತ**

**ಲಕ್ಷ್ಮೀಶನು ಇತ್ತ ಪುತ್ರಭಿಕ್ಷೆಯೆಂದು**
**ಅಕ್ಷಿಗಳಲಿ ಸುಖಭಾಷ್ಪವ ಸುರಿಸುತ**

**ತನ್ನ ಸೌಭಾಗ್ಯವು ಅನ್ಯರಿಗಾವುದೆಂದು**
**ಹೆಮ್ಮೆಯಿಂದ ಪ್ರಸನ್ನ ನಂದನ ಸತಿ೫೬**

ಮತ್ತೊಂದು ಕೀರ್ತನೆಯಲ್ಲಿ 'ಮಲಗು ಮಲಗೆಲೊ ಸುಮ್ಮನೆ ಸುಕುಮಾರ ಚೆಲುವ

ಜೋಗುಳವ ಪಾಡುವೆ ಗೋಪಾಲ'[೫೭] ಎಂಬ ಕೀರ್ತನೆಯಲ್ಲಿ ಬಾಲ ಕೃಷ್ಣನು ಶಕಟನನ್ನು ಕೊಂದ ಬಗೆಯನ್ನು ವರ್ಣಿಸುತ್ತಾ ಆಯಾಸವಾದ ಬಾಲಕೃಷ್ಣನನ್ನು ಸಂತೈಸುತ್ತಾ ಅವನನ್ನು ಮಲಗಿಸಲು ಪ್ರಯತ್ನಿಸಿದ್ದಾರೆ. 'ಮಲಗೆಲೊ ಗೋಪಾಲ ಎನ್ನಯ ಕರವು ನೋಯುತಿಹುದೊ ಶ್ರೀಕೃಷ್ಣ'[೫೮] ಎಂದು ಮೊದಲಾಗುವ ಇನ್ನೊಂದು ಕೀರ್ತನೆಯಲ್ಲಿ, ದುಷ್ಟ ಪೂತನಿಯ ಕೊಂದು ನಿನ್ನ ಹೊಟ್ಟೆ ನೋಯುತಿಹುದೇನೋ, ಆ ನಾರಿಯ ದೃಷ್ಟಿ ತಾಕಿತೆ, ಮುರಳಿಯನೂದಿ ಬೆರಳು ನೋಯುತಿಹುದೇ ಎಂದು ಕೃಷ್ಣನ ಸಾಹಸಗಳನ್ನು ವರ್ಣಿಸುತ್ತಲೇ ಭಗವಂತನಿಗೆ ಲಾಲಿ ಹಾಡಿದ್ದಾರೆ.

ವಾತ್ಸಲ್ಯ ಭಕ್ತಿಯು ಪಂಚಭಾವಗಳಲ್ಲಿ ವಿಶಿಷ್ಟ ಸ್ಥಾನ ಪಡೆದಿದೆ. ನಾವು ಪ್ರತಿನಿತ್ಯ ಕಾಣುವ ತಾಯಿ – ಮಗುವಿನ ಸಂಬಂಧವನ್ನು ಸಹಜವಾಗಿ ಚಿತ್ರಿಸುತ್ತಾ, ತಾವು ಯಶೋದೆಯೋ, ಗೋಪಿಯೋ ಆಗಿ ಭಗವಂತನನ್ನು ಮಗುವಾಗಿ ಕಲ್ಪಿಸಿಕೊಂಡು, ಲೌಕಿಕ ಸಂಬಂಧವನ್ನು ಮೀರಿ ಅಲೌಕಿಕ ಬಾಂಧವ್ಯದ ಉನ್ನತವಾದ ನೆಲೆಯನ್ನು ತಲುಪಿದ್ದಾರೆ. ಶ್ರೀಕೃಷ್ಣನ ಬಾಲಲೀಲೆಗಳು, ಅವನ ತುಂಟಾಟಗಳನ್ನು ಸಹಜ ಮಗುವಿನಂತೆ ರಮ್ಯವಾಗಿ ವರ್ಣಿಸುತ್ತಲೇ, ಅವನ ಲಾಲನೆ – ಪಾಲನೆ, ಅವನ ಸೌಂದರ್ಯ ವರ್ಣನೆ, ಅವನ ದೈವೀಕತ್ವ, ಅತಿಮಾನುಷತ್ವಗಳನ್ನು ಬೆರೆಸಿ ಕೀರ್ತನೆಗಳನ್ನು ರಚಿಸಿರುವ ರೀತಿ ಅನನ್ಯವಾಗಿದೆ. ಯತಿಗಳು ಸಂಸಾರದಿಂದ ದೂರಉಳಿದವರಾದರೂ ಅವರಲ್ಲಿನ ಮಾತೃಹೃದಯ ಉಜ್ವಲವಾಗಿ ಹೊರಹೊಮ್ಮಿದೆ.

### ೪.೫ ಶಾಂತ ಭಾವ

ಭಕ್ತನು ಭಗವಂತನ ಬಾಂಧವ್ಯದ ಪರಿಧಿಯ ಹೊರಗೆ ನಿಂತು, ಭಗವಂತನ ಅದ್ಭುತಲೀಲೆಯನ್ನು ಕಂಡು ಅಚ್ಚರಿಯಿಂದ ಅವನ ಮಹಿಮೆಗಳನ್ನು ಸ್ತುತಿಸಿ ಪ್ರಶಾಂತ – ಚಿತ್ತದಿಂದ ಹಾಡಿ ಆನಂದಿಸುವುದೇ ಶಾಂತಭಾವ. "ಪರಮಾತ್ಮನ ಸರ್ವವ್ಯಾಪಕತ್ವ, ಸರ್ವಶಕ್ತಿತ್ವ, ಅಂಚಿತತ್ವ, ಐಶ್ವರ್ಯಾದಿಗಳ ಅಕಲನದಿಂದ ಭಕ್ತನು ಸಮಾಧಾನ ಹೊಂದಿ, ಒಂದು ಬಗೆಯ ಗಂಭೀರ ಭಾವದಿಂದ ದೇವರನ್ನು ಕೊಂಡಾಡುತ್ತಾನೆ"[೫೯]

ಶ್ರೀಪಾದರಾಜರು ತಮ್ಮ ಇಷ್ಟದೈವ ರಂಗನಾಥನನ್ನು ಕಂಡ ದಿವ್ಯ ಅನುಭವವನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ.

ಶ್ರೀರಂಗವಿಠಲನ ಶ್ರೀಮುಕುಟಕೆ ಶರಣು

ಶಿರದಲೊಪ್ಪುವ ನೀಲಕುಂತಳಕೆ ಶರಣು
ಸಿರಸಹೋದರನರ್ಧದವಳಿಗೆ ಶರಣು

ಸೊಂಪು ನೋಟದ ಚೆಲುವ ಸೋಗೆಗಣ್ಣಿಗೆ ಶರಣು
ಸಂಪಿಗೆಯ ಕುಸುಮ ಸಮನಾಸಿಕಕೆ ಶರಣು
ಗುಂಪುರತ್ನದ ಕರ್ಣಕುಂಡಲಗಳಿಗೆ ಶರಣು
ಇಂಪುದರ್ಪಣನಿಭ ಕಪೋಲಗಳಿಗೆ ಶರಣು

ಕುಂದಕುಟ್ಮಲ ಪೋಲ್ವ ದಂತಪಕ್ತಿಗೆ ಶರಣು
ಅಂದವಾಗಿರುವ ಬಿಂಬೋಷ್ಠಕೆ ಶರಣು
ಚಂದ್ರಿಕಾನಿಭ ಮುದ್ದುಮಂದಹಾಸಕೆ ಶರಣು
ನಂದಗೋಪನ ಮುದ್ದು ಕಂದನಿಗೆ ಶರಣು

ಅಬ್ಜನಾಭನ ದಿವ್ಯ ಕಂಬು ಕಂಠಕೆ ಶರಣು
ಅಬ್ಜಮುಖಿಯಿರುವ ವಕ್ಷಸ್ಥಳಕೆ ಶರಣು
ಕುಬ್ಜೆಯನು ಡೊಂಕ ತಿದ್ದಿದ ಭುಜಗಳಿಗೆ ಶರಣು
ಅಬ್ಜಜಾಸನನ ಪೆತ್ತ ನಾಭಿಗೆ ಶರಣು

ರನ್ನಗಂಟೆಗಳಿರುವ ನಿನ್ನ ಕಟಿಗೆ ಶರಣು
ಪೊನ್ನ ಕದಳೀಪೋಲ್ವ ತೊಡೆಗಳಿಗೆ ಶರಣು
ಪುನ್ನಾಗಕರಗೆತ್ತ ದ್ವಯನಿತಂಬಕೆ ಶರಣು
ಚೆನ್ನಾಗಿ ಕುಣಿವ ಸಮಜಾನುವಿಗೆ ಶರಣು

ಮಂಗಳ ವೈಭೋಗಂಗಳ ಅಂಘ್ರಿದ್ವಯಕೆ ಶರಣು
ತುಂಗ ಕುಚಗಳ ಪಿಡಿದ ಕರಗಳಿಗೆ ಶರಣು
ಪೊಂಗೊಳಲನೂದುವಾ ಅಂಗುಲಿಗಳಿಗೆ ಶರಣು
ರಂಗವಿಠಲನ ಸರ್ವಾಂಗಕೆ ಶರಣು

ಹೀಗೆ ಈ ಕೀರ್ತನೆಯಲ್ಲಿ ಭಗವಂತನ ಶರೀರದ ಅಸಾಧಾರಣ ಸೌಂದರ್ಯವನ್ನು ಕ್ರಮವಾಗಿ ಚಿತ್ರಿಸಿದ್ದಾರೆ. ಇದು ಭಗವಂತನ ನಿಂತ ಭಂಗಿಯ ತುಂಬು ಸೌಂದರ್ಯದ ಚಿತ್ರ. ಸುಂದರ ಉಪಮಾನಗಳನ್ನು ಬಳಸಿ, ಮುಡಿಯಿಂದ ಪ್ರಾರಂಭಿಸಿ ಅಡಿಯವರೆಗೆ ಒಂದೊಂದು ಅಂಗಾಂಗಗಳನ್ನು ಮನೋಹರವಾಗಿ ವರ್ಣಿಸಿದ್ದಾರೆ. ಅವನ ಸರ್ವಾಂಗ ಶ್ರೇಷ್ಠತೆಗೆ ಬೆರಗಾಗಿ, ಪ್ರಸನ್ನ ಭಾವದಿಂದ ಅವನ ಭವ್ಯತೆಗೆ ಶರಣಾಗಿದ್ದಾರೆ. 'ಕಂಗಳಿದ್ಯಾತಕೋ ಕಾವೇರಿ ರಂಗನ

ನೋಡದ'[೬೦] ಎಂದು ಪ್ರಾರಂಭವಾಗುವ ಮತ್ತೊಂದು ಕೀರ್ತನೆಯಲ್ಲಿ ಶ್ರೀರಂಗದಲ್ಲಿರುವ ರಂಗನಾಥನ ದರ್ಶನದಿಂದ ಆದ ದಿವ್ಯ ಅನುಭವವನ್ನು ಕುರಿತು ಚಿತ್ರಿಸಿದ್ದಾರೆ. ಕಾವೇರಿ ರಂಗನ ನೋಡದ ಕಣ್ಣುಗಳಿದ್ದು ಏನು ಪ್ರಯೋಜನ? ಎಂಬ ಉದ್ಗಾರದಿಂದ ಈ ಕೀರ್ತನೆ ಪ್ರಾರಂಭವಾಗುತ್ತದೆ. ಒಂದಲ್ಲ ಒಂದು ದಿನ ಶ್ರೀರಂಗಕ್ಕೆ ಹೋಗಿ ಅಲ್ಲಿನ ಚಂದ್ರಪುಷ್ಕರಣಿಯಲ್ಲಿ ಸ್ನಾನವ ಮಾಡಿ ಆನಂದದಿಂದ ಶ್ರೀರಂಗನಾಥನನ್ನು ನೋಡದಿದ್ದರೆ, ಈ ಬಾಳು ವ್ಯರ್ಥವೆಂಬ ದಾಸರ ಹೇಳಿಕೆ, ಅಲ್ಲಿ ಹರಿಯುವ ಕಾವೇರಿ ನದಿ ಶ್ರೀ ವಿಷ್ಣುವಿನ ಪಾದದಿಂದ ಜನಿಸಿದ ಗಂಗೆಯಸಮಾನ, ಅಲ್ಲಿಯ ನದಿಯ ಸ್ನಾನ ವೈಕುಂಠವನ್ನು ಬಳಸಿರುವ ವಿರಜಾ ನದಿಯ ಸ್ನಾನದಷ್ಟು ಶ್ರೇಷ್ಠವಾದುದು. ರಂಗನಾಥನ ದೇವಾಲಯವೇ ವೈಕುಂಠ. ಆ ಪರಮಾತ್ಮನೇ ಪರವಾಸುದೇವ, ಸರ್ವಾಭರಣಗಳಿಂದ ಅಲಂಕೃತನಾದ ಶ್ರೀರಂಗನಾಥ ಸ್ವಾಮಿಯ ರಥೋತ್ಸವದ ವೈಭವವನ್ನು ಮನೋಜ್ಞವಾಗಿ ವರ್ಣಿಸಿದ್ದಾರೆ. ಹೀಗೆ ಶ್ರೀರಂಗ ಮತ್ತು ರಂಗನಾಥನ ಪವಿತ್ರ ಸಾನಿಧ್ಯದ ಅಪ್ಯಾಯಮಾನ ಅನುಭವವನ್ನು ಪ್ರಶಾಂತಚಿತ್ತದಿಂದ ಚಿತ್ರಿಸಿದ್ದಾರೆ.

ಶ್ರೀವ್ಯಾಸರಾಯರು ಪರಮಾತ್ಮನ ದಿವ್ಯದರ್ಶನದಿಂದ ಆದ ಅನುಭವವನ್ನು ಹೀಗೆ ಚಿತ್ರಿಸಿದ್ದಾರೆ.

'ರಂಗಯ್ಯ ಮನೆಗೆ ಬಂದರೆ ಅಂತರಂಗದಿ ಗುಡಿಕಟ್ಟಿ ಕುಣಿವೆ ನಾ' ಎನ್ನುತ್ತಾ,[೬೧] ಭಗವಂತ ತಮ್ಮ ಮನೆಗೆ ಬಂದ ಭಾಗ್ಯವನ್ನು ಹೇಳುತ್ತಾ, ಭಗವಂತನ ಆಗಮನದಿಂದ ಹೇಗೆ ಅಲ್ಲಿದ್ದ ಜಡವಾದ ಪರಿಸರವು ಚೈತನ್ಯಪೂರ್ಣವಾಯಿತು ಎಂಬುದನ್ನು ಮನೋಜ್ಞವಾಗಿ ಚಿತ್ರಿಸಿದ್ದಾರೆ. ಬಾಡಿದ ಮಾವು ಪಲ್ಲವಿಸಿತು, ಹರಿ ನೋಡಲು ಜಗವು ಭುಲ್ಲವಿಸಿತು, ಕೂಡಿದ ಮನದ ತಾಪಗಳೆಲ್ಲ ಎತ್ತಲೋಡಿತೋ, ಹರಿ ಬಂದ ಭರದಿಂದ ನೋಡಾ, ಬಿಸಿಲು ಬೆಳದಿಂಗಳಾಯಿತು, ತಾಮಸ ಹೋಗಿ ಜ್ಞಾನೋದಯವಾಯಿತು, ಕುಸುವನಾಭನು ತಾ ಬಂದರೆ ಅಲ್ಲಿ ವಿಷ ಹೋಗಿ ಅಮೃತವಾಯಿತು ನೋಡಾ, ಹಾವು ನ್ಯಾವಳವಾಯಿತು. ಅಲ್ಲಿ ದಾವನಳ ತಂಪಾಯಿತು, ಬೇವು ಸಕ್ಕರೆಯಾಯಿತು. ನಮ್ಮ ದೇವಕಿಸುತ ಬಂದರೆ ನೋಡ' ಎಂದು ತಮಗಾದ ದಿವ್ಯಾನುಭವದ ಉನ್ನತದ ನೆಲೆಯನ್ನು ಪ್ರಸನ್ನ ಭಾವದಿಂದ ಚಿತ್ರಿಸಿದ್ದಾರೆ.

ಭಕ್ತವತ್ಸಲನೂ ಕರುಣಾಮಯಿಯೂ ಆದ ಹರಿಯ ಕಾರುಣ್ಯವನ್ನು ಕುರಿತು ಸ್ತುತಿಸಿರುವ

ಮತ್ತೊಂದು ಕೀರ್ತನೆಯಲ್ಲಿ ಸುಪ್ರಸನ್ನತೆಯ ಭಾವವನ್ನು ಕಾಣಬಹುದು.

**ಎಂಥಾದ್ದೊ ಹರಿಯ ಕರುಣ ಪ**

**ಎಂಥಾದ್ದೊ ಹರಿಯ ಮಹಿಮೆ**
**ಎಂಥಾದ್ದೆನ್ನ ಬಾರದು ಗಡ ಅ.ಪ.**
**...................................................**[೬]

ವಾದಿರಾಜರು 'ಎಂಥ ಪಾವನ ಪಾದವೋ ಕೃಷ್ಣಯ್ಯಾ ಇನ್ನೆಂಥಾ ಚೆಲುವ ಪಾದವೊ'[೬೩] ಎಂದು ರಂಗಯ್ಯನ ಪಾದದ ಅಂದ – ಚೆಂದವನ್ನು ಅನನ್ಯ ಭಕ್ತಿಯಿಂದ ವರ್ಣಿಸಿದ್ದಾರೆ. 'ಕಂಡೆ – ಕಂಡೆನು ಕೃಷ್ಣ ನಿನ್ನಯ ದಿವ್ಯಮಂಗಳ ವಿಗ್ರಹ'[೬೪] ಎಂಬ ಕೀರ್ತನೆಯಲ್ಲಿ ಸರ್ವಾಲಂಕೃತನಾದ ಪರಮಾತ್ಮನ ವೇಷ – ಭೂಷಣ, ಆಭರಣ, ಅಲಂಕಾರಗಳನ್ನು ವರ್ಣಿಸುವಲ್ಲಿ ಸಂತೃಪ್ತಿಯನ್ನು ಶಾಂತತೆಯನ್ನು ಕಾಣುತ್ತೇವೆ.

"ಭಗವಂತನನ್ನು ಕೇವಲ ಭಕ್ತನಾಗಿ, ಒಂದು ರೀತಿಯ ನಿರ್ಲಿಪ್ತ ಮನೋಭಾವದಿಂದ ಕೊಂಡಾಡಿರುವುದನ್ನು ಇಲ್ಲಿ ಕಾಣಬಹುದು. ಆ ನಿರ್ಲಿಪ್ತತೆಯ ಹಿಂದೆ ಅಡಗಿರುವ ಆ ಭಕ್ತನ ಶಾಂತ, ಸಂತೃಪ್ತ ಸಮಾಧಾನ ಚಿತ್ತ ಅವನ ಭಕ್ತಿಯ ಸಿದ್ಧಿಯ ಪ್ರತೀಕ. ಪರಮಾತ್ಮನೊಂದಿಗೆ ತನ್ನೆಲ್ಲಾ ಬಾಂಧವ್ಯಗಳನ್ನೂ ಕಳಚಿಕೊಂಡು ಅವನು 'ಅನಿಮಿತ್ತ ಬಂಧು' ಎಂಬ ಜ್ಞಾನದೃಷ್ಟಿಯಿಂದ ಅವನನ್ನು ಹಾಡಿ, ಹೊಗಳಿ ನಲಿದಿರುವುದು ಭಕ್ತನ ಸಾಧನೆಯಮಾರ್ಗದಲ್ಲಿನ ಒಂದು ದೊಡ್ಡ ಹೆಜ್ಜೆ"[೬೫]. ಹೀಗೆ ಶಾಂತಭಾವದ ಕೃತಿಗಳಲ್ಲಿ ಲೌಕಿಕ ಚಿಂತನೆ, ಶಾಸ್ತ್ರ, ಸಿದ್ಧಾಂತ, ಮಂಡನೆ, ತರ್ಕ, ನಿಂದನೆ, ಸ್ತುತಿ, ಯಾವುದನ್ನೂ ಮಾಡದೆ, ಭಗವಂತನ ಸರ್ವಾಂಗ ಶ್ರೇಷ್ಠತೆಗೆ, ಅವನ ಭವ್ಯತೆಗೆ ಅನನ್ಯ ಶರಣಾಗತರಾಗಿರುವುದನ್ನು ಕಾಣುತ್ತೇವೆ.

## ಅಧ್ಯಾಯ ೪ ಅಡಿಟಿಪ್ಪಣೆಗಳು

೧. ಡಾ. ಅನಂತಪದ್ಮನಾಭರಾವ್, 'ಹತ್ತೊಂಬತ್ತನೇ ಶತಮಾನದ ಹರಿದಾಸ ಸಾಹಿತ್ಯ", ಪು–೩೧

೨. ಡಾ. ವರದರಾಜರಾವ್, 'ಹರಿದಾಸ ಸಾಹಿತ್ಯ ಸಾರ', ಪು–೮೦

೩. ಡಾ. ಟಿ.ಎನ್. ನಾಗರತ್ನ, 'ಹರಿದಾಸರ ಭಕ್ತಿ ಸ್ವರೂಪ', ಪು–೫೮

೪. 'ಶ್ರೀಪಾದರಾಜರ ಮತ್ತು ಶ್ರೀವ್ಯಾಸರಾಯರ ಕೀರ್ತನೆಗಳು', ಸಮಗ್ರ ದಾಸಸಾಹಿತ್ಯ, ಸಂಪುಟ ೧, ಪು–೮೩

೫. ಅದೇ, ಪು–೨೧೨

೬. ಅದೇ, ಪು–೨೧೬

೭. ಅದೇ, ಪು–೨೩೫

೮. 'ಶ್ರೀವಿದ್ಯಾ ಪ್ರಸನ್ನ ತೀರ್ಥರು ಹಾಗೂ ಇತರ ಯತಿಗಳ ಕೀರ್ತನೆಗಳು', ಸಮಗ್ರ ದಾಸಸಾಹಿತ್ಯ ಸಂಪುಟ ೨೮, ಪು–೧೧೨

೯. ಅದೇ, ಪು–೨೧೩

೧೦. 'ಶ್ರೀ ವರಾಹ ತಿಮ್ಮಪ್ಪ ಹಾಗೂ ಇತರ ದಕ್ಷಿಣ ಕನ್ನಡದವರ ಕೀರ್ತನೆಗಳು', ಸಮಗ್ರ ದಾಸಸಾಹಿತ್ಯ ಸಂಪುಟ , ಪು–೭

೧೧. 'ಶ್ರೀಪಾದರಾಜರು ಮತ್ತು ಶ್ರೀವ್ಯಾಸರಾಯರ ಕೀರ್ತನೆಗಳು', ಸಮಗ್ರ ದಾಸಸಾಹಿತ್ಯ ಸಂಪುಟ ೧, ಪು–೭೧

೧೨. ಅದೇ, ಪು–೧೪೧

೧೩. ಡಾ. ಅನಂತಪದ್ಮನಾಭರಾವ್, '೧೯ನೇ ಶತಮಾನದ ಹರಿದಾಸ ಸಾಹಿತ್ಯ', ಪು–೪೬

೧೪. ಡಾ. ಟಿ.ಎನ್. ನಾಗರತ್ನ, 'ಹರಿದಾಸ ಭಕ್ತಿ ಸ್ವರೂಪ', ಪು–೭೬

೧೫. ಡಾ. ವರದರಾಜರಾವ್, 'ಹರಿದಾಸ ಸಾಹಿತ್ಯಸಾರ', ಪು–೯೫

೧೬. 'ಶ್ರೀಪಾದರಾಜರು ಮತ್ತು ವ್ಯಾಸರಾಯರ ಕೀರ್ತನೆಗಳು', ಸಮಗ್ರ ದಾಸಸಾಹಿತ್ಯ ಸಂಪುಟ ೧, ಪು–೧೬

೧೭. ಡಾ. ಟಿ.ಎನ್. ನಾಗರತ್ನ, 'ಶ್ರೀವಾದಿರಾಜರ ಕೀರ್ತನೆಗಳು', ಪು–೩೫೪

೧೮. 'ಶ್ರೀವಿದ್ಯಾಪ್ರಸನ್ನತೀರ್ಥರು ಹಾಗೂ ಇತರೆ ಯತಿಗಳ ಕೀರ್ತನೆಗಳು', ಸಮಗ್ರ ದಾಸಸಾಹಿತ್ಯ ಸಂಪುಟ ೨೮, ಪು-೩೧

೧೯. ಅದೇ, ಪು-೪೨೨

೨೦. ಅದೇ, ಪು-೧೧೯

೨೧. ಅದೇ, ಪು-೧೪೦

೨೨. 'ಶ್ರೀವರಾಹ ತಿಮ್ಮಪ್ಪ ಹಾಗೂ ದಕ್ಷಿಣ ಕನ್ನಡದವರ ಕೀರ್ತನೆಗಳು',ಸಮಗ್ರ ದಾಸಸಾಹಿತ್ಯ ಸಂಪುಟ, ಪು-೮

೨೩. ಡಾ. ಅನಂತಪದ್ಮನಾಭರಾವ್, 'ಹತ್ತೊಂಬತ್ತನೇ ಶತಮಾನದ ಹರಿದಾಸ ಸಾಹಿತ್ಯ', ಪು-೪೯

೨೪. 'ಶ್ರೀಪಾದರಾಜರ ಮತ್ತು ವ್ಯಾಸರಾಯರ ಕೀರ್ತನೆಗಳು', ಸಮಗ್ರ ದಾಸಸಾಹಿತ್ಯ ಸಂಪುಟ ೧, ಪು-೩೬

೨೫. ಅದೇ, ಪು-೪೫

೨೬. ಅದೇ, ಪು-೫೫

೨೭. ಅದೇ, ಪು-೨೭

೨೮. ಅದೇ, ಪು-೮೯

೨೯. ಅದೇ, ಪು-೧೫೭

೩೦. ಡಾ. ವರದರಾಜರಾವ್, 'ಹರಿದಾಸ ಸಾಹಿತ್ಯ ಸಾರ', ಪು-೧೩೪

೩೧. 'ಶ್ರೀಪಾದರಾಜರು ಮತ್ತು ವ್ಯಾಸರಾಯರ ಕೀರ್ತನೆಗಳು',ಸಮಗ್ರ ದಾಸಸಾಹಿತ್ಯ ಸಂಪುಟ ೧, ಪು-೨೨೧

೩೨. ಡಾ. ಟಿ.ಎನ್. ನಾಗರತ್ನ, 'ಶ್ರೀವಾದಿರಾಜರ ಕೀರ್ತನೆಗಳು', ಪು-೯೯

೩೩. ಡಾ. ವರದರಾಜರಾವ್, 'ಹರಿದಾಸ ಸಾಹಿತ್ಯ ಸಾರ', ಪು-೧೪೧

೩೪. 'ಶ್ರೀವಿದ್ಯಾಪ್ರಸನ್ನ ತೀರ್ಥರು ಹಾಗೂ ಇತರ ಯತಿಗಳ ಕೀರ್ತನೆಗಳು', ಸಮಗ್ರ ದಾಸಸಾಹಿತ್ಯ ಸಂಪುಟ ೨೮, ಪು-೨೨

೩೫. ಅದೇ, ಪು-೨೦೩

೩೬. ಅದೇ, ಪು-೨೦೫

೩೭. 'ಶ್ರೀವರಾಹ ತಿಮ್ಮಪ್ಪ ಹಾಗೂ ದಕ್ಷಿಣ ಕನ್ನಡದವರ ಕೀರ್ತನೆಗಳು', ಸಮಗ್ರ ದಾಸಸಾಹಿತ್ಯ ಸಂಪುಟ, ಪು–೪

೩೮. ಡಾ. ವರದರಾಜರಾವ್, 'ಹರಿದಾಸ ಸಾಹಿತ್ಯ ಸಾರ', ಪು–೧೦೦

೩೯. 'ಶ್ರೀಪಾದರಾಜರು ಮತ್ತು ಶ್ರೀವ್ಯಾಸರಾಯರ ಕೀರ್ತನೆಗಳು',ಸಮಗ್ರ ದಾಸಸಾಹಿತ್ಯ ಸಂಪುಟ ೧, ಪು–೨೯

೪೦. ಅದೇ, ಪು–೩೦

೪೧. ಅದೇ, ಪು–೪೨

೪೨. ಅದೇ, ಪು–೩

೪೩. ಅದೇ, ಪು–೪೩

೪೪. ಅದೇ, ಪು–೩೭

೪೫. ಅದೇ, ಪು–೧೨೧

೪೬. ಅದೇ, ಪು–೧೮೧

೪೭. ಅದೇ, ಪು–೧೭೨

೪೮. ಅದೇ, ಪು–೧೭೬

೪೯. ಡಾ. ಟಿ.ಎನ್. ನಾಗರತ್ನ, 'ಶ್ರೀವಾದಿರಾಜರ ಕೀರ್ತನೆಗಳು', ಪು–೪೬

೫೦. ಅದೇ, ಪು–೪೭

೫೧. ಅದೇ, ಪು–೩೯

೫೨. ಅದೇ, ಪು–೫೩

೫೩. ಅದೇ, ಪು–೪೦

೫೪. ಅದೇ, ಪು–೪೩

೫೫. ಅದೇ, ಪು–೯೭

೫೬. 'ಶ್ರೀವಿದ್ಯಾಪ್ರಸನ್ನ ತೀರ್ಥರು ಹಾಗೂ ಇತರ ಯತಿಗಳ ಕೀರ್ತನೆಗಳು', ಸಮಗ್ರ ದಾಸಸಾಹಿತ್ಯ ಸಂಪುಟ ೨೮, ಪು–೧೪೫

೫೭. ಅದೇ, ಪು–೧೯೯

೫೮. ಅದೇ, ಪು–೨೦೦

೫೯. 'ಹರಿಭಕ್ತಿ ಸುಧೆ', ಪು–೯೧

೬೦. 'ಶ್ರೀಪಾದರಾಜರು ಮತ್ತು ವ್ಯಾಸರಾಯರ ಕೀರ್ತನೆಗಳು', ಸಮಗ್ರ ದಾಸಸಾಹಿತ್ಯ ಸಂಪುಟ ೧, ಪುಟ –೩

೬೧. ಅದೇ, ಪು–೧೫೦

೬೨. ಅದೇ, ಪು–೧೩೨

೬೩. ಡಾ. ಟಿ.ಎನ್. ನಾಗರತ್ನ, 'ಶ್ರೀವಾದಿರಾಜರ ಕೀರ್ತನೆಗಳು', ಪು–೩೯

೬೪. ಅದೇ, ಪು–೪೪

೬೫. ಡಾ. ಟಿ.ಎನ್. ನಾಗರತ್ನ, 'ಹರಿದಾಸರ ಭಕ್ತಿ ಸ್ವರೂಪ', ಪು–೧೨೪

ಅಧ್ಯಾಯ – ೫

# ತತ್ವ ಪ್ರತಿಪಾದನೆ

"ಆನಂದ ತೀರ್ಥರ ದ್ವೈತ ಸಿದ್ಧಾಂತ ಮತ್ತು ಅದಕ್ಕೆ ಹಿನ್ನೆಲೆಯಾದ ಅವರ ಗ್ರಂಥಗಳು ಅರ್ಥವಾಗುವುದು ಕಷ್ಟವೆನಿಸಿದಾಗ ಜಯತೀರ್ಥರು ಅವುಗಳಿಗೆ ಟೀಕೆಯನ್ನು ಬರೆದು ಟೀಕಾಚಾರ್ಯರೆಂದೇ ಪ್ರಸಿದ್ಧರಾದರು. ಈ ಟೀಕಾ ಗ್ರಂಥಗಳು ಕಠಿಣವೆನಿಸಿದಾಗ ವ್ಯಾಸರಾಜ, ವಿಜಯೀಂದ್ರ, ವಾದಿರಾಜ, ರಘೋತ್ತಮ, ರಾಘವೇಂದ್ರತೀರ್ಥ ಮೊದಲಾದವರು ಟಿಪ್ಪಣಿಗಳನ್ನು ಬರೆದು ಟಿಪ್ಪಣಿಕಾರರೆನಿಸಿಕೊಂಡರು".೧ ಆದರೆ ಆನಂದತೀರ್ಥರು ಮತ್ತು ಅವರ ಅನುಯಾಯಿಗಳು ಪ್ರತಿಪಾದಿಸಿದ ದ್ವೈತ ಸಿದ್ಧಾಂತ, ಅದರ ಟೀಕೆ ಟಿಪ್ಪಣಿಗಳು ಸಂಸ್ಕೃತದಲ್ಲೇ ಇದ್ದುದರಿಂದ ಸಾಮಾನ್ಯರಿಗೆ ಅರ್ಥಮಾಡಿಕೊಳ್ಳುವುದು ಕಷ್ಟವೆನಿಸಿತ್ತು. ಸಂಸ್ಕೃತವನ್ನೇ ನೆಚ್ಚಿ ಕುಳಿತರೆ, ವೈಷ್ಣವ ಸಮಾಜ ದ್ವೈತ ಸಿದ್ಧಾಂತದಿಂದ ದೂರ ಉಳಿದುಬಿಡುತ್ತದೆ. ಸಂಸ್ಕೃತ ಬಾರದ ಸಾಮಾನ್ಯರಿಗೆ ತತ್ವಗಳ ಅರಿವು ಮೂಡಿಸಬೇಕಾದರೆ ಅದನ್ನು ಅವರ ಮಾತೃಭಾಷೆಯಲ್ಲೇ ಹೇಳಬೇಕೆಂಬ ಅಗತ್ಯವನ್ನು ಮನಗಂಡ ಶ್ರೀಪಾದರಾಜರು ಕನ್ನಡದಲ್ಲಿ ಕೀರ್ತನೆಯನ್ನು ರಚಿಸಿ ಹರಿದಾಸ ಸಾಹಿತ್ಯಕ್ಕೆ ಭದ್ರವಾದ ಬುನಾದಿಯನ್ನು ಹಾಕಿದರು.

ಹರಿದಾಸ ಸಾಹಿತ್ಯವನ್ನು ಬೆಳೆಸುವುದರಲ್ಲಿ ಮಾಧ್ವ ಯತಿಗಳ ಪಾತ್ರ ಪ್ರಮುಖವಾದುದು. ಅಧ್ಯಯನ, ಅಧ್ಯಾಪನ, ಪ್ರವಾಸ, ತತ್ವಪ್ರಸಾರ ಯತಿಗಳ ಜೀವನ ಕ್ರಮವಾಗಿತ್ತು. ಮಾಧ್ವ ತತ್ವ ಪ್ರಸಾರಕ್ಕೆಂದೇ ಕನ್ನಡದಲ್ಲಿ ಶ್ರೀಪಾದರಾಜರಿಂದ ಜನ್ಮತಾಳಿದ ಹರಿದಾಸ ಸಾಹಿತ್ಯ ವ್ಯಾಸರಾಯರಿಂದ ಸ್ಪಷ್ಟರೂಪ ಪಡೆಯಿತು. ಸಂಸ್ಕೃತದಲ್ಲಿ ಪ್ರೌಢಗ್ರಂಥಗಳನ್ನು ಕನ್ನಡದಲ್ಲಿ ಕಿರ್ತನೆ, ಉಗಾಭೋಗ, ಸುಳಾದಿಗಳನ್ನು ರಚಿಸಿದ ವ್ಯಾಸರಾಯರು ವ್ಯಾಸಕೂಟ ಮತ್ತು ದಾಸಕೂಟದ ಮೇಲ್ವಿಚಾರಕರಾದರು. 'ಶ್ರೀಮಧ್ವಮತೇ' ಎಂದು ಪ್ರಾರಂಭವಾಗುವ ಸಂಸ್ಕೃತದ ಒಂದೇ ಒಂದು ಶ್ಲೋಕದಲ್ಲಿ ಮಧ್ವಾಚಾರ್ಯರ ಮುಖ್ಯ ಸಿದ್ಧಾಂತಗಳನ್ನು ಪ್ರತಿಪಾದಿಸಿದ್ದಾರೆ.

"೧. ಹರಿಯೇ ಸರ್ವೋತ್ತಮ

೨. ಜಗತ್ತು ಸತ್ಯ

೩. ಜೀವಗಣವು ಪರಮಾತ್ಮನಿಂದ ಭಿನ್ನವಾದದ್ದು

೪. ಜೀವರೆಲ್ಲರೂ ಹರಿಯ ದಾಸರು

೫. ಜೀವರಲ್ಲಿ ಉಚ್ಛ-ನೀಚ ಎಂಬ ತಾರತಮ್ಯ ಉಂಟು

೬. ಸ್ವರೂಪ ಸುಖಾನುಭವವೇ ಮುಕ್ತಿ

೭. ನಿರ್ಮಲವಾದ ಭಕ್ತಿಯೇ ಮೋಕ್ಷಕ್ಕೆ ಸಾಧನ

೮. ಪ್ರತ್ಯಕ್ಷ, ಅನುಮಾನ, ಆಗಮಗಳೆಂದು ಪ್ರಮಾಣಗಳು ಮೂರು ವಿಧ

೯. ಹರಿಯನ್ನು ವೇದಗಳಿಂದ ಮಾತ್ರ ತಿಳಿಯಲು ಸಾಧ್ಯ"[೨]

ಮಧ್ವಮತದ ಈ ತತ್ವಗಳ ಆಧಾರದ ಮೇಲೆಯೇ ಎಲ್ಲಾ ಹರಿದಾಸರ ಕೃತಿಗಳು ನಿರ್ಮಿತವಾಗಿದೆ.

ವಾದಿರಾಜ ಯತಿಗಳು ಶ್ರೀಪಾದರಾಯರ, ವ್ಯಾಸರಾಯರ ಹಾದಿಯಲ್ಲೇ ನಡೆದು ಮಧ್ವ ಸಿದ್ಧಾಂತದ ತತ್ವಗಳನ್ನು ತ್ರಿಪದಿ ಸಾಂಗತ್ಯಗಳ ಮೂಲಕ ಪ್ರತಿಪಾದಿಸಿದರು. ಅಲ್ಲದೇ 'ಶ್ರೀ ವೈಕುಂಠ ವರ್ಣನೆ', 'ಗುಂಡಕ್ರಿಯೆ', 'ಲಕ್ಷ್ಮಿ ಶೋಭಾನೆ' ಮೊದಲಾದ ದೀರ್ಘಕೃತಿಗಳನ್ನು ರಚಿಸಿದರು. ಹರಿದಾಸ ಸಾಹಿತ್ಯದ ಮೂಲಕ ಶಾಸ್ತ್ರ ನಿರೂಪಣೆಯನ್ನು ಮಾಡಬಹುದೆಂದು ತೋರಿಸಿಕೊಟ್ಟು ಮುಂದಿನ ಹರಿದಾಸರಿಗೆ ಪ್ರೇರಕರಾದರು. ಮುಂದೆ ವಿಜಯದಾಸರ ಸುಳಾದಿಗಳು ಅವರ ಪ್ರಶಿಷ್ಯರಾದ ಜಗನ್ನಾಥದಾಸರ 'ಹರಿಕಥಾಮೃತಸಾರ'ದಲ್ಲಿ ಸಮಗ್ರ ಮಧ್ವಮತದ ಸಾರವೇ ಕನ್ನಡಿಗರಿಗೆ ಕೈಗೆಟಕುವಂತಾಯಿತು.

### ೫.೧ ಹರಿಸರ್ವೋತ್ತಮತ್ವ

ಮಧ್ವ ಸಿದ್ಧಾಂತದ ಪ್ರಕಾರ ಎಲ್ಲ ದೇವತೆಗಳಲ್ಲಿ ಹರಿಯೇ ಸರ್ವೋತ್ತಮನು ಅವನೊಬ್ಬನೇ ಸರ್ವತಂತ್ರ ಸ್ವತಂತ್ರ. ಉಳಿದೆಲ್ಲ ಜೀವರುಗಳು ಅಸ್ವತಂತ್ರರು. ಅವನ ಆಜ್ಞೆಯಂತೆಯೇ ಎಲ್ಲಾ ಕಾರ್ಯಗಳು ನಡೆಯುವುದು. ಅವನೊಬ್ಬನೇ ದೋಷರಹಿತನಾದ ಜ್ಞಾನಾನಂದ ಗುಣಪೂರ್ಣನಾದವನು. ಹರಿದಾಸ ಸಾಹಿತ್ಯದ ಆದ್ಯ ಪ್ರವರ್ತಕರಾದ ಶ್ರೀಪಾದರಾಜರು ಹರಿಸರ್ವೋತ್ತಮತ್ವ, ಪಂಚಭೇದ ತಾರತಮ್ಯ, ಜಗತ್‌ಸತ್ಯತ್ವ, ಆಚಾರ್ಯ ಸ್ತುತಿ ಮೊದಲಾದ ದ್ವೈತ

ಸಿದ್ಧಾಂತದ ಪ್ರಮುಖ ತತ್ವಗಳನ್ನು ತಮ್ಮ ಕೃತಿಗಳ ಮೂಲಕ ಪರಿಚಯ ಮಾಡಿಕೊಟ್ಟಿದ್ದಾರೆ. ತತ್ವಪ್ರತಿಪಾದನೆಗಾಗಿ ಪುರಾಣ ಪಾತ್ರಗಳನ್ನು ಧಾರಾಳವಾಗಿ ಬಳಸಿಕೊಂಡು ಜನರಿಗೆ ಕಣ್ಣಿಗೆ ಕಟ್ಟುವಂತೆ ಕೀರ್ತನೆಗಳನ್ನು ರಚಿಸಿದ್ದಾರೆ.

**ಬಿಡಿ ಬಿಡಿ ಸಂದೇಹವನು ಪೊಡವಿ ಮನುಜರೆಲ್ಲ**
**ಒಡೆಯನೊಬ್ಬನೆ ಜಗಕೆ ರಂಗವಿಠಲ**
**..................................................................................**

ಎಂದು ಮೊದಲಾಗುವ ಈ ಕೀರ್ತನೆಯಲ್ಲಿ ವಿಷ್ಣುವಿನ ಪಾರಮ್ಯವನ್ನು ಹೇಳುತ್ತಾ ಹರಿಸರ್ವೋತ್ತಮತ್ವವನ್ನು ಎತ್ತಿ ಹಿಡಿದಿದ್ದಾರೆ. ಭಾಗವತದಲ್ಲಿ ಬರುವ ಭೃಗುಮಹರ್ಷಿಯ ಕತೆಯನ್ನು ಅಚ್ಚುಕಟ್ಟಾಗಿ ನಿರೂಪಿಸಿದ್ದಾರೆ. ಒಮ್ಮೆ ದೇವತೆಗಳಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರರಲ್ಲಿ ಯಾರು ಶ್ರೇಷ್ಠವೆಂಬ ಜಿಜ್ಞಾಸೆ ಬಂದಿತಂತೆ. ಆಗ ಅದನ್ನು ನಿರ್ಧರಿಸಲು ಭೃಗುಮಹರ್ಷಿಗಳೇ ಸೂಕ್ತರಾದವರೆಂದು ದೇವತೆಗಳೆಲ್ಲರೂ ಅವರಿಗೆ ಒಪ್ಪಿಸುತ್ತಾರೆ. ಭೃಗು ಮಹರ್ಷಿಗಳು ಮೊದಲು ಬ್ರಹ್ಮನ ಬಳಿಗೆ ಹೋಗುತ್ತಾರೆ. ಬ್ರಹ್ಮನು ಅವರಿಗೆ ವಂದಿಸದೆ ಗರ್ವದಿಂದ ಅವರ ಮೇಲೆ ಕುಪಿತನಾಗುತ್ತಾನೆ. ಆಗ ಅವರು ಅಲ್ಲಿಂದ ನೇರವಾಗಿ ಕೈಲಾಸಕ್ಕೆ ಬರುತ್ತಾರೆ. ಅಲ್ಲಿ ಈಶ್ವರನೂ ಸಹ ಬ್ರಹ್ಮನಂತೆ ಋಷಿಶ್ರೇಷ್ಠರನ್ನು ತಾತ್ಸಾರ ಭಾವದಿಂದ ಕಾಣುತ್ತಾನೆ. ಆಗ ಭೃಗು ಮಹರ್ಷಿಗಳು ಈ ಇಬ್ಬರೂ ಶ್ರೇಷ್ಠರಲ್ಲವೆಂದು ನಿರ್ಧರಿಸಿ ವೈಕುಂಠಕ್ಕೆ ಬರುತ್ತಾರೆ. ಅಲ್ಲಿ ಲಕ್ಷ್ಮಿಯ ಜೊತೆಗಿದ್ದ ವಿಷ್ಣುವಿನ ಎದೆಗೆ ಒದ್ದರೂ, ವಿಷ್ಣುವು ಸ್ವಲ್ಪವೂ ತಾಳ್ಮೆಕಳೆದುಕೊಳ್ಳದೆ, ಸಹನೆಯಿಂದ ಕಾಲಿನಲ್ಲಿ ಒದ್ದ ಮುನಿಯ ಪಾದವನ್ನು ಭಕ್ತಿಯಿಂದ ಪೂಜಿಸಿದನಂತೆ. ವಿಷ್ಣುವಿನ ಸಹನೆ ವಿಧೇಯತೆಯನ್ನು ಮೆಚ್ಚಿ ಭೃಗು ಮಹರ್ಷಿಗಳು ಅವನೆ ತ್ರಿಮೂರ್ತಿಗಳಲ್ಲಿ ಶ್ರೇಷ್ಠನೆಂದು ನಿರ್ಧರಿಸಿರುತ್ತಾರೆ. ಭೃಗುಮಹರ್ಷಿಗಳ ಈ ಸಂದರ್ಭ ಮಾತ್ರವಲ್ಲದೆ, ವಿಷ್ಣುವಿನ ಹಿರಿಮೆಯನ್ನು ಸಾರುವ ಅನೇಕ ಪ್ರಸಂಗಗಳನ್ನು ಉದಾಹರಿಸುವರು.

**ಕಡಲ ಧನುಜರು ಸುರರು ಕಡೆಯೆ ಕಡಲೊಳಗಿರ್ದು**
**ಮಡದಿ ಮಹಾಲಕ್ಷುಮಿ ಅವತರಿಸಿ ಬರಲು**
**ಮೃಡ ಕಮಲಜ ಸುರಮುಖ್ಯರನು ಜರಿದು ಸಿಂಧುವಿನ**
**ದಡದಲ್ಲಿ ಹರಿಯ ವರಿಸಿದಳು ವರನೆಂದು**

**ಕರಿ ಪತಿಯ ಸರಸಿಯೊಳು ಮೊಸಳೆ ಪಿಡಿಯಲು ಭರದಿ**

ಪರಮ ಪುರುಷ ಜಗತ್ಪತಿಯೆನಲು
ಗರುಡವಾಹನನಾಗಿ ಹರಿ ಬಂದವನ ಕಾಯ್ದ
ಪರದೈವವಾರು ಜಗದೊಗಳಗೆ ಪೇಳಾ

ರಾಜಸೂಯವ ಧರ್ಮಸುತ ಮಾಡೆ ಅವನಗ್ರ
ಪೂಜೆಗರುಹರು ಸುರರೊಳಾರೆಂದೆನಲು
ಭಾಜನನು ಸದ್ಗುಣನು ಕೃಷ್ಣನೊಬ್ಬನೆಯೆಂದು
ರಾಜಸಭೆಯಲಿ ದೇವವ್ರತ ನುಡಿದನು

ಗಂಗೆ ಈತನ ಪಾದಸಂಗದಿ ಪಾವನನೆನಲು
ಗಂಗಾಧರನು ಪರಮ ದಾಸನೆನಲು
ಮಂಗಳಾತ್ಮಕ ವಿಶ್ವಜನ್ಮಾದಿ ಕಾರಣನು
ರಂಗವಿಠಲರೇಯನ ನೆರೆನಂಬಿರೋ.

ಸಮುದ್ರ ಮಥನದ ಕಾಲದಲ್ಲಿ ಜನಿಸಿದ ಲಕ್ಷ್ಮಿ, ಬ್ರಹ್ಮ, ಮಹೇಶ್ವರರನ್ನು ಬಿಟ್ಟು ವಿಷ್ಣುವನ್ನೇ ವರಿಸಿದ್ದು, ವಿಷ್ಣುವು ಗಜೇಂದ್ರನನ್ನು ಮೊಸಳೆಯ ಬಾಯಿಯಿಂದ ಸಂರಕ್ಷಿಸಿದ್ದು, ರಾಜಸೂಯಯಾಗದ ಸಂದರ್ಭದಲ್ಲಿ ಭೀಷ್ಮರು ಶ್ರೀಕೃಷ್ಣನೊಬ್ಬನೇ ಅಗ್ರಪೂಜೆಗೆ ಅರ್ಹನೆಂದು ನುಡಿದದ್ದು, ವಿಷ್ಣುವಿನ ಪಾದ ಸ್ಪರ್ಶದಿಂದ ಗಂಗೆ ಪವಿತ್ರಳಾದುದು, ಶಿವನು ಭಸ್ಮಾಸುರನಿಗೆ ವರವನ್ನು ಕೊಟ್ಟು, ಅದು ತನಗೆ ತಿರುಗುಬಾಣವಾದ ಸಂದರ್ಭದಲ್ಲಿ ವಿಷ್ಣುವು ಮೋಹಿನಿ ವೇಷಧರಿಸಿ ಭಸ್ಮಾಸುರನನ್ನು ಆಕರ್ಷಿಸಿ, ಜಾಣತನದಿಂದ ದೈತ್ಯ ಪಡೆದಿದ್ದ ವರಕ್ಕೆ ಅವನೇ ಸಾವನಪ್ಪುವಂತೆ ಮಾಡಿ ಶಿವನನ್ನು ಶ್ರೀಹರಿ ರಕ್ಷಿಸಿದ ಕತೆ, ಹೀಗೆ ಮಧ್ವಮತದ ತತ್ವಗಳನ್ನು ಪ್ರಸಾರ ಮಾಡಲು ಪುರಾಣದ ಪ್ರಸಂಗವನ್ನು ಸಮರ್ಥವಾಗಿ ಬಳಸಿಕೊಂಡಿದ್ದಾರೆ. 'ಹರಿಹರರು ಸರಿಯೆಂಬ ಮರುಳು ಜನರು ಹರಿಹರರ ಚರಿತೆಯನು ತಿಳಿದು ಭಜಿಸುವುದು', ಎಂದು ಮೊದಲಾಗುವ ಕೀರ್ತನೆಯಲ್ಲಿ ಹರಿಹರರು ಮುಖಾ-ಮುಖಿಯಾಗಿ ಹೋರಾಡಿರುವ ಕಥೆಯನ್ನು ಚಿತ್ರಿಸಿದ್ದಾರೆ. ಅಲ್ಲಿಯೂ ಶ್ರೀಹರಿಗೆ ಜಯವಾಗುತ್ತದೆ. ಪ್ರತಿಯೊಂದು ಸಂದರ್ಭದಲ್ಲಿ ಹರಿಗೆ ಜಯವಾಗುವುದನ್ನು ಕಾಣುತ್ತೇವೆ. ಹೀಗೆ ಹಲವು ಕೀರ್ತನೆಗಳಲ್ಲಿ ಅವಕಾಶ ಸಿಕ್ಕಿದಲ್ಲೆಲ್ಲಾ ಹರಿಸರ್ವೋತ್ತಮತ್ವವನ್ನು ಸಾರಿದ್ದಾರೆ.

'ಈಸು ಮುನಿಗಳಿದ್ದೇನು ಮಾಡಿದರು ವ್ಯಾಸಮುನಿ ಮಧ್ವಮತವನುದ್ಧರಿಸಿದ' ಎಂದು ಶ್ರೀಪಾದರಾಜರನ್ನು ವ್ಯಾಸರಾಯರು ಮೆಚ್ಚಿ ಗೌರವದಿಂದ ಹೊಗಳಿದಂತೆ ವ್ಯಾಸರಾಯರು

ಮಧ್ವಮತಗಳಿಗೆ ಹೆಚ್ಚಿನ ಪ್ರಾಶಸ್ತ್ಯ ಕೊಟ್ಟಿರುವುದು ನಿಜವಾದರೂ "ಆ ಸಾಹಿತ್ಯ ಒಳಗೊಂಡಿರುವ ಜೀವನಾನುಭವಗಳಿಂದ ಉಪದೇಶಿಸಿರುವ ಸಾರ್ವತ್ರಿಕ ಮೌಲ್ಯಗಳಿಂದ ಕನ್ನಡ ಜನತೆಗೆ ಒಂದು 'ಅಮೂಲ್ಯ ನಿಧಿ'ಯಾಗಿ ಪರಿಣಮಿಸಿದೆ. ಲಕ್ಷ್ಯಗೀತೆಗಳ ಮೂಲಕ ಕರ್ನಾಟಕ ಶಾಸ್ತ್ರೀಯ ಸಂಗೀತಕ್ಕೂ, ಮಧ್ವದರ್ಶನ ಪ್ರತಿಪಾದನೆಯ ಮೂಲಕ ಭಾರತೀಯ ತತ್ವಶಾಸ್ತ್ರಕ್ಕೂ ಅವರ ಕೊಡುಗೆ ಅಪಾರ"[೫]. ನ್ಯಾಯಾಮೃತ, ಚಂದ್ರಿಕಾ, ತರ್ಕತಾಂಡವ ಮೊದಲಾದ ಎಂಟು ಪ್ರೌಢ ಸಂಸ್ಕೃತ ಗ್ರಂಥಗಳನ್ನು ರಚಿಸಿರುವ ಇವರು ಕನ್ನಡದಲ್ಲೂ ಮಧ್ವಮತ ತತ್ವಗಳನ್ನು ಕುರಿತು ಅನೇಕ ಕೃತಿಗಳನ್ನು ರಚಿಸಿದ್ದಾರೆ. 'ಎನ್ನ ಬಿಂಬ ಮೂರುತಿಯ ಪೂಜಿಪೆ ನಾನು ಮನಮುಟ್ಟಿ ಅನುದಿನ ಮರೆಯದೆ'[೬] ಎಂದು ಮೊದಲಾಗುವ ಕೀರ್ತನೆಯಲ್ಲಿ ಶ್ರೀಹರಿ ಬಿಂಬ, ಜೀವ ಪ್ರತಿಬಿಂಬ ಎಂಬ ತತ್ವವನ್ನು ಕಾಣಬಹುದು.

**ಉಕ್ಕುವ ತುಪ್ಪಕೆ ಕೈಯಿಕ್ಕುವೆ ನಾನು ಪ**

**ಚಕ್ರಧರ ಪರಮಾತ್ಮನೊಬ್ಬನಲ್ಲದಿಲ್ಲವೆಂದು ಅ.ಪ.**

**..........................................................................**

**ತಪ್ಪಾದ ವಿಚಾರದಿಂದ ತತ್ತರವ ಪಡಲೇಕೆ**
**ತಪ್ಪು ಶಾಸ್ತ್ರವೋದಿ ದೇಹ ದಂಡಿಸಲೇಕೆ**
**ಕಲ್ಪ ಕಲ್ಪಾಂತರದಲ್ಲಿ ವಟಪತ್ರಶಯನನಾಗಿ**
**ಮುಪ್ಪು ಮೊದಲಿಲ್ಲದ ಮುಕುಂದನಲ್ಲದಿಲ್ಲವೆಂದು**

**ಶಕ್ತಿ ಶೂನ್ಯನಿವನೆಂದು ಸಂಶಯವೆ ಪಡಲೇಕೆ**
**ಕೃತ್ಯದಿಂದ ನೋಡೆ ಶ್ರೀಕೃಷ್ಣನೊಬ್ಬನೆ**
**ಹತ್ತಾರು ಸಾಸಿರ ನೂರು ಗೋಪಸ್ತ್ರೀಯರನ್ನು ಆಳಿ**
**ನಿತ್ಯ ಬ್ರಹ್ಮಚಾರಿಯೆನಿಪ ನಿಷ್ಕಳಂಕನೊಬ್ಬನೆಂದು[೭]**

ಯಾವುದೆ ಒಂದು ನಾವು ಮಾಡಿದ ಕೆಲಸದ ಸತ್ಯಾಸತ್ಯತೆಯನ್ನು ಪರೀಕ್ಷಿಸಲು ಹಿಂದೆ 'ದಿವ್ಯ'ದ ಪರಿಪಾಠವಿದ್ದಿತು. ಅಂತಹ ದಿವ್ಯದ ಪ್ರಸ್ತಾಪವನ್ನು ಈ ಕೀರ್ತನೆಯಲ್ಲಿ ಮಾಡಿದ್ದಾರೆ. ಅನ್ಯಮತವನ್ನು ನಿರಾಕರಿಸುತ್ತಾ, ದ್ವೈತ ಸಿದ್ಧಾಂತವನ್ನು, ಹರಿಸರ್ವೋತ್ತಮತ್ವವನ್ನು ಒತ್ತಿ ಹೇಳಿದ್ದಾರೆ. ಚಕ್ರಧರನಾದ ವಿಷ್ಣುವಿನಂತಹ ಪರಮಾತ್ಮ ಮತ್ತೊಬ್ಬನಿಲ್ಲವೆಂದು ನಿರೂಪಿಸಲು ಅವರು ಎಂತಹ ಸವಾಲಿಗಾದರೂ ತಯಾರಿದ್ದಾರೆ. ಉಕ್ಕುವ ತುಪ್ಪದಲ್ಲಿ ಕೈಯಿಡಲು ಕೂಡ

ಅವರು ಹಿಂಜರಿಯುವುದಿಲ್ಲ. ದ್ವೈತ ಮತದಲ್ಲಿ ಅವರಿಗಿರುವ ಶ್ರದ್ಧೆ ಅಚಲವಾದುದು.

**ನಂಬಿ ಕೆಟ್ಟವರಿಲ್ಲವೊ, ರಂಗಯ್ಯನ**
**ನಂಬದೆ ಕೆಟ್ಟರೆ ಕೆಡಲಿ ಪ**

**ಅಂಬುಜನಾಭನ ಅಖಿಳ ಲೋಕೇಶನ**
**ಕಂಬು ಕಂಧರ ಕೃಷ್ಣ ಕರುಣಾ ಸಾಗರನ**

**ತರಳ ಪ್ರಹ್ಲಾದ ಸಾಕ್ಷಿ ಸರಸಿಯೊಳಿದ್ದ**
**ಕರಿರಾಜನೊಬ್ಬ ಸಾಕ್ಷಿ**

**ಮರಣಕಾಲದಿ ಅಜಾಮಿಳ ಮಗನನು ಕರೆಯೆ**
**ಗರುಡನೇರಿ ಬಂದ ಗರುವ ರಹಿತನ**

**ದೊರೆಯೂರು ಯೇರಬಂದ ಪುತ್ರನನ್ನು**
**ಕೊರಳ್ಪಿಡಿದ್ದೊರಡಿಸಲು**

**ಅರಣ್ಯದೊಳಗವನಿದ್ದ ಸ್ಥಳದಲ್ಲಿ**
**ಭರದಿಂದೋಡಿ ಬಂದ ಭಕ್ತವತ್ಸಲನ್ನ**

**ತರುಣಿ ದ್ರೌಪದಿ ಸೀರೆಯ – ದುಶ್ಯಾಸನ**
**ಸರಸರ ಸೆಳೆಯುತಿರೆ**

**ಕರುಣಿ ತನ್ನೊಡತಿಯೊಡನೆ ಆಡುವುದ ಬಿಟ್ಟು**
**ತ್ವರದಿ ಅಕ್ಷಯವಿಟ್ಟ ಸಿರಿ ಕೃಷ್ಣರಾಯನ್ಕ**

ಪರಮಾತ್ಮನನ್ನು ನಂಬಿದವರಿಗೆಂದಿಗೂ ಕೆಡಕಾಗುವುದಿಲ್ಲ. ಭಕ್ತರು ಸಂಕಷ್ಟದಲ್ಲಿ ಸಿಲುಕಿದಾಗ ಅವನು ಹೇಗೆ ಅವರನ್ನು ಕಾಪಾಡುತ್ತಾನೆಂಬುದನ್ನು ಅನೇಕ ಪುರಾಣ ಪಾತ್ರದ ನಿದರ್ಶನಗಳ ಮೂಲಕ ಸಮರ್ಥಿಸುತ್ತಾರೆ. ಪ್ರಹ್ಲಾದ, ಗಜೇಂದ್ರ, ಅಜಾಮಿಳ, ಧ್ರುವ, ದ್ರೌಪದಿ ಮೊದಲಾದ ಭಕ್ತರ ಉದ್ಧಾರದ ಪ್ರಸಂಗದ ಮೂಲಕ ಹರಿಯ ಮಹಿಮೆಯನ್ನು ಚಿತ್ರಸಿದ್ದಾರೆ. 'ಬಲ್ಲವಗಿಲ್ಲಿದೆ ವೈಕುಂಠ' ಎಂದು ಆರಂಭವಾಗುವ ಕೀರ್ತನೆಯಲ್ಲಿ ದ್ವೈತ ತತ್ವದ ಹಿನ್ನೆಲೆಯಲ್ಲಿ ಶ್ರೀಹರಿಯ ಸರ್ವವ್ಯಾಪ್ತತೆಯನ್ನು ವಿವರಿಸಿದ್ದಾರೆ.

ವಾದಿರಾಜರು ಮಧ್ವಶಾಸ್ತ್ರದ ತಾರತಮ್ಯಾನುಸಾರವಾಗಿ ಹರಿಸರ್ವೋತ್ತಮತ್ವದ ಸಾರವನ್ನೇ ಒಂದು ಕೀರ್ತನೆಯಲ್ಲಿ ಅಡಕಗೊಳಿಸಿದ್ದಾರೆ. 'ಸಿರಿದೇವಿ ಆವನಿಗರಸಿ, ಸುರರ ಗುರು ವಿರಿಂಚಿ

ಪವನರು ಆವನ ಕುವರರೆಂಬರು, ಉರಗಾಧಿಪನಾವನ ಮಂಚ, ವಿಹಗೇಶ್ವರನಾವನ ವಾಹನ, ಪುರಹರನಾವನುಗಂಟ ನೀರ ಪೆತ್ತ ನಿರ್ಜರಪತಿ ಆವನ ಚರಣ ಸೇವಕನಾದ ಸುರರೊಳಗೀ ಹಯವದನಗಿನ್ನಾರನು ಸರಿಯೆಂದುಸುರುವೆನೊ. ಎಂದು ಹರಿಯ ಪಾರಮ್ಯವನ್ನು ಕೊಂಡಾಡಿದ್ದಾರೆ. ಮಧ್ವಾಚಾರ್ಯರ ಕೃತಿಗಳು ಉತ್ಕೃಷ್ಟವಾದ ತತ್ವಗಳ ಸಾರ ಅದನ್ನು ಕನ್ನಡಿಸಿದಷ್ಟೇ ತಮ್ಮ ಕೆಲಸ ಎಂಬ ವಿನಯ ವಾದಿರಾಜರದು. ಕೇವಲ ಕೀರ್ತನೆಗಳ ರಚನೆಯಲ್ಲಿಯೇ ತೃಪ್ತಿಹೊಂದಿದ ವಾದಿರಾಜರು ಅನೇಕ ದೀರ್ಘಕೃತಿಗಳನ್ನು ರಚಿಸಿದರು. ವೈಕುಂಠವರ್ಣನೆ, ಲಕ್ಷ್ಮಿಶೋಭಾನೆ, ಅವತಾರತ್ರಯ ಸುವ್ವಾಲಿ, ನಾರದ ಕೊರವಂಜಿ, ಸ್ವಪ್ನಪದ, ಗುಂಡಕ್ರಿಯೆ, ಕೀಚಕವಧೆ, ಹರಿಸರ್ವೋತ್ತಮಸಾರ ಮೊದಲಾದ ದೀರ್ಘಕೃತಿಗಳಲ್ಲಿ ಹರಿಯ ಹಿರಿಮೆಯನ್ನು ಅವನ ಸರ್ವೋತ್ತಮತ್ವವನ್ನು ನಿರೂಪಿಸಿದ್ದಾರೆ.

'ವೈಕುಂಠವರ್ಣನೆ'ಯಲ್ಲಿ ವೈಷ್ಣವ ಸಿದ್ಧಾಂತದ ತತ್ವಗಳನ್ನು ಸಂಸ್ಕೃತ ಮೂಲದಿಂದ ಅರಿಯಲು ಸಾಧ್ಯವಾಗದ ಸಾಮಾನ್ಯರಿಗೆ ಈ ಕೃತಿ ರಚಿಸಿದ್ದಾರೆ. ವೇದ, ಉಪನಿಷತ್ತು, ಪುರಾಣಗಳಲ್ಲಿಯ ಸಂಸ್ಕೃತ ಉಕ್ತಿಗಳನ್ನು ಉದಾಹರಿಸಿ ಅವುಗಳಲ್ಲಿ ನಿರೂಪಿತವಾದ ವಿಷಯಗಳನ್ನು ಕನ್ನಡದಲ್ಲಿ ನಿರೂಪಿಸಿದ್ದಾರೆ. ವೈಕುಂಠ ಎಂಬುದು ವಿಷ್ಣುವಿನ ಹೆಸರೂ ಹೌದು, ವಿಷ್ಣುವಿನ ರಾಜಧಾನಿಯೂ ಹೌದು. 'ವೈಕುಂಠವರ್ಣನೆ' ಎಂದರೆ ವಿಷ್ಣುವಿನ ವರ್ಣನೆಯೇ ಆಗಿದೆ. ವಿಷ್ಣುವಿನ ಮಹಿಮೆಗಳ ನಿರೂಪಣೆಯೇ, 'ತತ್ವಸಾರ' ವಿಷ್ಣುವಿನ ಮಹಿಮೆಗಳ ಜ್ಞಾನವೇ 'ತತ್ವಜ್ಞಾನ' ಎಂದಿದ್ದಾರೆ. ಶ್ರೀಲೋಲನ ಚರಿತೆಯನ್ನು ವಿವರಿಸಿದ್ದಾರೆ. ಹರಿಯೇ ಸರ್ವೋತ್ತಮ, ಹರಿಯೇ ಪರದೇವತೆ, ಸಕಲ ವೇದ ವೇದ್ಯ, ನಿರುಪಮ ಸತ್ಕೀರ್ತಿ ನಿತ್ಯನಿರ್ಮಲಮೂರ್ತಿ ಸುರ ಚಕ್ರವರ್ತಿ ಜಯ ಜಯತು ಎಂದಿದ್ದಾರೆ.

'ಲಕ್ಷ್ಮಿ ಶೋಭಾನೆ' 113 ನುಡಿಗಳ ಹಾಡಗಬ್ಬ, ಲಕ್ಷ್ಮಿಯು ತನ್ನ ಸ್ವಯಂವರದಲ್ಲಿ ಉಳಿದ ದೇವತೆಗಳನ್ನೆಲ್ಲ ಬಿಟ್ಟು ನಾರಾಯನಣನ್ನು ವರಿಸಿ ಮದುವೆಯಾಗಿದ್ದು ಈ ಕೃತಿಯ ವಸ್ತು. ಎಲ್ಲ ದೇವತೆಗಳಲ್ಲೂ ಒಂದಲ್ಲ ಒಂದು ದೋಷವಿದೆ. ವಿಷ್ಣು ಒಬ್ಬನೇ ದೋಷವರ್ಜಿತ, ಅವನ ಅವತಾರಗಳಲ್ಲಿ ದೋಷಗಳೆಂದು ತೋರುವ ಅಂಶಗಳು ದೋಷಗಳಲ್ಲ, ಎಂಬ ಪ್ರತಿಪಾದನೆಯೇ ಈ ಕೃತಿಯ ಆಶಯ, ಸಮದ್ರ ಮಥನ, ಲಕ್ಷಿಯ ಆವಿರ್ಭಾವ, ಲಕ್ಷ್ಮಿಯ ಸ್ವಯಂವರ ಲಕ್ಷ್ಮಿಯು

ಹರಿಗೆ ಉರುಟಣೆ ಮಾಡುವುದು. ಕೃಷ್ಣನಿಗೆ ಬಾಗಿಲು ಕಟ್ಟುವುದು, ಆರತಿ ಹಾಡು ಮೊದಲಾದವುಗಳ ಹಿನ್ನಲೆಯಲ್ಲಿ ಶ್ರೀಹರಿಯ ಸರ್ವೋತ್ತಮತ್ವವನ್ನು ನಿರೂಪಿಸುವ ಖಂಡ ಕಾವ್ಯ ಇದು.

'ನಾರದ ಕೊರವಂಜಿ' ಒಂದು ಗದ್ಯ ಪದ್ಯ ಮಿಶ್ರಿತ ಹಾಡಗಬ್ಬ ಶ್ರೀಹರಿಯೇ ತನ್ನ ಪತಿಯಾಗಬೇಕೆಂದು ಹಂಬಲಿಸುತ್ತಿರುವ ರುಕ್ಮಿಣಿಗೆ ನಾರದ ಮಹರ್ಷಿಯು ಕೊರವಂಜಿ ವೇಷವನ್ನು ಧರಿಸಿ ಬಂದು, ಅವಳಿಗೆ ಕಣಿ ಹೇಳುವ ಮೂಲಕ ಆನಂದವನ್ನು ಉಂಟುಮಾಡುವುದೇ ಈ ದೀರ್ಘ ಕಥನದ ಕಥಾವಸ್ತು.

ಹರಿಸರ್ವೋತ್ತಮತ್ವ ಪ್ರತಿಪಾದನೆಯೇ ಪ್ರಧಾನ ಆಶಯವಾಗಿಟ್ಟುಕೊಂಡು ರಚಿತವಾದ ಕವನ 'ಸಪ್ನಪದ'. ಈ ಇಡೀ ಕಾವ್ಯವೂ ಸ್ವಯಂ ಹರಿಯೇ ಸ್ವಪ್ನದಲ್ಲಿ ಬೋಧಿಸಿದಂತೆ ಬರೆಯಲಾಗಿದೆ. ಗಜೇಂದ್ರ, ಅರ್ಜುನ, ದ್ರೌಪದಿ, ಮೊದಲಾದ ಶ್ರೇಷ್ಠ ಭಕ್ತರು ಸಂಕಷ್ಟದಲ್ಲಿ ಸಿಲುಕಿದಾಗ ಅಭಯನೀಡಿ ಕಾಪಾಡಿದ್ದು, ಶ್ರೀಹರಿಯ ಪಾದದಲ್ಲಿ ಜನಿಸಿದ ಗಂಗೆಯನ್ನು ಶಿವ ಶಿರಸ್ಸಿನಲ್ಲಿ ಧರಿಸಿದ. ಬ್ರಹ್ಮ ಶ್ರೀಹರಿಯಿಂದ ವೇದೋಪದೇಶ ಪಡೆದ. ಶ್ರೀಹರಿಯು ಇಂತಹ ಸರ್ವೋತ್ತಮನಾದ್ದರಿಂದ ರಮೆಯು ಆತನನ್ನೇ ವರಿಸಿದ್ದರಿಂದ ಈ ಎಲ್ಲಾ ಕಾರಣಗಳ ಹಿನ್ನೆಲೆಯಲ್ಲಿ ಶ್ರೀಹರಿಯ ಪಾರಮ್ಯವನ್ನು ಎತ್ತಿ ಹಿಡಿದಿದ್ದಾರೆ.

ಗುಂಡಕ್ರಿಯೆ ಕೃತಿಯಲ್ಲಿ ದ್ವೈತ ಮತದ ತತ್ವಗಳನ್ನು ಲೋಕಾನುಭವಗಳ ಹಿನ್ನೆಲೆಯಲ್ಲಿ ಸಮರ್ಥಿಸಿ ಚಾರ್ವಾಕ, ಬೌದ್ಧ, ಜೈನ, ಅದ್ವೈತ ಇತ್ಯಾದಿ ಮತಗಳನ್ನು ವಿಮರ್ಶಿಸಿರುವುದು ಇದರ ವಸ್ತು. ಅನ್ಯಮತ, ಅನ್ಯದೈವಗಳನ್ನು ನಿರಾಕರಿಸುತ್ತಾ ಹರಿಸರ್ವೋತ್ತಮತ್ವವನ್ನು ಎತ್ತಿಹಿಡಿದಿದ್ದಾರೆ.

ಹರಿಸರ್ವೋತ್ತಮ ಸಾರವು ಕೇವಲ 17 ನುಡಿಗಳಿರುವ ಖಂಡಕಾವ್ಯದಂತಹ ಒಂದು ಕಿರುಕಾವ್ಯ ವಾದಿರಾಜರ ಎಲ್ಲಾ ಕೃತಿಗಳಂತೆ ಇದೂ ಸಹ ಮಾಧ್ವತತ್ವದ ಹಿನ್ನೆಲೆಯಲ್ಲಿ ರಚಿತವಾದ ಕೃತಿ. ಶಿವನಿಗಿಂತಲೂ ವಿಷ್ಣುವೇ ಉತ್ತಮನೆಂದು ಹರಿಸರ್ವೋತ್ತಮತ್ವವನ್ನು ಎತ್ತಿ ಹಿಡಿಯುತ್ತದೆ. ಹರಿಯೇ ಆ ತ್ರಿವಿಕ್ರಮಾವತಾರ ಸಂದರ್ಭದಲ್ಲಿ ಅವನ ಪಾದ ಸ್ಪರ್ಶದಿಂದ ಆಕಾಶದಿಂದ ಉದ್ಭವಿಸಿದ ಬ್ರಹ್ಮ ಹರಿಯ ಪಾದ ತೊಳೆದ. ಅದೇ ಪಾದ ತೊಳೆದ ಗಂಗೆಯನ್ನು ಶಿವ ಧರಿಸಿದ. ಸೃಷ್ಟಿ, ಸ್ಥಿತಿ, ಲಯ ಕಾರ್ಯಗಳನ್ನು ಬ್ರಹ್ಮ, ವಿಷ್ಣು, ಮಹೇಶ್ವರರಾದ ಬೇರೆ ಬೇರೆ ದೇವತೆಗಳ

ಕಾರ್ಯವಾದರೂ ಎಲ್ಲಾ ದೇವತೆಗಳು ಶ್ರೀಹರಿಗೆ ಅಧೀನರಾಗಿದ್ದಾರೆ. ಸರ್ವೋತ್ತಮತ್ವವನ್ನು ಅರಿತ ಮಹಾಲಕ್ಷ್ಮಿಯು ಸಂಶಯ ಮಾಡದೆ ವಿಷ್ಣುವಿಗೆ ಮಾಲೆಯನ್ನು ಹಾಕುತ್ತಾಳೆ.

ಹೀಗೆ ವಾದಿರಾಜರು ಎಲ್ಲಾ ಕೃತಿಗಳಲ್ಲಿನ ಕಥೆಗಳು ಬೇರೆ ಬೇರೆಯಾದರೂ, ಅವೆಲ್ಲದರ ಗುರಿ ಹರಿಸರ್ವೋತ್ತಮತ್ವವನ್ನು ಎತ್ತಿ ಹಿಡಿಯುವುದೇ ಆಗಿದೆ.

ವ್ಯಾಸತತ್ವಜ್ಞರು 'ಹುಚ್ಚುಗೊಳಿಸುವರೆ ಮರುಳೆ ತರುಳಾರ ಅಚ್ಚುತ ಪರಮ ಗಂಭೀರ ಪುರುಷನೆ', ಎಂದು ಮೊದಲಾಗುವ ಕೀರ್ತನೆಯಲ್ಲಿ ಯಾವ ರೀತಿಯ ಚ್ಯುತಿಗೂ ಒಳಪಡದ ಅಚ್ಯುತನಾದ ಶ್ರೀಹರಿಯನ್ನು ಕೊಂಡಾಡಿದ್ದಾರೆ. ವಿದ್ಯಾರತ್ನಾಕರ ತೀರ್ಥರು ಒಂದು ಕೀರ್ತನೆಯಲ್ಲಿ

ಮಧ್ವಮತವೇ ದೊಡ್ಡದೆಂದು ತಿಳಿದು ಮನ
ಶುದ್ಧಿಯಿಂದ ಮತವನನುಸರಿಸೋ ಪ

ಶ್ರೀಮಧ್ವಮತದಲ್ಲಿ ಹರಿಯೇ ಸರ್ವೋತ್ತಮ
ಭೇದಪಂಚ ಜಗತೆರಡು ಸತ್ಯ
ಶ್ರೀ ಬಹ್ಮಾದಿಗಳೆಲ್ಲ ಹರಿಪರಿವಾರರು
ತಾರತಮ್ಯವೇ ಸದಾ ಇವರಲ್ಲಿ

ಮಧ್ವಮತದಲ್ಲಿ ಹರಿಯೇ ಸರ್ವೋತ್ತಮ ಪಂಚಭೇದಗಳು ಮತ್ತು ಜಗತ್ತು ಎರಡೂ ಸತ್ಯವಾದುದು. ಬ್ರಹ್ಮನೇ ಮೊದಲಾದ ದೇವತೆಗಳೆಲ್ಲ ಶ್ರೀಹರಿಯ ಪರಿವಾರಕ್ಕೆ ಸೇರಿದವರು. ದೇವತೆಗಳೆಲ್ಲರೂ ಸಮಾನರಲ್ಲ ಅವರಲ್ಲೂ ತಾರತಮ್ಯವುಂಟು.

ಮುಕ್ತಿ ಎಂಬುದು ನಿಜಾನಂದದ ಅನುಭವ
ಭಕ್ತಿಯೆಂಬುದೇ ದೊಡ್ಡ ಸಾಧನವು
ಅಕ್ಷಾನುಮಾಗಮ ಮೂರು ಪ್ರಮಾಣ ಶ್ರೀ
ಲಕ್ಷ್ಮೀಶನೇ ಸರ್ವಶ್ರುತಿವೇದ್ಯನು

ಸ್ವತಂತ್ರ ಪರತಂತ್ರ ಎರಡು ತತ್ವಗಳು
ಸ್ವತಂತ್ರ ತತ್ವವು ಹರಿಯೊಬ್ಬನೇ ಪ
ರತಂತ್ರ ಮಿಕ್ಕಿದ್ದೆಲ್ಲಾ ಇದಕೆ ಪ್ರಮಾಣವು
'ಏಷ ಸರ್ವೇಶ್ವರ' ವೆನ್ನುತ ಶ್ರುತಿಯು

ಬಿಂಬ ಸ್ವರೂಪಿಯಾದ ಪರಮಾತ್ಮನೊಬ್ಬನೇ ಸರ್ವತಂತ್ರ ಸ್ವತಂತ್ರನಾದವನು. ಉಳಿದವರೆಲ್ಲರೂ ಅಸ್ವತಂತ್ರರು. ವೇದಗಳು ಅವನ ಹಿರಿಮೆಯನ್ನು ಸಾರಿ ಹೇಳುತ್ತಿವೆ.

**ಹರಿಯೇ ಸರ್ವೋತ್ತಮ ತದನು ರಮಾದೇವಿ**
**ತದನು ವಿಧಿ ಪ್ರಾಣರಿವರಿಬ್ಬರು**
**ತದನು ಸರಸ್ವತಿ ಭಾರತೇರಿಬ್ಬರು**
**ಶಿವ ಶೇಷ ಗರುಡ ಶ್ರೀ ಹರಿನಾರೇರು**

ದ್ವೈತ ಸಿದ್ಧಾಂತದಲ್ಲಿ ದೇವತೆಗಳಲ್ಲಿಯೂ ತಾರತಮ್ಯ ಉಂಟು. ಎಲ್ಲಾ ದೇವತೆಗಳಲ್ಲಿ ಹರಿಯೇ ಸರ್ವೋತ್ತಮನಾದವನು. ಅವನ ನಂತರದ ಕಕ್ಷೆಯಲ್ಲಿ ಸರಸ್ವತಿ – ಭಾರತಿದೇವಿಯರು, ಆಮೇಲೆ ಗರುಡ, ಶೇಷ, ರುದ್ರರು, ನಂತರ ಹರಿಯ ಮಡದಿಯರೂ ಹೀಗೆ ಮೂವತ್ತೆರಡು ವರ್ಗಗಳಲ್ಲಿ ತಾರತಮ್ಯವು ಸಾಗುತ್ತಾ ಹೋಗುತ್ತದೆ.

**ಈಶ್ವರ ಜಡ ಭೇದ ಜೀವ ಜಡಕೆ ಭೇದ**
**ಜೀವ ಜೀವಕೆ ಭೇದ ಜಡ ಜಡಕೆ**
**ಜೀವೇಶರಿಗೆ ಭೇದ ಈಶ ಲಕ್ಷ್ಮೀ ಭೇದ**
**ಪರತಂತ್ರ ಚಿತ್ಪರ ಜೀವ ಶಬ್ದ**

ಜೀವ ಪರಮಾತ್ಮರಲ್ಲಿ ಭೇದ, ಜೀವ ಜೀವರಲ್ಲಿ ಭೇದ, ಜಡಜಡರಲ್ಲಿ ಭೇದ, ಜಡ–ಈಶ್ವರ ಭೇದ, ಜಡ–ಜೀವರಲ್ಲಿ ಭೇದ. ಹೀಗೆ ಜಗತ್ತಿನಲ್ಲಿ ಪಂಚಭೇದ ತಾರತಮ್ಯವು ನಿಜವಾದವು.

**ದೋಷವರ್ಜಿತ ಹರಿ ವಿಷಯವಿರಕ್ತಿ ಭಕ್ತ್ಯು**
**ಪಾಸನದಿಂದಲೆ ಅಪರೋಕ್ಷನೊ**
**ಇಂತು ಪ್ರಸನ್ನನು ಮುಕ್ತಿಯನೀವನು**
**ಎಂಬುವುದೆ ಸರ್ವ ಶಾಸ್ತ್ರಾರ್ಥವೋ॥**

ಶ್ರೀಹರಿಯು ದೋಷವರ್ಜಿತನಾದವನು. ವಿಷಯ ವಿರಕ್ತಿಯಿಂದ ಭಕ್ತಿಯಿಂದ ಉಪಾಸನೆ ಮಾಡಿದರೆ ಮುಕ್ತಿಯನ್ನು ಕೊಡವನು ಎಂದು ಸಕಲ ಶಾಸ್ತ್ರಗಳು ಹೇಳುತ್ತಿದೆ ಎಂದಿದ್ದಾರೆ. ಹೀಗೆ ವಿದ್ಯಾರತ್ನಾಕರತೀರ್ಥರು ಮಧ್ವಮತದ ತತ್ವ ಹಿರಿಮೆಗಳನ್ನು ಹೇಳುತ್ತಲೇ ಹರಿ ಸರ್ವೋತ್ತಮತ್ವವನ್ನು ಎತ್ತಿ ಹಿಡಿದಿದ್ದಾರೆ. ಸುಖಾನುಭವವೇ ಮುಕ್ತಿ, ಮುಕ್ತಿ ಪಡೆಯಲು ನಿರ್ಮಲವಾದ ಭಕ್ತಿಯೇ ಪ್ರಮುಖ ಸಾಧನ. ಪ್ರತ್ಯಕ್ಷ, ಅನುಮಾನ, ಆಗಮಗಳೆಂದು ಮೂರು ಪ್ರಮಾಣಗಳು ಶ್ರೀಹರಿಯನ್ನು ವೇದಗಳಿಂದ ಮಾತ್ರ ತಿಳಿಯಲು ಸಾಧ್ಯ. ಮತ್ತೊಂದು

ಕೀರ್ತನೆಯಲ್ಲಿ ‘ಬೆಟ್ಟದ ಶೃಂಗವ ಹತ್ತಿ ಧುಮುಕುವೆ ನಾನು ಕೃಷ್ಣನೇ ಸರ್ವೋತ್ತಮ ಮತ್ತಾರೊಬ್ಬರಿಲ್ಲವೆಂದು’[೧೧] ಎಂದು ಸವಾಲೆಸೆಯುತ್ತಾ ಹರಿಸರ್ವೋತ್ತಮತ್ವದ ಬಗ್ಗೆ ತಮಗಿರುವ ದೃಢವಾದ ನಿಲುವನ್ನು, ಮಧ್ವಮತದ ತಾರತಮ್ಯ ಮಹತ್ವವನ್ನು ಒತ್ತಿ ಹೇಳಿದ್ದಾರೆ.

ಲೌಕಿಕ ಸಂಗತಿಗಳಿಗೆ ಆಧ್ಯಾತ್ಮಿಕ ಲೇಪನ ನೀಡಿ ಕೀರ್ತನೆಗಳನ್ನು ರಚಿಸುವುದು ವಿದ್ಯಾಪ್ರಸನ್ನ ತೀರ್ಥರ ವೈಶಿಷ್ಟ್ಯ. ‘ಏನಿದ್ದರೇನು ಈ ಮಾನವನಿಗೆ ಜಗದಲ್ಲಿ ದಾನವಾಂತಕನ ಗುಣಜ್ಞಾನವನು ಪೊಂದದ ಮೇಲೆ’[೧೨] ಎಂದು ಆರಂಭವಾಗುವ ಕೀರ್ತನೆಯಲ್ಲಿ ಶ್ರೀಹರಿಯ ಜ್ಞಾನಸಂಪಾದನೆ ಎಷ್ಟು ಮುಖ್ಯ ಎಂಬುದನ್ನು ಹೇಳುತ್ತಾ ‘ದೇಹವ ದಂಡಿಸಲೇಕೆ ಮನುಜ ಶ್ರೀಹರಿನಾಮವ ಸ್ನೇಹದಿ ಭಜಿಸೆಲೊ’[೧೩] ಎಂದು ಮೊದಲಾಗುವ ಕೀರ್ತನೆಯಲ್ಲಿ ಹರಿಸರ್ವೋತ್ತಮತ್ವದ ಬಗ್ಗೆ ತಮಗಿರುವ ದೃಢ ನಿಲುವನ್ನು ಸಮರ್ಥಿಸಿದ್ದಾರೆ. ‘ವಾದ ವಿವಾದವು ಆಗಿ ಮುಗಿಯಿತೊ ಆಮೋದ ತೀರ್ಥರ ಮತ ಸಾಧನ ಕೈಪಿಡಿ, ಓದಿ ನೀ ಸುಲಭದಿ ತತ್ವಗಳರಿಯುತ ಮಾಧವನಂಘ್ರಿಯ ಹರುಷದಿ ಭಜಿಸೆಲೊ’ ಎಂದು ಸ್ಪಷ್ಟವಾಗಿ ತಿಳಿಸಿದ್ದಾರೆ. ‘ಸತತ ಹರಿಯ ನಾಮವನ್ನು ಯತುನದಿಂದ ನುಡಿವ ನರನು ಅತಿತ್ವರೆಯಲಿ ಸರ್ವಕಾರ್ಯ ಸಿದ್ಧಿ ಪೊಂದುವ’[೧೪] ಎಂದು ಹರಿನಾಮದ ಹಿರಿಮೆಯನ್ನು ಸಾರಿದ್ದಾರೆ. ವಿಶ್ವೇಂದ್ರತೀರ್ಥರು ‘ದೇವಾಧಿದೇವ ಶ್ರೀ ತ್ರಿವಿಕ್ರಮರಾಯ ದ್ಯಾವ ಮ್ಯಾಲ್ನಿನ್ನ ಕಾಯ’[೧೫] ಎಂಬ ಕೀರ್ತನೆಯಲ್ಲಿ ಹರಿಯ ಮಹಿಮೆಯನ್ನು ಕೊಂಡಾಡಿದ್ದಾರೆ. ಹೀಗೆ ಶ್ರೀಪಾದರಾಜರಾದಿಯಾಗಿ ಎಲ್ಲಾ ಹರಿದಾಸ ಯತಿಗಳೂ, ಹರಿದಾಸರು ಹರಿಸರ್ವೋತ್ತಮತ್ವವನ್ನು ಎತ್ತಿ ಹಿಡಿದಿದ್ದಾರೆ.

### ೫.೨ ಮಧ್ವ ಸಿದ್ಧಾಂತದಲ್ಲಿ ರುದ್ರ ದೇವರು

ಹರಿದಾಸ ಯತಿಗಳು ಮತ್ತು ಹರಿದಾಸರುಗಳು ಶ್ರೀಹರಿಯ ಪರಮ ಭಕ್ತರಾದರೂ ಶಿವನನ್ನು ಸ್ತುತಿಸದೇ ಇಲ್ಲ. ಮಾಧ್ವ ಸಂಪ್ರದಾಯದ ಪ್ರಕಾರ ದೇವತೆಗಳ ತಾರತಮ್ಯಕ್ಕೆ ಅನುಗುಣವಾಗಿ ಈಶ್ವರನನ್ನೂ ಸ್ತುತಿಸಿದ್ದಾರೆ. ದೇವತೆಗಳಲ್ಲೆಲ್ಲಾ ಹರಿಯು ಸರ್ವೋತ್ತಮನೆನಿಸಿದರೆ ಅವನ ನಂತರ ಬ್ರಹ್ಮ ಮತ್ತು ವಾಯುದೇವರು ಪುತ್ರರೆನಿಸಿ ಸಮಾನ ಯೋಗ್ಯತೆಯಲ್ಲಿ ಬರುವರು. ಈಶ್ವರ ಮನೋಭಿಮಾನಿ ದೇವತೆ ಎನ್ನಿಸಿಕೊಂಡು ರುದ್ರನಾಮದಿಂದ ಹರಿಯ ಮೊಮ್ಮಗನೆನಿಸಿಕೊಂಡಿದ್ದಾರೆ. ಶ್ರೀಪಾದರಾಜರು ಶಿವನನ್ನು ಕುರಿತು ರಚಿಸಿರುವ ಒಂದು

ಕೀರ್ತನೆಯಲ್ಲಿ ಕೆಳದಿಯೊಬ್ಬಳು ತನ್ನ ಗೆಳತಿಯನ್ನು 'ವೃಷಭನೇರಿದ ವಿಷಧರನ್ಯಾರೆ ಪೇಳಮ್ಮಯ್ಯ'॥ ಎಂದು ಕೇಳಲು ಆಕೆ 'ಹಸುಳೆ ಪಾರ್ವತಿಯ ತಪಸಿಗೆ ಮೆಚ್ಚಿದ ಜಟಾಮಂಡಲಧಾರಿ ಕಣಮ್ಮ' ಎಂದು ಉತ್ತರ ಕೊಡುವ ಸಂವಾದದ ರೀತಿಯಲ್ಲಿ ಶಿವನ ವೇಷಭೂಷಣಗಳನ್ನು ಮಹಿಮೆಗಳನ್ನು ಸೊಗಸಾಗಿ ವರ್ಣಿಸುವಳು 'ಮಂಗಳಾಂಗನೆ ಮಾರಜನಕ ನಾ ಮಾಡಿದ ತಪ್ಪು ಹಿಂಗದೆ ಕ್ಷಮಿಸೊ ಯದುಕುಲತಿಲಕ, ವಕ್ಷದಲೊಪ್ಪುವ ನಿನ್ನಂಗನೆ ಅರಿಯಳು ನಖಮಹಿಮಾಂಕ' ಎಂದು ವಿಷ್ಣುವಿನ ಪಾರಮ್ಯವನ್ನು ಮುಕ್ತಕಂಠದಿಂದ ಸ್ತುತಿಸುತ್ತಾ, ರಂಗವಿಠಲನ ಪಾದಗಳಿಗೆರಗಿ ಕೈಲಾಸಕ್ಕೆ ನಡೆದ ಎಂದು ಹೇಳುವ ಮೂಲಕ ಉಭಯ ದೇವತೆಗಳಲ್ಲಿ ಒಂದು ವಿಶಿಷ್ಟ ಸಂಬಂಧವನ್ನು ಕಲ್ಪಿಸಿ ಹರಿಸರ್ವೋತ್ತಮತ್ವವನ್ನು ಉಳಿಸಿಕೊಂಡೇ ಶಿವನನ್ನು ಸಹ ಹೊಗಳಿರುವ ಕ್ರಮ ಆದರಣೀಯವಾದುದು.

ವ್ಯಾಸರಾಯರು ಶ್ರೀಹರಿಯ ಒಲುಮೆಯನ್ನು ಬೇಡುವ ನೆಪದಲ್ಲಿ ರುದ್ರದೇವರನ್ನು ಸೊಗಸಾಗಿ ಚಿತ್ರಿಸಿದ್ದಾರೆ.

ನಮೋ ಪಾರ್ವತೀ ಪತಿ ನುತಜನಪರ ನಮೋ ವಿರೂಪಾಕ್ಷ ಪ

ರಮಾರಮಣನಲ್ಲಮಲ ಭಕುತಿ ಕೊಡು ನಮೋ ವಿಶಾಲಾಕ್ಷ ಅ.ಪ.

ನೀಲಕಂಠ ತ್ರಿಶೂಲ ಡಮರು ಹಸ್ತಾಲಂಕೃತ ರಕ್ಷ
ಫಾಲನೇತ್ರ ಕಪಾಲ ರುಂಡಮಣಿ ಮಾಲಾಧೃತ ವಕ್ಷ
ಶೀಲರಮ್ಯ ವಿಶಾಲ ಸುಗುಣ ಸಲ್ಲೀಲ ಸುರಾಧ್ಯಕ್ಷ
ಶ್ರೀ ಲಕುಮೀಶನ ಓಲೈಸುವ ಭಕ್ತಾವಳಿಗಳ ಪಕ್ಷ

ವಾಸವನುತ ಹರಿದಾಸ ಈಶ ಕೈಲಾಸವಾಸ ದೇವ
ದಾಶರಥಿಯ ಔಪಾಸಕ ಸುಜನರ ಪೋಷಿಪ ಪ್ರಭಾವ
ಭಾಸಿಸುತಿಹುದಶೇಷ ಜೀವರಿಗೆ ಈಶನೆಂಬ ಭಾವ
ಶ್ರೀಶನಲ್ಲಿ ಕೀಲಿಸು ಮನವ ಗಿರಿಜೇಶ ಮಹಾದೇವ

ಮೃತ್ಯುಂಜಯ ನಿನ್ನುತ್ತಮ ಪದಯುಗ ಭೃತ್ಯನೊ ಸರ್ವತ್ರ
ಹತ್ತಿರ ಕರೆದು ಅಪತ್ಯನಂದದಿ ಪೊರೆಯುತ್ತಿರೊ ತ್ರಿನೇತ್ರ
ತೆತ್ತಿಗನಂತೆ ಕಾಯುತ್ತಿಹ ಬಾಣನ ಸತ್ಯದಿ ಸುಚರಿತ್ರ
ಕರ್ತೃ ಉಡುಪಿ ಸರ್ವೋತ್ತಮ ಕೃಷ್ಣನ ಪೌತ್ರ ಕೃಪಾಪಾತ್ರ॥

ಎಂದು ಆತ್ಮೀಯ ಭಾವದಿಂದ ಶಿವನಲ್ಲಿ ಮೊರೆ ಹೋಗಿದ್ದಾರೆ. ವಾದಿರಾಜರು ಸಹ ಇದೇ ರೀತಿಯಲ್ಲಿ 'ಧವಳಗಂಗೆಯ ಗಂಗಾಧರ ಮಹಾಲಿಂಗ ಮಾಧವನ ತೋರಿಸಯ್ಯ ಗುರುಕುಲೋತ್ತುಂಗ'[೧೮] ಎಂದು ಶಿವನಲ್ಲಿ ಪ್ರಾರ್ಥಿಸಿದ್ದಾರೆ.

ವ್ಯಾಸತತ್ವಜ್ಞ ತೀರ್ಥರು 'ದೇವತೆಗಳ ದೇವ ಮಹದೇವ ದೇವ ಆವ ನಿಮಗೆ ಸರಿಯು ಕಾವುದೆಮ್ಮನು ಸರ್ವ'[೧೯] ಎಂದು ಬೇಡುತ್ತಾ ಮನೋಭಿಮಾನಿ ದೇವತೆಯಾಗಿ ರುದ್ರನಲ್ಲಿ ಶರಣಾಗಿದ್ದಾರೆ. ವಿದ್ಯಾಪ್ರಸನ್ನತೀರ್ಥರು 'ಹರಿ ಭಕುತಿಯ ಪೊಂದಿಸಲೊ ಕರುಣದಿ ಗಿರಿಜಾರಮಣ, ಎಂದಿದ್ದರೆ ಮತ್ತೊಂದೆಡೆ 'ಹರ ನಮಃ ಪಾರ್ವತೀ ಪತೆಯೇ ನಮೋ ಹರನಮಃ ಪಾರ್ವತೀ ಪತೆಯೇ'[೨೦] ಎಂದು ಶಿವನನ್ನು ಸ್ತುತಿಸುತ್ತಾ 'ಹರಿಯು ಪ್ರಸನ್ನನಾಗುವ ತೆರದಲಿ ಮನ ಕರುಣಿಸೋ ಉರಗಭೂಷಣ ಗಿರಿಜಾಪತೆ' ಎಂದು ಹರಿಭಕ್ತಿಗೆ ಶಿವನಲ್ಲಿ ಮೊರೆ ಹೋಗಿದ್ದಾರೆ. ಪ್ರದ್ಯುಮ್ನ ತೀರ್ಥರು 'ಬೇಡಿಕೊಂಬೆ ಮೃಡಹರ ಭವ ಶಂಭೋ'[೨೧] ಎಂದು ಮೊರೆಯಿಡುತ್ತಾ 'ಶ್ರೀ ನರಹರಿಯಾಸುತನ ಕುವರನೇ ಅನುದಿನದಲಿ ಮನದೋಷಗಳಳಿಯಯ್ಯಾ' ಎಂದು ಬೇಡಿದ್ದಾರೆ. ಹೀಗೆ ಮಧ್ವಶಾಸ್ತ್ರದಲ್ಲಿ ಹಾಗೂ ಹರಿದಾಸರ ಕೀರ್ತನೆಗಳಲ್ಲಿ ರುದ್ರದೇವರಿಗೆ ವಿಶಿಷ್ಟ ಸ್ಥಾನವನ್ನು ಕಲ್ಪಿಸಿದ್ದಾರೆ. ರುದ್ರದೇವರಿಗಿಂತ ಶ್ರೀಹರಿಯೆ ಶ್ರೇಷ್ಠನಾದರೂ ಹರಿಯನ್ನು ಸೇರಲು ರುದ್ರದೇವರ ಕರುಣೆ ಅಗತ್ಯ ಎಂಬುದು ಹರಿದಾಸರ ನಂಬಿಕೆ.

### ೫.೩ ಹನುಮ ಭೀಮ ಮಧ್ವ

"ಮಧ್ವ ಮತದಲ್ಲಿ ವಾಯುದೇವರಿಗೆ ಗುರುಸ್ಥಾನವಿದೆ ಹರಿಗೆ ಸಲ್ಲಿಸುವ ಎಲ್ಲ ಸೇವೆಗಳು ಗುರುಗಳಾದ ಪ್ರಾಣದೇವರ ಮುಖಾಂತರವೇ ತಲುಪಬೇಕು. ಅವರು ಆ ಪರಮಾತ್ಮನಿಗೂ ಜೀವಾತ್ಮರಿಗೂ ಸಂಪರ್ಕವನ್ನು ಕಲ್ಪಿಸುವ ಮಧ್ಯಮವಿದ್ದಂತೆ. ಮೋಕ್ಷದಾತ ಹರಿಯೇ ಆದರೂ ಅದು ವಾಯುದೇವರ ಮೂಲಕವೇ ಜೀವರಿಗೆ ಪ್ರಾಪ್ತವಾಗಬೇಕು. ಪರಮಾತ್ಮನು ಮುಖ್ಯಪ್ರಾಣಂರ್ಗತನು".[೨೨] ವಾಯುದೇವರು ತ್ರೇತಾಯುಗದಲ್ಲಿ ಹನುಮಂತನಾಗಿ, ದ್ವಾಪರದಲ್ಲಿ ಭೀಮಸೇನನಾಗಿ, ಕಲಿಯುಗದಲ್ಲಿ ಮಧ್ವಾಚಾರ್ಯರಾಗಿ ಅವತಾರವೆತ್ತಿದರೆಂಬುದು ವೈಷ್ಣವರ ನಂಬಿಕೆ. ಶ್ರೀಪಾದರಾಜರು ಮಧ್ವಾಚಾರ್ಯರನ್ನು ಕುರಿತು ರಚಿಸಿರುವ 'ಮಧ್ವ ನಾಮ' ಹರಿದಾಸ ಸಾಹಿತ್ಯದಲ್ಲಿಯೇ ಪ್ರಮುಖವಾದುದು. 'ಜಯ ಜಯ ಜಗತ್ರಾಣ ಅಖಿಲಗುಣ

ಸದ್ಧಾಮ ಮಧ್ವನಾಮ’[೨೩] ಎಂದು ಪ್ರಾರಂಭವಾಗುವ ಇಪ್ಪತ್ತೇಳು ನುಡಿಗಳುಳ್ಳ ಈ ದೀರ್ಘ ಕೀರ್ತನೆಯಲ್ಲಿ ಹನುಮ, ಭೀಮ, ಮಧ್ವರು ಶ್ರೀಹರಿಗೆ ಮಾಡಿದ ಸೇವೆ ಮತ್ತು ಸಾಧನೆಗಳನ್ನು ಕುರಿತು ಚಿತ್ರಿಸಿದ್ದಾರೆ. ಈ ಕೃತಿಯನ್ನು ಮುಂದೆ ಬರುವ ದೀರ್ಘಕೃತಿಗಳು ಮತ್ತು ಖಂಡಕಾವ್ಯಗಳು ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಅವತಾರ ತ್ರಯಗಳನ್ನು ಕುರಿತು ವ್ಯಾಸರಾಯರು ಏಳೆಂಟು ಕೀರ್ತನೆಗಳನ್ನು ರಚಿಸಿದ್ದಾರೆ. ಅದರಲ್ಲಿ ಎಲ್ಲಿಯೂ ಪುನರುಕ್ತಿ ಕಂಡುಬರುವುದಿಲ್ಲ. ‘ಜಾಣ ನೀನಹುದೋ ಗುರು ಮುಖ್ಯ ಪ್ರಾಣ ನೀನಹುದೋ’ ಎಂದು ಮೊದಲಾಗುವ ಕೀರ್ತನೆಯಲ್ಲಿ ‘ರಾಣಿ ಭಾರತೀರಮಣ ನಿನಗೆಣೆ ಕಾಣೆ ತ್ರಿಭುವನದೊಳಗೆ ಸರ್ವ ಪ್ರಾಣಿಗಳ ಹೃದಯದಲಿ ಮುಖ್ಯ ಪ್ರಾಣನೆಂದೆನಿಸಿದೆಯೊ ದಿಟ್ಟ’ ಎಂದು ವಾಯುದೇವರ ಮಹಿಮೆಯನ್ನು ಕೊಂಡಾಡಿದ್ದಾರೆ. ಮತ್ತೊಂದು ಅವತಾರ ತ್ರಯವನ್ನು ಕುರಿತ ‘ಜಯ ವಾಯು ಹನುಮಂತ ಜಯ ಭೀಮ ಬಲವಂತ ಜಯ ಪೂರ್ಣ ಮತಿವಂತ ಜಯ ಸಲಹೋ ಸಂತ"[೨೪] ಎಂಬ ಕೀರ್ತನೆ ಪ್ರಸಿದ್ಧವಾದುದು. ತ್ರೇತಾಯುಗದಿ ಹನುಮಂತನ ಅವತಾರದಲ್ಲಿ ಸಾಗರವ ಲಂಘಿಸಿ, ಸೀತೆಗೆ ಉಂಗುರ ಕೊಟ್ಟದ್ದು, ಹರಿಗೆ ಚೂಡಾಮಣಿ ಕೊಟ್ಟದ್ದು, ಶರಧಿಗೆ ಸೇತುವೆಯನ್ನು ಕಟ್ಟಿ, ಅರಿಗಳನ್ನು ನಾಶ ಮಾಡಿ, ಕಪಿವರರಿಗೆ ಸಂಜೀವನವ ತಂದು ಬದುಕಿಸಿದ್ದು, ದ್ವಾಪರದಲ್ಲಿ ಭೀಮನಾಗಿ ಜನಿಸಿ ಪಾಪಿಗಳಾದ ಮಾಗಧ, ಬಕ, ಕೀಚಕ, ಹಿಡಿಂಬಕ, ದುರ್ಯೋಧನ ಮೊದಲಾದ ದುಷ್ಟರನ್ನು ಸಂಹರಿಸಿ ಶಿಷ್ಟರನ್ನು ರಕ್ಷಣೆ ಮಾಡಿದ್ದು, ಕಲಿಯುಗದಲ್ಲಿ ಆಚಾರ್ಯ ಮಧ್ವ ಗುರುಗಳಾಗಿ ಅವತರಿಸಿ ದುರ್ಮತಗಳನ್ನು ಮುರಿದದ್ದು ಹೀಗೆ ಮೂರು ಅವತಾರದ ಹಿರಿಮೆಯನ್ನು ಸೊಗಸಾಗಿ ವರ್ಣಿಸಿದ್ದಾರೆ.

ವಾದಿರಾಜರೂ ಸಹ ಶ್ರೀಪಾದರಾಜರ ‘ಮಧ್ವನಾಮ’ದಂತೆ ‘ಅವತಾರತ್ರಯಸುವ್ವಾಲಿ’ ಎಂಬ ದೀರ್ಘಕೃತಿಯನ್ನು ರಚಿಸಿದ್ದಾರೆ. ಆದರೆ ಇದು ಮಧ್ವನಾಮದಷ್ಟು ಪ್ರಸಿದ್ಧಿಯನ್ನು ಪಡೆಯಲಿಲ್ಲ. ಅಲ್ಲದೆ ಅನೇಕ ಬಿಡಿ ಕೀರ್ತನೆಗಳಲ್ಲಿ ಹನುಮ, ಭೀಮ, ಮಧ್ವರ ಸಾಧನೆಗಳನ್ನು ಮನೋಜ್ಞವಾಗಿ ಚಿತ್ರಿಸಿದ್ದಾರೆ. ವ್ಯಾಸತತ್ವಜ್ಞರು ‘ಪ್ರಾಣನಾಥನೆ ನಿನ್ನ ತುತಿಯ ಮಾಡಲು ಇನ್ನು ತ್ರಾಣ ಎನಗುಂಟೆ ಗುರುವೆ’[೨೫] ಎಂದು ಪ್ರತಿಜೀವರಲ್ಲೂ ನೆಲೆಸಿರುವ ವಾಯುದೇವರ ಮಹಿಮೆಯನ್ನು ಕುರಿತು ವರ್ಣಿಸಿದ್ದಾರೆ. ವಿದ್ಯಾಪ್ರಸನ್ನ ತೀರ್ಥರು ‘ಎಂಥಾ ವೈರಾಗ್ಯ ಹನುಮಂತ ಎಂಥ ಸೌಭಾಗ್ಯ

ಗುಣವಂತ'[೨೬] ಎಂದು ಹನುಮಂತನ ಸಾಹಸ ಗುಣ ಪರಾಕ್ರಮಗಳನ್ನು ಕೊಂಡಾಡಿರುವುದಲ್ಲದೆ, 'ಜನುಮ ಜನುಮದಲಿ ಎನಗಿರಲಿ ಹನುಮ, ಭೀಮ, ಮಧ್ವ ಮುನಿಗಳ ಸೇವೆಯು'[೨೭] ಎನ್ನುವುದು ಅವರ ಪ್ರಾರ್ಥನೆ. ಪ್ರದ್ಯುಮ್ನತೀರ್ಥರು 'ನಿನ್ನ ನಂಬಿ ಬಂದೆ ಪಂಚಮುಖಿ ಪ್ರಾಣ ಅನ್ಯ ಹಂಬಲ ಬಿಡಿಸಿ ಬಿಂಬ ಮೂರುತಿ ತೋರೊ'[೨೮] ಎಂದು ಮೊದಲಾಗುವ ಕೀರ್ತನೆಯಲ್ಲಿ ಅವತಾರತ್ರಯವನ್ನು ಕುರಿತು ಚಿತ್ರಿಸಿದ್ದಾರೆ.

ಹೀಗೆ ಎಲ್ಲಾ ಹರಿದಾಸ ಯತಿಗಳು ಮತ್ತು ಹರಿದಾಸರು ಮಧ್ವಾಚಾರ್ಯರನ್ನು ಸ್ತುತಿಸುವಾಗ ಮೊದಲು ಅವತಾರತ್ರಯಕ್ಕೆ ತಲೆಬಾಗಿ ನಂತರ ಮುಂದಿನ ಕೆಲಸದಲ್ಲಿ ತೊಡಗುತ್ತಾರೆ. ಒಂದಲ್ಲ ಒಂದು ರೀತಿಯಲ್ಲಿ ಹನುಮ, ಭೀಮ, ಮಧ್ವರನ್ನು ಕುರಿತು ಬಿಡಿ – ಬಿಡಿಯಾಗಿ ಇಲ್ಲವೇ ಅವತಾರ ತ್ರಯಗಳನ್ನು ಒಟ್ಟಾಗಿ ಒಂದೇ ಕೀರ್ತನೆಯಲ್ಲಿ ಚಿತ್ರಿಸಿರುವುದನ್ನು ಹರಿದಾಸ ಸಾಹಿತ್ಯದುದ್ದಕ್ಕೂ ಕಾಣುತ್ತೇವೆ.

ಸಾಮಾನ್ಯವಾಗಿ ಎಲ್ಲಾ ಮತಪ್ರವರ್ತಕರೂ ಅನ್ಯಮತಗಳ ಲೋಪ – ದೋಷಗಳನ್ನು ನಿರಾಕರಿಸಿ ತಮ್ಮ ಮತವನ್ನು ಮಂಡಿಸುತ್ತಿದ್ದರು. ಮಧ್ವಾಚಾರ್ಯರೂ ಇದಕ್ಕೆ ಹೊರತಲ್ಲ. ಅವರ ಕಾಲದಲ್ಲಿ ಪ್ರಬಲವಾಗಿದ್ದ ಅದ್ವೈತ ತತ್ವದ ಪ್ರಮುಖ ತತ್ವಗಳಾದ ಮಾಯಾವಾದ ಮತ್ತು ಅಭೇದ ತತ್ವಗಳನ್ನು ನಿರಾಕರಿಸಿ ದ್ವೈತ ತತ್ವವನ್ನು ಪ್ರತಿಪಾದಿಸಿದರು. ಶ್ರೀಪಾದರಾಜರಿಂದ ಮೊದಲ್ಗೊಂಡು ಎಲ್ಲಾ ಹರಿದಾಸ ಯತಿಗಳು ಮತ್ತು ಹರಿದಾಸರೂ ದ್ವೈತ ತತ್ವಗಳ ಅನುಯಾಯಿಗಳಾದ್ದರಿಂದ ಅನ್ಯ ಮತದ ಲೋಪದೋಷಗಳನ್ನು ತೋರಿಸಿ ನಿರಾಕರಿಸುತ್ತಾ, ಮಧ್ವಾಚಾರ್ಯರ ದ್ವೈತ ತತ್ವಗಳನ್ನು ಮತ್ತೆ ಮತ್ತೆ ಸಮರ್ಥಿಸುತ್ತಾರೆ. ಶ್ರೀಪಾದರಾಯರು ಮಧ್ವನಾಮದಲ್ಲಿ

**ಸರ್ವೇಶ ಹರಿ ವಿಶ್ವ ಎಲ್ಲ ತಾ ಪುಸಿಯೆಂಬ**
**ದುರ್ವಾದಿಗಳ ಮತವ ನೆರೆ ಖಂಡಿಸಿ**
**ಶರ್ವಾದಿ ಗೀರ್ವಾಣ ಸಂತತಿಯಲಿ**

ಎಂದು ಪರಮತವನ್ನು ನಿರಾಕರಿಸುತ್ತಾ ಮಧ್ವಮತವನ್ನು ಸಮರ್ಥಿಸಿದ್ದಾರೆ.

'ಮರುದಂಶರ ಮತ ಪಿಡಿಯದೆ ಇಹಪರದಲಿ ಸುಖವಿಲ್ಲ ಸಾರ ಮಧ್ವಶಾಸ್ತ್ರವೋದದೆ ಗುರತಾರತಮ್ಯ ಜ್ಞಾನಪುಟ್ಟದು'[೨೯]

ಎಂದು ಅವರು ಹೇಳಿರುವ ಮಾತು ಮಧ್ವಮತ ಮತ್ತು ತತ್ವದ ಬಗ್ಗೆ ಅವರಿಗಿರುವ ನಿಷ್ಠೆ ಮತ್ತು ಶ್ರದ್ಧೆಯನ್ನು ತೋರಿಸುತ್ತದೆ.

ವ್ಯಾಸರಾಯರು 'ಸಾರಿರೊ ಡಂಗುರವ ನಮ್ಮ ನಮ್ಮ ಭಾರತೀರಮಣ ವಾಯುವೆ ಜಗದ್ಗುರುವೆಂದು ಎಂದು ಆರಂಭವಾಗುವ ಕೀರ್ತನೆಯಲ್ಲಿ ಅವತಾರತ್ರಯವನ್ನು ವರ್ಣಿಸುತ್ತಾ ಕಡೆಯ ನುಡಿಯಲ್ಲಿ ಕಲಿಯುಗದಲಿ ಮಧ್ವಾಚಾರ್ಯರಾಗಿ ಜನಿಸಿ ಮಾಡಿದ ಸಾಧನೆಯನ್ನು ಕುರಿತು ಈ ರೀತಿ ಚಿತ್ರಿಸಿದ್ದಾರೆ.

**ಬಳಿಕ ಇಪ್ಪತ್ತೊಂದು ದುರ್ಭಾಷ್ಯಂಗಳ**
**ಹಳಿದು ವೇದಾಂತ ಶಾಸ್ತ್ರಂಗಳಲಿ**
**ಉಳುಹಿ ವೈಷ್ಣವ ಮತವನವನಿಯೊಳಗೆ ನಮ್ಮ**
**ಸಲಹುವ ಮಧ್ವೇಶ ಕೃಷ್ಣ ಪ್ರಿಯನೆಂದು**೬೦

ಮಧ್ವಾಚಾರ್ಯರು ಅನ್ಯಮತಗಳನ್ನು ನಿರಾಕರಿಸಿ, ವೈಷ್ಣವ ಮತವನ್ನು ಸ್ಥಾಪಿಸಿ, ಹರಿಸರ್ವೋತ್ತಮತ್ವವನ್ನು ಸಾರಿರುವುದನ್ನು ಒಂದೇ ನುಡಿಯಲ್ಲಿ ಅಡಕಗೊಳಿಸಿದ್ದಾರೆ.

ಗುಂಡಕ್ರಿಯೆ, ಹರಿಸರ್ವೋತ್ತಮಸಾರ, ಸ್ವಪ್ನಪದ ಮುಂತಾದ ದೀರ್ಘಕೃತಿಗಳಲ್ಲಿ ವಾದಿರಾಜರು ಅನ್ಯಮತವನ್ನು ನಿರಾಕರಿಸಿ ಸ್ವಮತ ಪ್ರತಿಪಾದನೆ ಮಾಡಿದ್ದಾರೆ. ಅದಲ್ಲದೆ ಅವರ ಬಿಡಿ ಕೀರ್ತನೆಗಳಲ್ಲೂ ಮಾಧ್ವಮತ ನಿಷ್ಠೆಯನ್ನು ಕಾಣಬಹುದು. 'ಗುರು ಮಧ್ವಶಾಸ್ತ್ರವೇ ಸಕಲ ಶಾಸ್ತ್ರಧಿಕೆಂದು ಶಿರವರಿದು ಮುಂದಿರಸಲೆ' ಎಂಬ ಅವರ ನುಡಿಯಲ್ಲಿ ಮಧ್ವಮತದಲ್ಲಿ ಅವರಿಗಿರುವ ದೃಢವಾದ ನಂಬಿಕೆಯನ್ನು ಕಾಣಬಹುದು.

ಹರಿದಾಸ ಯತಿಗಳು ಮತ್ತು ಹರಿದಾಸರು ರಾಮಾಯಣ, ಮಹಾಭಾರತ, ವೇದ, ಉಪನಿಷತ್ತು, ಪುರಾಣ, ಭಗವದ್ಗೀತೆಯ ಅಭಿಪ್ರಾಯಗಳನ್ನು ಧಾರಾಳವಾಗಿ ಬಳಸಿಕೊಂಡು ಹರಿಸರ್ವೋತ್ತಮತ್ವವನ್ನು ಸಾಧಿಸುತ್ತಾರೆ. ಅವರು "ತಮ್ಮ ಸಿದ್ಧಾಂತವನ್ನು ಮಂಡಿಸುವಾಗ ಸಾಂಪ್ರದಾಯಿಕವಾಗಿ ಪಂಚಭೇದ, ತಾರತಮ್ಯ, ಜಗತ್‌ಸತ್ಯತ್ವಗಳನ್ನು ನಿರೂಪಿಸಿದರೂ ಅವರು ಹೆಚ್ಚಿನ ಮಹತ್ವ ಕೊಟ್ಟಿರುವುದು ಹರಿ ಸರ್ವೋತ್ತಮತ್ವಕ್ಕೆ ತಾರತಮ್ಯ ಸಿದ್ಧಾಂತವನ್ನು ಹರಿಸರ್ವೋತ್ತಮತ್ವದಲ್ಲೇ ಅಡಕಗೊಳಿಸಿದ್ದಾರೆ".೬೧

"ಮಧ್ವಸಿದ್ಧಾಂತದಲ್ಲಿ ಹರಿ ಸರ್ವೋತ್ತಮತ್ವವನ್ನು ಸ್ಥಾಪಿಸಲು ಶ್ರೀ ಮಧ್ವಾಚಾರ್ಯರು ಎಷ್ಟು

ಶ್ರಮಿಸಿರುವರೋ ಅದರ ಸಾರಾಂಶವನ್ನು ಕನ್ನಡದಲ್ಲಿ ಹೇಳಲು ಹರಿದಾಸರು ಅಷ್ಟೇ ಎಚ್ಚರಿಕೆಯನ್ನು ವಹಿಸಿರುವರು"[೨] ಎಂಬ ಜಿ. ವರದರಾಜರಾವ್ ಅವರ ಅಭಿಪ್ರಾಯ ಒಪ್ಪುವಂತಹುದು. ಒಟ್ಟಿನಲ್ಲಿ ಹರಿದಾಸರು ತತ್ವ ನಿರೂಪಣೆಯಲ್ಲಿ ಕನ್ನಡ ಭಾಷೆಯನ್ನು ಬಳಸಿ ಮಧ್ವಸಿದ್ಧಾಂತವನ್ನು ಸಾಮಾನ್ಯರಿಗೂ ತಲುಪಿಸಿದರೆಂಬುದು ಗಮನಾರ್ಹ ವಿಷಯವಾಗಿದೆ.

**೫.೪ ದಶಾವತಾರ ಚಿತ್ರಣ**

ಭಗವದ್ಗೀತೆಯಲ್ಲಿ ಶ್ರೀಕೃಷ್ಣನು

'ಯದಾ ಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ
ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಕಾಮ್ಯಹಂ'

ಎಂದು ಹೇಳಿದ್ದಾನೆ. ಭೂಮಿಯ ಮೇಲೆ ದುಷ್ಟ ಶಕ್ತಿಗಳ ಉಪಟಳ ಹೆಚ್ಚಾದಾಗ, ದುಷ್ಟರನ್ನು ಶಿಕ್ಷಿಸಿ ಶಿಷ್ಟರನ್ನು ರಕ್ಷಿಸಲು ಭಗವಂತ ಅನೇಕ ಅವತಾರಗಳನ್ನು ತಾಳಿದ. ಹೀಗೆ ವಿಷ್ಣುವು ತನ್ನ ಲೀಲೆಗಳನ್ನು ತೋರಲು ಅನೇಕ ಅವತಾರಗಳನ್ನು ಮಾಡಿದ್ದರೂ, ಅವುಗಳಲ್ಲಿ ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ಭಾರ್ಗವ, ರಾಮ, ಕೃಷ್ಣ, ಬುದ್ಧ, ಕಲ್ಕಿ ಈ ದಶಾವತಾರಗಳು ವಿಶೇಷವಾಗಿ ಪ್ರಾಮುಖ್ಯತೆಯನ್ನು ಪಡೆದುಕೊಂಡಿವೆ. ಶ್ರೀಪಾದರಾಜರಿಂದ ಹಿಡಿದು ಸಾಮಾನ್ಯವಾಗಿ ಎಲ್ಲಾ ಹರಿದಾಸರೂ ಸಹ ತಮ್ಮ ಕೀರ್ತನೆಗಳಲ್ಲಿ ಅವಕಾಶ ಸಿಕ್ಕಿದೆಡೆಗಳಲ್ಲಿ ದಶಾವತಾರವನ್ನು ಬಿಡಿಬಿಡಿಯಾಗಿ ಇಲ್ಲವೇ ಇಡಿಯಾಗಿ ನಿರೂಪಿಸಿರುವುದನ್ನು ಕಾಣಬಹುದು. ಸೂಕ್ಷ್ಮವಾಗಿ ಅವಲೋಕಿಸಿದರೆ ದಶಾವತಾರದಲ್ಲಿ ಜೀವವಿಕಾಸವನ್ನು ಗಮನಿಸಬಹುದು. ಶ್ರೀಹರಿಯು ಮೊದಲನೆಯ 'ಮತ್ಸ್ಯಾವತಾರದಲ್ಲಿ ಸೋಮಕನೆಂಬ ರಾಕ್ಷಸನು ಜ್ಞಾನಕ್ಕೆ ಆಕರವಾಗಿದ್ದ ವೇದಗಳನ್ನು ಕದ್ದೊಯ್ದು ಜಲದಲ್ಲಿ ಅಡಗಿಸಿಟ್ಟಿದ್ದಾಗ ವಿಷ್ಣುವು ಮತ್ಸ್ಯಾವತಾರವನ್ನು ತಾಳಿ ವೇದಗಳನ್ನು ಸಂರಕ್ಷಿಸಿ ಮಹತ್ಕಾರ್ಯ ಮಾಡಿದನು. ಕೂರ್ಮಾವತಾರದಲ್ಲಿ ದೇವ-ದಾನವರು ಅಮೃತಕ್ಕಾಗಿ ವಾಸುಕಿಯನ್ನೇ ಹಗ್ಗಮಾಡಿಕೊಂಡು ಮಥಿಸುತ್ತಿದ್ದಾಗ ಆ ಪರ್ವತ ಮುಳುಗಲಾರಂಭಿಸಿತು. ಆಗ ವಿಷ್ಣುವು ಕೂರ್ಮ ರೂಪದಿಂದ ಬಂದು ಆ ಪರ್ವತವನ್ನು ತನ್ನ ಬೆನ್ನಮೇಲೆ ಹೊತ್ತು, ಜಗತ್ತಿನ ಸೃಷ್ಟಿಗೆ ಆಗುತ್ತಿದ್ದ ವಿಪತ್ತನ್ನು ತಪ್ಪಿಸುತ್ತಾನೆ. ಮೂರನೆಯ 'ವರಾಹವತಾರ'ದಲ್ಲಿ ಹಿರಣ್ಯಾಕ್ಷನೆಂಬ ರಾಕ್ಷಸನು ಭೂಮಿಯನ್ನು ಚಾಪೆಯಂತೆ ಸುತ್ತಿಕೊಂಡು

ಅಪಹರಿಸಿ ಸಮುದ್ರವನ್ನು ಪ್ರವೇಶಿಸುತ್ತಾನೆ. ಆಗ ವಿಷ್ಣುವು ವರಾಹ ರೂಪವನ್ನು ತಾಳಿ ತನ್ನ ಕೋರೆಹಲ್ಲುಗಳಿಂದ ಹಿರಣ್ಯಾಕ್ಷನನ್ನು ಕೊಲ್ಲುತ್ತಾನೆ. ಮುಂದಿನ ನರಸಿಂಹಾವತಾರ ವಿಶೇಷವಾದುದು. ಹಿರಣ್ಯಕಶಪು ಬ್ರಹ್ಮದೇವರಿಂದ ಹಗಲಾಗಲಿ, ರಾತ್ರಿಯಾಗಲಿ, ಮನುಷ್ಯರಿಂದಾಗಲಿ, ಮೃಗಗಳಿಂದಾಗಲಿ, ತನಗೆ ಸಾವು ಬರಬಾರದೆಂದು ವರ ಪಡೆದಿದ್ದ. ಅದಕ್ಕಾಗಿ ವಿಷ್ಣುವು ಹಿರಣ್ಯಕಶಿಪುವಿನ ಸಂಹಾರಕ್ಕೆ ನರನೂ ಅಲ್ಲದ ಮೃಗವೂ ಅಲ್ಲದ ಈ ಎರಡೂ ರೂಪಗಳ ಮಿಶ್ರಣದ ವಿಶೇಷ ನರಸಿಂಹಾವತಾರವನ್ನು ತಾಳಿ ಹಗಲೂ ಅಲ್ಲದ ರಾತ್ರಿಯೂ ಅಲ್ಲದ ಸಂಜೆಯ ವೇಳೆಯಲ್ಲಿ ಹಿರಣ್ಯಕಶಿಪುವನ್ನು ಸಂಹರಿಸಿದ. ನಂತರ ವಾಮನಾವತಾರದಲ್ಲಿ ಬಾಲವಟುವಿನ ರೂಪವನ್ನು ತಾಳಿ ಬಲಿಚಕ್ರವರ್ತಿಯಿಂದ ಮೂರಡಿ ಭೂಮಿಯನ್ನು ದಾನವನ್ನಾಗಿ ಬೇಡಿ ಪಡೆದು ಆಕಾಶ, ಭೂಮಿಗಳನ್ನು ಎರಡೇ ಹೆಜ್ಜೆಗಳಿಂದ ವ್ಯಾಪಿಸಿ ಮೂರನೇ ಹೆಜ್ಜೆಯನ್ನು ಬಲಿಯ ತಲೆಯಮೇಲಿರಿಸಿ ಅವನನ್ನು ಪಾತಾಳಕ್ಕೆ ಮೆಟ್ಟುತ್ತಾನೆ. ಮುಂದೆ 'ಪರಶುರಾಮಾವತಾರ'ದಲ್ಲಿ ವೇದಮಾರ್ಗವನ್ನು ಅನುಸರಿಸದೆ, ಬ್ರಾಹ್ಮಣರಿಗೆ ಉಪಟಳಕೊಡುತ್ತಾ ಅಧಿಕಾರದ ಅಹಂಕಾರದಿಂದ ಮೆರೆಯುತ್ತಿದ್ದ ಕ್ಷತ್ರಿಯರ ಸೊಕ್ಕನ್ನು ಅಡಗಿಸುವುದನ್ನು ಕಾಣುತ್ತೇವೆ. ಈ ಅವತಾರದ ಮತ್ತೊಂದು ವಿಶೇಷವೆಂದರೆ ಇಲ್ಲಿ ವಿಷ್ಣುವಿನ ಎರಡು ಅವತಾರಗಳು ಮುಖಾಮುಖಿಯಾಗಿರುವುದನ್ನು ಕಾಣುತ್ತೇವೆ. "ಶ್ರೀ ಮಧ್ವಾಚಾರ್ಯರು ಪರಶುರಾಮಾವತಾರವನ್ನು ಸಮಾಪ್ತಿ ಮಾಡುವಲ್ಲಿ ಶ್ರೀರಾಮನು ವಹಿಸಿದ ಪಾತ್ರದ ಔಚಿತ್ಯವನ್ನು ಬಹಳ ಗಹನವಾಗಿ ತೋರಿಸಿಕೊಡುವರು. ಈ ಎರಡೂ ವಿಷ್ಣುವಿನ ಅವತಾರಗಳೇ ಆದುದರಿಂದ ಈ ಪರಸ್ಪರ ಪ್ರತಿಸ್ಪರ್ಧೆಗೆ ಕಾರಣವೇನು ಎನ್ನುವ ಪ್ರಶ್ನೆಯನ್ನು ಬಹಳ ಪಾರಮಾರ್ಥಿಕವಾಗಿ ಪರಿಹರಿಸಿರುವರು. ಪರಶುರಾಮನಲ್ಲಿ ಹುದುಗಿದ್ದ ಅತುಲಾಖ್ಯನೆಂಬ ಅಸುರನನ್ನು, ಪರಶುರಾಮನ ಅಭೀಷ್ಟದಂತೆಯೇ ಸಂಹರಿಸಿದನೆಂದೂ, ಆ ಬಳಿಕ ಸಂತೃಪ್ತನಾದ ಪರಶುರಾಮ ರಾಮನಲ್ಲಿಯೇ ಅಂತರ್ಗತನಾದನೆಂದೂ ವಿಶದಪಡಿಸುತ್ತಾರೆ"[೩೩]. ಮುಂದೆ ರಾಮಾವತಾರದಲ್ಲಿ ಸುಬಾಹು, ಮಾರೀಚ, ಖರ, ದೂಷಣ, ತ್ರಿಶಿರಸ್ಸು, ಕುಂಭ, ನಿಕುಂಭ, ದುಮ್ರಾಕ್ಷ, ದುರ್ಮುಖ, ದೇವಾಂತಕ, ನರಾಂತಕ, ಇಂದ್ರಜಿತ್ತು, ಕುಂಭಕರ್ಣ, ರಾವಣ ಮೊದಲಾದ ರಾಕ್ಷಸರನ್ನು ಕೊಂದು ಶಬರಿ,ಅಹಲ್ಯೆ ಸುಗ್ರೀವ, ವಿಭೀಷಣ ಮೊದಲಾದ ಭಕ್ತರನ್ನು ಉದ್ಧರಿಸುತ್ತಾನೆ. ಮುಂದೆ ಕೃಷ್ಣಾವತಾರದಲ್ಲಿ ಲೋಕ ಕಂಟಕರಾಗಿದ್ದ ಕಂಸನೇ ಮೊದಲಾದ ಅನೇಕ ರಾಕ್ಷಸರನ್ನು

ಕೊಲ್ಲುತ್ತಾನೆ. ತ್ರಿಪುರಾಸುರರ ಸಂಹಾರಕ್ಕಾಗಿಯೇ ಭೌದ್ಧಾವತಾರ ತಾಳಿದ. (ಈ ದಶಾವತಾರದ ಪೌರಾಣಿಕ ಬುದ್ಧ ಹಾಗೂ ಚಾರಿತ್ರಿಕ ಬುದ್ಧ ಇಬ್ಬರೂ ಒಬ್ಬರೇ ಎಂಬ ತಪ್ಪು ಕಲ್ಪನೆ ಇದೆ). "ಕಡೆಯದಾಗಿ ಕಲಿಯುಗದ ಕಲುಷವನ್ನೆಲ್ಲ ತೊಡೆದು ಹಾಕಲು ವೀರ ಯೋಧನಂತೆ ತೇಜಿಯೇರಿ ಅವರಿಸಲಿರುವ ಕಲ್ಕ್ಯಾವತಾರದ ಕಲ್ಪನೆಯೂ ಭವ್ಯವಾಗಿದೆ. ಜಲಚರದಿಂದ ಮೊದಲಾಗಿ, ಮೃಗಮಾನವರ ಆಕೃತಿಗಳ ಮೂಲಕ ಮನುಷ್ಯಾಕೃತಿಯ ಪ್ರಾಧಾನ್ಯವನ್ನು ಕಂಡರೆ ಈ ದಶಾವತಾರಗಳ ನಿರೂಪಣೆಯಲ್ಲಿ ಯಾವುದೋ ವಿಕಾಸತತ್ವ ಅಡಕವಾಗಿರಬಹುದೆಂಬ ವೈಜ್ಞಾನಿಕ ದೃಷ್ಟಿಯೂ ಪರಿಶೀಲನಾರ್ಹವಾದುದು. ಎಸ್. ಕೆ. ರಾಮಚಂದ್ರರಾಯರು 'ದಶಾವತಾರಗಳು ಚಿತ್‌ಸ್ವರೂಪ ದಶೇಂದ್ರಿಯಗಳಿಗೆ ಪ್ರವರ್ತಕ' ಎಂದು ಅಭಿಪ್ರಾಯಪಡುತ್ತಾರೆ. ನಮ್ಮ ಹರಿದಾಸರಿಗೆ ದಶಾವತಾರಗಳಲ್ಲಿ ವಿಶೇಷ ಆದರವುಂಟಾಗಲು ಬೇರೊಂದು ಕಾರಣವನ್ನೂ ನಾವು ಮನಗಾಣಬಹುದು. 'ದ್ವಾದಶಸ್ತೋತ್ರದಲ್ಲಿ' ಶ್ರೀ ಮಧ್ವಾಚಾರ್ಯರು ದಶಾವತಾರಗಳನ್ನು ಕುರಿತಂತೆ ಎರಡು ಬಾರಿ ಸ್ತುತಿಸಿರುವರು. ಈ ನಿರೂಪಣ ವೈವಿಧ್ಯ ಹರಿದಾಸರ ಹಾಡುಗಳಲ್ಲಿ ಹಲವಾರು ರೀತಿಗಳಲ್ಲಿ ಹೊರಹೊಮ್ಮಿದೆ"[೬೮]. ಬೇರೆ ಬೇರೆ ಕಾಲ ಘಟ್ಟಗಳಲ್ಲಿ ನಡೆದ ವಿಷ್ಣುವಿನ ಹತ್ತು ಅವತಾರಗಳನ್ನು ಒಂದೆಡೆ ಜೋಡಿಸಿ ಕೀರ್ತನೆಗಳನ್ನು ರಚಿಸಿದ್ದಾರೆ. ಕೆಲವೊಮ್ಮೆ ಬಿಡಿ ಬಿಡಿಯಾಗಿಯೂ, ಕೆಲವೊಮ್ಮೆ ದಶಾವತಾರಗಳಲ್ಲಿ ಕೆಲವೇ ಅವತಾರಗಳನ್ನು ತೆಗೆದುಕೊಂಡು ಕೀರ್ತನೆಗಳನ್ನು ರಚಿಸಿರುವುದೂ ಉಂಟು. ಶ್ರೀಪಾದರಾಜರು 'ಲಾಲಿ ಗೋವಿಂದ ಲಾಲಿ ಕೌಸಲ್ಯ ಬಾಲ ಶ್ರೀರಾಮ ಲಾಲಿ'[೬೯] ಎಂದು ಮೊದಲಾಗುವ ನಿಡಿದಾದ ಲಾಲಿಪದವೊಂದರಲ್ಲಿ ಪರಮಾತ್ಮನನ್ನು ಶಿಶುವೆಂದು ಕಲ್ಪಿಸಿ, ಅವನ ಮಹಿಮೆಗೆ ತಕ್ಕಂತೆ ಕನಕರತ್ನಗಳಿಂದ ನಿರ್ಮಿತವಾದ ಕಾಲುಗಳು, ನಾಲ್ಕು ವೇದಗಳನ್ನೇ ಸರಪಳಿಯಾಗುಳ್ಳ ಭೂಮಂಡಲವನ್ನೇ ಹಲಗೆಯನ್ನಾಗಿ ಮಾಡಿ ತೊಟ್ಟಿಲಲ್ಲಿಟ್ಟು ತೂಗುವ ಸುಂದರವಾದ ಚಿತ್ರ ಇಲ್ಲಿದೆ. ಲಾಲಿ ಪದವನ್ನು ನೆಪಮಾಡಿ ದಶಾವತಾರದ ಪ್ರತಿಯೊಂದು ಅವತಾರದ ಹೆಸರನ್ನು ಸ್ಪಷ್ಟವಾಗಿ ಒಂದೊಂದು ನುಡಿಯಲ್ಲಿ ಹೇಳಿದ್ದಾರೆ. ಇವರೇ ರಚಿಸಿರುವ ಇನ್ನೊಂದು ಜೋಗುಳ ಪದದಲ್ಲಿ ಮೂರು ನುಡಿಗಳಲ್ಲಿ ಸಂಕ್ಷಿಪ್ತವಾಗಿ ದಶಾವತಾರವನ್ನು ಚಿತ್ರಿಸಿದ್ದಾರೆ.

ಜೋ ಜೋ ಜೋ ಜೋ ಜೋ ರಂಗಧಾಮ
ಜೋ ಜೋ ಜೋ ಜೋ ಜೋ ರಣಭೀಮ ಪ

ಜೋ ಜೋ ಭಕ್ತರ ಕಷ್ಟನಿರ್ಧೂಮ
ಜೋ ಜೋ ದಶರಥ ರಾಮ ನಿಸ್ಸೀಮ ಅ.ಪ.

ಭೂಮಿಯ ಚಿನ್ನದ ತೊಟ್ಟಿಲ ಮಾಡಿ
ಸೋಮಸೂರ್ಯರೆಂಬ ಕಲಶವ ಹೂಡಿ
ನೇಮದಿ ವೇದಗಳ ಸರಪಳಿ ಮಾಡಿ
ಆ ಮಹಾಕಾಶಕ್ಕೆ ಕೊಂಡಿಗಳ ಹಾಕಿ

..........................................................
ತಮನ ಮರ್ದಿಸಿ ವೇದತತಿಗಳನು ತಂದೆ
ಸುಮನಸರಿಗಾಗಿ ಮಂದರಪೊತ್ತು ನಿಂದೆ
ಕ್ಷಮೆಗಾಗಿ ಪೋಗಿ ಹಿರಣ್ಯಕನ ಕೊಂದೆ
ನಮಿಸಿ ಕರೆದರೆ ಕಂಬದಿಂದ್ದೊರಟು ಬಂದೆ

ತಳನಾಗಿ ಬಲಿಯ ದಾನವ ಬೇಡ್ದೆ
ಪರಶು ಧರಿಸಿ ಕ್ಷತ್ರಿಯರ ಸವರಿದೆ
ದುರುಳ ರಾವಣನ ಶಿರವ ಚೆಂಡಾಡಿದೆ
ಚರಿಸಿ ಮನೆಗಳ ಪಾಲ ಮೊಸರನ್ನು ಕುಡಿದೆ

ಬದ್ಧನಾಗಿ ಪತಿವ್ರತೆರನಾಳಿದೆಯಲ್ಲ
ಮುದ್ದು ತುರಗವನೇರಿ ಕಲ್ಕ್ಯನಾದ್ಯಲ್ಲ
ಪದ್ಮನಾಭ ಸರಿ ಭಕ್ತವತ್ಸಲ
ನಿದ್ರೆಯ ಮಾಡಯ್ಯ ಶ್ರೀ ರಂಗವಿಠಲ[೩]

ಹೀಗೆ ಇನ್ನು ಅನೇಕ ಕೀರ್ತನೆಗಳಲ್ಲಿ ಶ್ರೀಪಾದರಾಜರು ದಶಾವತಾರವನ್ನು ಚಿತ್ರಿಸಿದ್ದಾರೆ. ವ್ಯಾಸರಾಯರು ಕೂಡ 'ರಂಗ ಬಾರ ಬಾಲೆ ಕುರಂಗನಯನೆ ಕೇಳೆ'[೪] ಎಂದು ಆರಂಭವಾಗುವ ಕೀರ್ತನೆಯಲ್ಲಿ ದಶಾವತಾರದ ಪ್ರತಿಯೊಂದು ಅವತಾರವನ್ನು ಕುರಿತು ಚಿತ್ರಿಸಿದ್ದಾರೆ. ಅಲ್ಲದೆ ಒಂದು ನುಡಿಯಲ್ಲೇ ಸಂಕ್ಷೇಪವಾಗಿಯೂ ಚಿತ್ರಿಸಿದ್ದಾರೆ.

ಶರಣು ಮತ್ಸ್ಯನೆ ಕೂರ್ಮ ಕ್ರೋಡ
ನರಹರಿ ವಟು ಭಾರ್ಗವ
ಶರಣು ರಾಘವ ಕೃಷ್ಣ ಬುದ್ಧ
ಶರಣು ಕಲ್ಕಿ ರೂಪನೆ

ವಾದಿರಾಜರು ತಮ್ಮ ಅನೇಕ ಕೀರ್ತನೆಗಳಲ್ಲಿ ವಿಷ್ಣುವಿನ ದಶಾವತಾರವನ್ನು ವೈವಿಧ್ಯಮಯವಾಗಿ

ಚಿತ್ರಿಸಿದ್ದಾರೆ. ದಶಾವತಾರಗಳನ್ನು ಚಿತ್ರಿಸುವುದರ ಮೂಲಕ ಹರಿಯ ಪಾರಮ್ಯ ಅವನ ಲೀಲಾವಿನೋದಗಳನ್ನು ಒತ್ತಿ ಹೇಳುವುದು ವಾದಿರಾಜರ ಉದ್ದೇಶ. ಸಂಸ್ಕೃತದಲ್ಲಿ ಅಶ್ವಧಾಟಿಯಲ್ಲಿ ೩೪ ವೃತ್ತಗಳಲ್ಲಿ 'ದಶಾವತಾರ ಸ್ತುತಿ' ಎಂಬ ಪ್ರೌಢಗ್ರಂಥವನ್ನು ರಚಿಸಿರುವ ವಾದಿರಾಜರು ಕನ್ನಡದಲ್ಲಿ ಅನೇಕ ಬಗೆಯಲ್ಲಿ ದಶಾವತಾರವನ್ನು ರಚಿಸಿದ್ದಾರೆ. ಇದು ವಾದಿರಾಜರ ನಿರೂಪಣಾ ಕಲೆಗೆ ಉತ್ತಮ ನಿದರ್ಶನವಾಗಿದೆ.

ಬಾಲನೇನೆ ನಿನ್ನ ಮಗನು ಗೋ-
ಪಾಲಕಷ್ಣನು ಪ

ಬಾಲನೇನೆ ನಿನ್ನಮಗನು
ಬಾಲಕಿಯರಾಲಯ ಪೊಕ್ಕು
ಶೀಲಗೆಡಿಸಿ ಸಾಲದೆ ಗೋ-
ಕುಲವನು ಸೂರೆಮಾಡಿದ ಅ.ಪ.

ಕಾಲು ಇಲ್ಲದೆ ನಡೆವನೀತ ಮೇಲುಗಿರಿಯ ಬೆನ್ನಲಾಂತ
ಮೂಲಬೇರ ಮೆಲ್ಲುವಾತ ಜ್ವಾಲರೂಪಿ ಸ್ಥೂಲಕಾಯ
ಬಾಲನಾಗಿ ಭೂಮಿಬೇಡಿದ ಹಾಲು ಕುಡಿಸಿದ ತಾಯ
ತಲೆಯ ಎರವು ಮಾಡಿದ ವಲ್ಕಲವನುಟ್ಟು ಅಡವಿ
ಆಲಯವ ತಿರುಗಿದ ಶ್ರೀರಾಮಚಂದ್ರ
ನೀಲವರ್ಣ ನಿಗಮಗೋಚರ ವೇಲಾಪುರದ ಸೋರುಮುಡಿಯ
ಬಾಲೆಯನು ಸೋಲಿಸಿ ಕಾಲದಲ್ಲಿ ಕಲ್ಕ್ಯನಾದ

ಮಡುವಿನಲ್ಲಿ ಅಡಗಿಯಿರುವ ಪೊಡವಿ ದೊಡ್ಡನೆತ್ತಿ ಪೊರೆವ
ಅಡವಿಯಲ್ಲಿ ಆಡುತಿರುವ ಕಡುಕ್ರೂರ ಹಿಡಿದ ಹಟವ
ಹುಡುಗನಾಗಿ ಪೊಡವಿ ಬೇಡಿದ ಕೊಡಲಿ ಪಿಡಿದು
ಕಡಿದು ಕ್ಷತ್ರಿಯರ ಕುಲವ ತರಿದನೆ ರಾವಣಾದಿ
ಪಡೆಯನೆಲ್ಲ ಸಂಹರಿಸಿದ ಶ್ರೀರಾಮಚಂದ್ರ
ತುಡುಗು ಮಾಡಿ ಗಡಿಗೆ ಪಾಲ ಕುಡಿದು ಕಡಹದಲ್ಲಿ ಅಡಗಿ
ಬಿಡದೆ ತ್ರಿಪುರವ್ರತಕೆಡಿಸಿ ಪಿಡಿದು ತೇಜಿಯ ನಡೆಸುತಿಹನು

ನೀರಪೊಕ್ಕು ವೇದತಂದು ಭಾರಪೊತ್ತು ಬೆನ್ನಲಿಟ್ಟು
ಕೋರೆಹಲ್ಲು ತೋರುವ ಕ್ರೂರವದನ ಅಪಾರ ಮಹಿಮ
ಮೂರು ಪಾದ ಭೂಮಿ ಬೇಡಿದ ವಿಪ್ರರ ಕರೆಸಿ
ಧಾರುಣಿಯನೆ ದಾನ ಮಾಡಿದ ಪರ್ವತಗಳ ತರಿಸಿ
ಶರಧಿಯನ್ನು ಸೇತುಕಟ್ಟಿದನೆ ಶ್ರೀರಾಮಚಂದ್ರ

ಜಾರ ಚೋರ ಮಾರನಯ್ಯ ನಾರೇರಪ್ಪಿ ಮರುಳುಮಾಡಿ
ವಾರಿಜಾಕ್ಷ ಹಯವದನ ಏರಿ ಕುದುರೆ ವೈಹಾಳಿಮಾಡಿದ್ನ॥

ಹೀಗೆ ವಾದಿರಾಜರು ಯಶೋಧೆಗೆ ಅವಳ ಮಗನ ಸಾಹಸ ಕಾರ್ಯಗಳನ್ನೆಲ್ಲ ವರ್ಣಿಸುತ್ತಾ ವಾತ್ಸಲ್ಯ ಭಾವದಲ್ಲಿ ಅವನನ್ನು ದೂರಿದ್ದಾರೆ. ಮೇಲ್ನೋಟಕ್ಕೆ ನಿಂದಿಸಿದಂತೆ ಕಂಡರೂ ಅವರ ಉದ್ದೇಶ ಅವನ ಭಗವಂತನ ಲೀಲಾ ವಿನೋದಗಳನ್ನು ವರ್ಣಿಸುವುದೇ ಆಗಿದೆ. ವಾದಿರಾಜರ ಈ ಕೃತಿಯ ವೈಶಿಷ್ಟ್ಯವೆಂದರೆ ಮೂರು ನುಡಿಗಳಲ್ಲಿಯೂ ಮೂರು ಬಾರಿ ಬಣ್ಣಿಸಿರುವುದು. ವಿಷ್ಣುವಿನ ದಶಾವತಾರವನ್ನು ಎಷ್ಟು ರೀತಿಯಲ್ಲಿ ವರ್ಣಿಸಿದರೂ ಅವರ ಮನಸ್ಸು ತೃಪ್ತಿಯಾಗದು ಮತ್ತೊಂದು ಕೀರ್ತನೆಯಲ್ಲಿ ತಡವಾಗಿ ಬಂದ ಗಂಡನ ಮೇಲೆ ಕೋಪಗೊಂಡ ಸತ್ಯಭಾಮೆ ಅವನಿಗೆ ಬಾಗಿಲು ತೆಗೆಯದೆ ಸತಾಯಿಸುವ ಸಂದರ್ಭದಲ್ಲಿ ಅವರಿಬ್ಬರಿಗೂ ನಡೆಯುವ ಸಂವಾದವನ್ನು ನೆಪಮಾಡಿಕೊಂಡು ದಶಾವತಾರವನ್ನು ಒಂದೊಂದು ನುಡಿಯಲ್ಲೂ ಒಂದೊಂದು ಅವತಾರವನ್ನು ಸುಂದರವಾಗಿ ಚಿತ್ರಿಸಿದ್ದಾರೆ.

ನಾಗಶಯನನು ನಿಮಗಾಗಿಯೆ ಬಂದಿಹೆ
ಬಾಗಿಲ ತೆಗೆಯೆ ಭಾಮೆ ನೀ
ಬಾಗಿಲ ತೆಗೆಯೆ ಭಾಮೆ ಪ

ಕೂಗುವ ನೀನ್ಯಾರೊ ಈಗ ಹೊತ್ತಲ್ಲ
ಕೂಗಬೇಡ ಪೋಗೋ ನೀ
ಕೂಗಬೇಡ ಪೋಗೋ ಅ.ಪ

.....................................................................
ವರ ತುರಗನೇರಿ ಧರೆಯೆಲ್ಲ
ಚರಿಸಿದ ದೊರೆವರ ನಾನೆ ಭಾಮೆ
ಚರಿಸಿದ ದೊರೆವರ ನಾನೆ
ತುರಗದ ಚಾಕರಿಯೊ[ಳಗಿರುವವನಿಗೆ]
ತರುಣಿಯ ಭೋಗವು ಬೇಕೇ ರಂಗ
ತರುಣಿಯ ಭೋಗವು ಬೇಕೇ

ಸರುವ ಪ್ರಾಣಿಗಳ ಉದರದೊಳಿಂಬಿಟ್ಟು
ಶರಧಿಯೊಳ್ಮಲಗಿದವ ಭಾಮೆ ನಾ
ಶರಧಿಯೊಳ್ಮಲಗಿದವ ಭಾಮೆ
ದೊರೆ ಹಯವದನ ಚರಣಕ್ಕೆರಗುತ

ತೆರೆದಳು ಬಾಗಿಲ ಭಾಮೆ ಆಗ
ತೆರೆದಳು ಬಾಗಿಲ ಭಾಮೆ॥

ಮತ್ತೊಂದು ಆರತಿ ಹಾಡಿನಲ್ಲಿ ಮೂರು ನುಡಿಗಳಲ್ಲಿ ಪರೋಕ್ಷವಾಗಿ ದಶಾವತಾರವನ್ನು ನಿರೂಪಿಸಿದ್ದಾರೆ.

ಆನಂದಮಯಗೆ ಚಿನ್ಮಯಗೆ ಆ-
ದಿನಾರಾಯಣಗಾರತಿ ಎತ್ತಿರೆ ಪ

ವೇದವ ತಂದು ಬೆಟ್ಟವ ಪೊತ್ತು ಧರಣಿಯ
ಸಾಧಿಸಿ ಕಂಬದಿ ಬಂದವಗೆ
ಭೂದಾನವ ಬೇಡಿ ನೃಪರ ಸಂಹರಿಸಿದ
ಆದಿಮೂರುತಿಗಾರತಿ ಎತ್ತಿರೆ

ಇಂದುವದನೆ ಸಹಿತ ಅರಣ್ಯದೊಳಗಾಡಿ
ನಂದಗೋಕುಲದಲ್ಲಿ ನಲಿದವಗೆ
ಮಂದಗಮನೆಯರ ಮುಂದೆ ನಿರ್ವಾಣದಿ
ನಿಂದ ಮೂರುತಿಗಾರತಿ ಎತ್ತಿರೆ

ತುರಗವನೇರಿ ದುಷ್ಟರ ಸೀಳಿ ಭಕ್ತರ
ಪೊರೆವ ಮಂಗಳ ಹಯವದನನಿಗೆ
ವರದ ಯಾದವಗಿರಿ ಚೆಲುವನಾರಾಯಣನ
ಚರಣಕಮಲಕಾರತಿ ಎತ್ತಿರೆ॥

ಹೀಗೆ ವಾದಿರಾಜರು ಹರಿಯ ಹಿರಿಮೆಗಳನ್ನು ಅವನ ಲೀಲೆಗಳನ್ನು ದುಷ್ಟರನ್ನು ಶಿಕ್ಷಿಸಿ ಶಿಷ್ಟರನ್ನು ರಕ್ಷಿಸಿದ್ದನ್ನು ವರ್ಣಿಸಲು ದಶಾವತಾರವನ್ನು ವೈವಿಧ್ಯಮಯವಾಗಿ ಬಳಸಿಕೊಂಡಿದ್ದಾರೆ. ವ್ಯಾಸತತ್ವಜ್ಞರೂ ಸಹ ಒಂದು ಕೀರ್ತನೆಯ ಮೂರು ನುಡಿಗಳಲ್ಲಿ ದಶಾವತಾರವನ್ನು ಚಿತ್ರಿಸಿದ್ದಾರೆ.

ಹೇಳುತಿ ಕೇಳುತಿ ಏನಿಲ್ಲವೊ
ಆಳಿದಾ ಊಳಿಗನ ಬಾಳಿವಿನ್ನೇನೊ ಪ

ನೀರೊಳಗೆ ತಿರುಗಿ ನೀ ಭಾರ ಬೆನ್ನಲಿ ಪೊತ್ತು
ದೂರದೊಳು ಮುಳುಗಿ ಭೂಭಾರ ನೆಗಹಿ
ಧೀರ ಕರ್ಣವು ಮಂದವೊ ಹ್ಯಾಗೊ ತಿಳಿಯದು
ಘೋರ ದೈತ್ಯನ ಕೊಲ್ಲೊ ಚೀರಾಟವೊ

ಮೇದಿನಿ ಪತಿಯ ತುತಿಸುವ ಭರದಿ
ನೀ ದನುರ್ವೇದಗಳನೋದಿಸುವ ನಿರ್ಭರವೊ
ಕಾದುವ ರಾಕ್ಷಸರ ಕುಲದ ಕೂಗ್ಯಾಟವೊ
ಮೋದದಿ ಗೋಪಿಯರ ಕೋಲಾಟವೊ

ಬತ್ತಲೆ ನಿಂತು ನುಡಿಯಲಿ ಬಾರದೊಯೆಂತೊ
ಹತ್ತಿದ ವಾಜಿಯು ನಿಲ್ಲದೇನೊ
ಇತ್ತ ಬಾರೊ ವಾಸುದೇವವಿಟ್ಠಲರೇಯ
ಮತ್ತೆ ಹೇಳೊ ನಿಲ್ಲೊ ಬಾಯೆಂತಲೆನ್ನ॥

ಶ್ರೀವಿದ್ಯಾರತ್ನಾಕರತೀರ್ಥರು ವಾದಿರಾಜರಂತೆ ಆರತಿ ಹಾಡಿನ ರೂಪದಲ್ಲಿ ದಶಾವತಾರವನ್ನು ಚಿತ್ರಿಸಿದ್ದಾರೆ.

ನೀರಜಾಕ್ಷೇರೆಲ್ಲ ಬಂದು ಮಾರಜನಕಗೆ
ಆರತಿ ಎತ್ತಿರೇ ನಾರಿಮಣಿ ಶ್ರೀ ರುಕ್ಮಿಣಿಮಣಿಗೆ ಪ

ವೇದವನು ಕದ್ದ ಖಳನ ಬೇಧಿಸಿದವಗೆ
ಆದರದಿಂದ ಮಂದರವೆಂಬೋ ಭೂಧರ ತಂದವಗೆ

ಕುಂಭಣಿಯನ್ನು ಬಿಡದೆ ತಂದ ಕುಂಭಿಣಿರಮಣಗೆ
ಕುಂಭದಿ ಬಂದು ದನುಜ ಡಿಂಭನ ಕಾಯ್ದ ನೃಹರಿಗೆ

ಭೂಮಿ ಬೇಡಿದವನಿಗೆ ದುಷ್ಟ ಭೂಮಿಪ ಹರನಿಗೆ
ಕಾಮಿನಿಚೋರನ ಶಿರವ ತರಿದ ಸ್ವಾಮಿ ರಾಮಗೆ

ಪಾಂಡುಸುತರ ಸಲಹಿ ಖಳರ ದಂಡಿಸಿದವಗೆ
ಚಂಡತ್ರಿಪುರರ ಹೆಂಡರ ವ್ರತದ ಖಂಡನೆ ಮಾಳ್ಪಗೆ

ತುರಗವೇರಿ ದುರುಳ ನೃಪರ ತರಿದ ಕಲ್ಕಿಗೆ
ವರದ ನಾಮಗಿರಿ ಶ್ರೀಹರಿಯ ಚರಣಕಮಲಕೆ ॥

ಪ್ರದ್ಯುಮ್ನತೀರ್ಥರೂ ಸಹ ಒಂದು ಕೀರ್ತನೆಯಲ್ಲಿ ಭಗವಂತನನ್ನು ಯಾವ ರೂಪದಲ್ಲಿದ್ದರೂ ನಾನಿನ್ನ ಬಿಡುವುದಿಲ್ಲ ಎಂದು ಹೇಳುತ್ತಾ, ಅವನ ದಶಾವತಾರಗಳನ್ನು ಚಿತ್ರಿಸುತ್ತಾ ಅವನಿಗೆ ಮೊರೆ ಹೋಗಿದ್ದಾರೆ.

ಏನಿದು ರೂಪ ಶ್ರೀ ನರಹರೆ ಪ

ಏನಿದು ರೂಪವೋ ಮನಸಿಜನಯ್ಯನೇ
ನೆನಿಸಿದವರ ಹೃದ್ವನಜದೊಳ್ ಮೆರೆವುದೊ ಅ.ಪ.

ಮಾರನ ಪಿತನೆಂದು ಕರೆಸಿ ಕೊಂಬುವನಿಗೆ
ಮೋರೆಯೊಳ್ ಮೂರು ಕಣ್ಣುಗಳ ಧರಿಸಿರುವುದು

ಪರಮ ಶಾಂತನೆಂದು ಮೆರೆಯುವೀ ಶ್ರುತಿಯೊಳು
ಕ್ರೂರ ರೂಪದಿಂದ ನರರಿಗೆ ತೋರ್ಪುದು॥

ಹೀಗೆ ಶ್ರೀಪಾದರಾಜರಿಂದ ಹಿಡಿದು ಸಾಮಾನ್ಯವಾಗಿ ಎಲ್ಲಾ ಹರಿದಾಸರು ಹರಿದಾಸ ಯತಿಗಳು ಒಂದಲ್ಲ ಒಂದು ವಿಧದಲ್ಲಿ ದಶಾವತಾರವನ್ನು ಚಿತ್ರಿಸಿದ್ದಾರೆ. ಒಂದು ಅಥವಾ ಒಂದೆರಡು ನುಡಿಗಳಲ್ಲಿ ಇಡೀ ದಶಾವತಾರವನ್ನು ಚಿತ್ರಿಸಿದ್ದರೆ, ಮತ್ತೆ ಕೆಲವೊಂದು ಸಂದರ್ಭದಲ್ಲಿ ಒಂದೊಂದು ನುಡಿಯಲ್ಲಿ ಒಂದೊಂದು ಅವತಾರವನ್ನು ಚಿತ್ರಿಸಿದ್ದಾರೆ. ಇಲ್ಲಿ ಎಲ್ಲಾ ಕೀರ್ತನೆಗಳಲ್ಲೂ ವಸ್ತು ದಶಾವತಾರವೇ ಆದರೂ ಪುನರಾವರ್ತನೆ ಎನಿಸದೆ ವೈವಿಧ್ಯಮಯವಾಗಿ ಮೂಡಿ ಬಂದಿದೆ. ಆರತಿ ಹಾಡು, ನಿಂದಾಸ್ತುತಿ, ಬಾಲಕೃಷ್ಣನ ಲೀಲೆಗಳು, ಜೋಗುಳ ಪದ–ಇತ್ಯಾದಿಗಳಿಂದ ದಶಾವತಾರದ ನಿರೂಪಣೆ ವೈಶಿಷ್ಟ್ಯತೆಯನ್ನು ಪಡೆದುಕೊಂಡಿದೆ.

# ಅಧ್ಯಾಯ ೫ ಅಡಿಟಿಪ್ಪಣಿಗಳು

೧. ಡಾ. ಅನಂತಪದ್ಮನಾಭರಾವ್, 'ಹತ್ತೊಂಬತ್ತನೇ ಶತಮಾನದ ಹರಿದಾಸ ಸಾಹಿತ್ಯ", ಪು–೨೫

೨. ಅದೇ, ಪು–೨೫

೩. 'ಶ್ರೀಪಾದರಾಜರ ಮತ್ತು ವ್ಯಾಸರಾಯರ ಕೀರ್ತನೆಗಳು', ಸಮಗ್ರ ದಾಸ ಸಾಹಿತ್ಯ, ಸಂಪುಟ ೧, ಪು–೧೪

೪. ಅದೇ, ಪು–೨೨

೫. ಡಾ. ಟಿ.ಎನ್. ನಾಗರತ್ನ, 'ಶ್ರೀವ್ಯಾಸರಾಯರ ಕೃತಿಗಳು', ಪು–೨೯

೬. 'ಶ್ರೀವ್ಯಾಸರಾಜರ ಮತ್ತು ವ್ಯಾಸರಾಯರ ಕೀರ್ತನೆಗಳು, ಸಮಗ್ರ ದಾಸ ಸಾಹಿತ್ಯ, ಸಂಪುಟ ೧, ಪು–೨೨೨

೭. ಅದೇ, ಪು–೨೨೦

೮. ಅದೇ, ಪು–೧೪೨

೯. 'ಶ್ರೀವಿದ್ಯಾಪ್ರಸನ್ನ ತೀರ್ಥರು ಹಾಗೂ ಇತರ ಯತಿಗಳ ಕೀರ್ತನೆಗಳು', ಸಮಗ್ರ ದಾಸ ಸಾಹಿತ್ಯ, ಸಂಪುಟ ೨೮, ಪು–೧೦೧

೧೦. ಅದೇ, ಪು–೧೨೭

೧೧. ಅದೇ, ಪು–೧೩೦

೧೨. ಅದೇ, ಪು–೩೩೧

೧೩. ಅದೇ, ಪು–೩೩೪

೧೪. ಅದೇ, ಪು–೩೪೨

೧೫. 'ವರಾಹ ತಿಮಪ್ಪ ಹಾಗೂ ಇತರ ದಕ್ಷಿಣ ಕನ್ನಡದವರ ಕೀರ್ತನೆಗಳು', ಸಮಗ್ರ ದಾಸ ಸಾಹಿತ್ಯ, ಸಂಪುಟ ೨೪, ಪು–೮

೧೬. 'ಶ್ರೀಪಾದರಾಜರು ಮತ್ತು ವ್ಯಾಸರಾಯರ ಕೀರ್ತನೆಗಳು', ಸಮಗ್ರ ದಾಸ ಸಾಹಿತ್ಯ, ಸಂಪುಟ ೧, ಪು–೫೮

೧೭. ಅದೇ, ಪು–೨೦೫

೧೮. ಡಾ. ಟಿ.ಎನ್. ನಾಗರತ್ನ, 'ಶ್ರೀ ವಾದಿರಾಜರ ಕೀರ್ತನೆಗಳು', ಪು–೧೪೦

೧೯. 'ಶ್ರೀ ವಿದ್ಯಾಪ್ರಸನ್ನ ತೀರ್ಥರು ಹಾಗೂ ಇತರ ಯತಿಗಳ ಕೀರ್ತನೆಗಳು', ಸಮಗ್ರ ದಾಸ ಸಾಹಿತ್ಯ, ಸಂಪುಟ ೨೮, ಪು–೬೪

೨೦. ಅದೇ, ಪು–೨೩೮

೨೧. ಅದೇ, ಪು–೩೮೪

೨೨. ಡಾ. ಟಿ.ಎನ್. ನಾಗರತ್ನ, 'ಹರಿದಾಸರ ಭಕ್ತಿ ಸ್ವರೂಪ', ಪು–೨೩

೨೩. 'ಶ್ರೀಪಾದರಾಜರು ಮತ್ತು ವ್ಯಾಸರಾಯರ ಕೀರ್ತನೆಗಳು', ಸಮಗ್ರ ದಾಸ ಸಾಹಿತ್ಯ, ಸಂಪುಟ ೧, ಪು–೯೨

೨೪. ಅದೇ, ಪು–೧೯೯

೨೫. 'ಶ್ರೀವಿದ್ಯಾಪ್ರಸನ್ನ ತೀರ್ಥರು ಹಾಗೂ ಇತರ ಯತಿಗಳ ಕೀರ್ತನೆಗಳು', ಸಮಗ್ರ ದಾಸ ಸಾಹಿತ್ಯ, ಸಂಪುಟ ೨೮, ಪು–೬೩

೨೬. ಅದೇ, ಪು–೨೨೯

೨೭. ಅದೇ, ಪು–೨೩೦

೨೮. ಅದೇ, ಪು–೩೮೧

೨೯. 'ಶ್ರೀಪಾದರಾಜರ ಮತ್ತು ಶ್ರೀವ್ಯಾಸರಾಯರ ಕೀರ್ತನೆಗಳು', ಸಮಗ್ರ ದಾಸ ಸಾಹಿತ್ಯ, ಸಂಪುಟ ೧, ಪು– ೫೭

೩೦. ಅದೇ, ಪು–೨೦೪

೩೧. ಡಾ. ಅನಂತಪದ್ಮನಾಭರಾವ್, 'ಹತ್ತೊಂಬತ್ತನೇ ಶತಮಾನದ ಹರಿದಾಸ ಸಾಹಿತ್ಯ, ಪು–೨೫

೩೨. ಡಾ. ವರದರಾಜರಾವ್, 'ಹರಿದಾಸ ಸಾಹಿತ್ಯ ಸಾರ', ಪು–೧೮೫

೩೩. ಅದೇ, ಪು–೨೫೯

೩೪. ಅದೇ, ಪು–೨೫೯, ೬೦

೩೫. 'ಶ್ರೀ ಶ್ರೀಪಾದರಾಜರ ಮತ್ತು ಶ್ರೀ ವ್ಯಾಸರಾಯರ ಕೀರ್ತನೆಗಳು', ಸಮಗ್ರ ದಾಸ ಸಾಹಿತ್ಯ, ಸಂಪುಟ ೧, ಪು–೧೨೧

೩೬. ಅದೇ, ಪು–೧೨೦

೩೭. ಅದೇ, ಪು-೧೯೨

೩೮. ಡಾ. ಟಿ.ಎನ್. ನಾಗರತ್ನ, 'ಶ್ರೀವಾದಿರಾಜರ ಕೀರ್ತನೆಗಳು', ಪು-೩೪೪

೩೯. ಅದೇ, ಪು-೩೩೩

೪೦. ಅದೇ, ಪು-೩೫೬

೪೧. 'ಶ್ರೀ ವಿದ್ಯಾಪ್ರಸನ್ನತೀರ್ಥರು ಹಾಗೂ ಇತರ ಯತಿಗಳ ಕೀರ್ತನೆಗಳು', ಸಮಗ್ರ ದಾಸ ಸಾಹಿತ್ಯ, ಸಂಪುಟ ೨೮, ಪು-೫೮

೪೨. ಅದೇ, ಪು-೧೧೫

೪೩. ಅದೇ, ಪು-೩೭೦

ಅಧ್ಯಾಯ ೬

# ಲೋಕ ನೀತಿ

ಹರಿದಾಸ ಸಾಹಿತ್ಯ ಕ್ಷೇತ್ರದ ಆದ್ಯ ಪ್ರವರ್ತಕರಾದ ಶ್ರೀಪಾದರಾಜರು ಭಕ್ತಿ ಮತ್ತು ತತ್ವಪ್ರತಿಪಾದನೆಗೆ ಕೊಟ್ಟಷ್ಟು ಪ್ರಾಮುಖ್ಯತೆಯನ್ನು ಲೋಕನೀತಿಗೆ ಕೊಟ್ಟಿಲ್ಲವೆಂದು ಹೇಳಬಹುದು. ಅವರು ಆತ್ಮಶೋಧನೆಗೆ ಒಳಪಟ್ಟ ಸಂದರ್ಭದಲ್ಲಿ ತಮ್ಮ ಅಂತರಂಗವನ್ನೇ ತೆರೆದಿಟ್ಟಿದ್ದಾರೆ. ಶ್ರೀಹರಿಯ ಮಹಿಮೆಯನ್ನು ಕೊಂಡಾಡುವಲ್ಲಿ ಭಕ್ತಿ ಪ್ರವಾಹದಲ್ಲಿ ಮಿಂದಿದ್ದಾರೆ. ತಮ್ಮ ಮತದ ತತ್ವಗಳನ್ನು ಪ್ರಚಾರ ಮಾಡುವಲ್ಲಿ ಎಲ್ಲಿಯೂ ಎಲ್ಲೆ ಮೀರಿ ತಾಳ್ಮೆ ಕಳೆದುಕೊಂಡವರಲ್ಲ. ಆದರೆ ಸಮಾಜದ ಕಡೆ ಅವರ ದೃಷ್ಟಿ ಅಷ್ಟಾಗಿ ಹರಿದಿಲ್ಲದಿದ್ದರೂ, ಒಬ್ಬ ಮನುಷ್ಯ ಸದಾಚಾರಿಯಾಗಿ ಬಾಳ್ವೆ ಮಾಡಲು ಅವನ ನಡೆ-ನುಡಿಗಳು ಹೇಗಿರಬೇಕೆಂಬುದರ ಬಗ್ಗೆ ಲೋಕನೀತಿಯನ್ನು ಬೋಧಿಸಿದ್ದಾರೆ. 'ಅಕಟಕಟ ಸಂಸಾರವನು ನೆಚ್ಚಿ ಕೆಡಬ್ಯಾಡ ವಿಕಟದಲಿ ಮಾನವರು ಕೆಟ್ಟರೆಲ್ಲರು ನಿಜ',೧ ಎಂದು ಮೊದಲಾಗುವ ಕೀರ್ತನೆಯಲ್ಲಿ ಸಂಸಾರವನ್ನು ನೆಚ್ಚಿ ಕೆಡಬೇಡಿ, ಐಹಿಕ ಭೋಗ-ಭಾಗ್ಯಗಳನ್ನೇ ನೆಚ್ಚಿ ಅಹಂಕಾರದಿಂದ ಮೆರೆದ ದುಷ್ಟ ನರಕಾಸುರ, ಕಾರ್ತ್ಯವಿರ್ಯಾರ್ಜುನ, ದುರ್ಯೋಧನ, ನಹುಷರ ಉದಾಹರಣೆಗಳನ್ನು ಕೊಟ್ಟು ಅವರಂತೆ ನಡೆಯದೇ ಧ್ರುವ, ವಿಭೀಷಣ, ಹನುಮಂತರು ಹೇಗೆ ಶ್ರೀಹರಿಯನ್ನು ಧ್ಯಾನಿಸಿ ಶಾಶ್ವತ ಸುಖವನ್ನು ಪಡೆದರೆಂದು, ಭಗವಂತ ದುಷ್ಟರನ್ನು ಶಿಕ್ಷಿಸಿ ಶಿಷ್ಟರನ್ನು ಹೇಗೆ ರಕ್ಷಿಸುತ್ತಾನೆಂಬುದನ್ನು ಪುರಾಣ ಪಾತ್ರಗಳ ಮೂಲಕ ಮನಮುಟ್ಟುವಂತೆ ಚಿತ್ರಿಸಿದ್ದಾರೆ.

'ಕಾಳಬೆಳದಿಂಗಳು ಈ ಸಂಸಾರ ಕತ್ತಲೆ ಬೆಳದಿಂಗಳು'೨ ಎಂಬ ಕೀರ್ತನೆಯಲ್ಲಿ ಜೀವನದಲ್ಲಿ ಕತ್ತಲೆ ಬೆಳದಿಂಗಳಿನಂತೆ ಸುಖ-ದುಃಖಗಳೆರಡೂ ಇರುತ್ತದೆ. ರಾಜಾಧಿರಾಜರೂ ಸತ್ಯವಂತರೂ ಆಗಿದ್ದ ಧರ್ಮರಾಯ, ಹರಿಶ್ಚಂದ್ರರಿಗೆ ಕಷ್ಟ ತಪ್ಪಲಿಲ್ಲ. ದ್ರೌಪದಿಯು ವಿರಾಟನ ಅರಮನೆಯಲ್ಲಿ ದಾಸಿಯಾಗಬೇಕಾಯಿತು. ಪರಮಾತ್ಮನಾದ ಶ್ರೀಕೃಷ್ಣನೇ ಅರ್ಜುನನ ಬಂಡಿಗೆ ಬೋವನಾದ ಮೇಲೆ ನಮ್ಮಂತಹವರ ಪಾಡೇನು? ಎಂದು ಮಹಾನಾಯಕರ ಜೀವನವನ್ನು ಅವರು ಎದುರಿಸಿದ ಕಷ್ಟ - ಕೋಟಲೆಗಳನ್ನು ವಿವರಿಸುತ್ತಾ, ಅವೆಲ್ಲವನ್ನು ಎದುರಿಸುವ ಮನೋಧರ್ಮವನ್ನು ಬೆಳೆಸಿಕೊಳ್ಳಬೇಕೆಂದು ಹೇಳುತ್ತಾ, ಸ್ಥೈರ್ಯ ತುಂಬಿದ್ದಾರೆ.

**ಉಂಟಾದ ಕಾಲಕ್ಕೆ ನೆಂಟರು ಇಷ್ಟರು**
**ಬಂಟರಾಗಿ ಬಾಗಿಲ ಕಾಯ್ವರು**
**ಉಂಟಾದತನ ತಪ್ಪಿ ಬಡತನ ಬಂದರೆ**
**ಒಂಟೆಯಂತೆ ಗೋಣ ಮೇಲೆತ್ತುವರು**

ಸರಿಸರಿಯಾಗಿದ್ದರೆ ಪರಿ–ಪರಿ ನೆಂಟರು ಎಂಬಂತೆ ಉಂಟಾದ ಕಾಲಕ್ಕೆ ಎಲ್ಲಾ ನೆಂಟರಿಷ್ಟರೂ ಬಂದು ಬಾಗಿಲನ್ನು ಕಾಯುತ್ತಾರೆ. ಉಂಟಾದತನ ತಪ್ಪಿತೆಂದರೆ ಒಂಟೆಯಂತೆ ಗೋಣನ್ನು ಮೇಲಕೆತ್ತುತ್ತಾರೆ. ಮೂರು ದಿನದ ಈ ಭಾಗ್ಯ ಶಾಶ್ವತವಾದುದಲ್ಲ. ಶ್ರೀಮಂತಿಕೆ ಬಂದಾಗ ಹೆಚ್ಚು ಮೆರೆಯದೆ ವಿವೇಕದಿಂದ ಬಾಳ್ವೆ ನಡೆಸಬೇಕು. 'ನೂರಾರು ಸಾವಿರ ದಂಡವ ತೆತ್ತರೆ ರಂಗವಿಠಲನೆ ಸರಿಯೆಂಬೊರಯ್ಯ' ಎಂದಿದ್ದಾರೆ. ಕಾಲವನ್ನು ವ್ಯರ್ಥವಾಗಿ ಕಳೆಯದೆ 'ಚಿತ್ತಜನಯ್ಯನ ಚಿಂತಿಸು ಮನವೇ ಹೊತ್ತು ಕಳೆಯದೆ ಸರ್ವೋತ್ತಮನ ನೆನೆ ಮನವೆ', ಎಂದು ಉಪದೇಶಿಸಿದ್ದಾರೆ. ಯೌವನದಲ್ಲಿ ಶಕ್ತಿಯಾಗಿದ್ದಾಗಲೇ ಭಗವಂತನ ಸ್ಮರಣೆ ಮಾಡಿದರೆ, ಕಡೆಗಾಲದಲ್ಲಿ ಬುತ್ತಿಯಂತೆ ನಮ್ಮನ್ನು ಕಾಪಾಡಿ ಮುಕ್ತಿ ದೊರೆಯುತ್ತದೆ. ಇಂತ ಮುಕ್ತಿಯನ್ನು ಸಂಪಾದಿಸಲು.

**ಭಕ್ತಿಬೇಕು ವಿರಕ್ತಿ ಬೇಕು ಸರ್ವ**
**ಶಕ್ತಿ ಬೇಕು ಮುಂದೆ ಮುಕ್ತಿಯ ಬಯಸುವಗೆ ಪ**

**ಸತಿ ಅನುಕೂಲ ಬೇಕು ಸುತನಲ್ಲಿ ಗುಣಬೇಕು**
**ಮತಿವಂತನಾಗಬೇಕು ಮತ ಒಂದಾಗಿರಬೇಕು**

**ಜಪದ ಜಾಣುವೆ ಬೇಕು ತಪದ ನೇಮವೆ ಬೇಕು**
**ಉಪವಾಸ ವ್ರತ ಬೇಕು ಉಪಶಾಂತವಿರಬೇಕು**

**ಸುಸಂಗ ಹಿಡಿಯಲಿಬೇಕು ದುಸ್ಸಂಗ ಬಿಡಲಿಬೇಕು**
**ಶ್ರೀರಂಗವಿಠಲನ್ನ ಬಿಡದೆ ನೆರೆ ನಂಬಿರಬೇಕು,,**

ಎಂದು ಎಚ್ಚರಿಕೆ ನೀಡಿದ್ದಾರೆ. ಪ್ರತಿಯೊಬ್ಬ ಮನುಷ್ಯನು ಸನ್ಮಾರ್ಗದಲ್ಲಿ ನಡೆಯಬೇಕಾದರೆ ಅವನಿಗೆ 'ಸತಿ ಅನುಕೂಲಬೇಕು ಸುತನಲ್ಲಿ ಗುಣಬೇಕು, ಮತಿವಂತನಾಗಿರಬೇಕು, ಮತ ಒಂದಾಗಿರಬೇಕು ಇಷ್ಟೆಲ್ಲಾ ಅನುಕೂಲವಿದ್ದಾಗ ಮಾತ್ರ ಅವನ ಜಪ, ತಪ, ಉಪವಾಸ, ವ್ರತಗಳು ಕೈಗೂಡಿ ಮುಕ್ತಿ ದೊರೆಯುತ್ತದೆ ಎಂಬ ಶ್ರೀಪಾದರಾಜರ ನಿಲುವು ಅರ್ಥಪೂರ್ಣವಾಗಿದೆ. 'ಮರೆಯ ಬೇಡವೋ ಹರಿಯ ಮರೆಯಬೇಡವೋ',, ಎಂದು ಹೇಳುತ್ತಾ 'ಹಗಲು ಇರುಳು

ಹಾಳು ಹರಟೆ, ಬಗೆ ಬಗೆ ಉಲ್ಲಾಸತನದಿ ಸುಗುಣೆಯರೊಡನೆ ಸುರತ ಸುಖದಿ ನಗುತ ಕಾಲ ಕಡೆಯಬೇಡ' ಎಂದು ಬೋಧಿಸಿದ್ದಾರೆ.

**ಭೂಷಣಕೆ ಭೂಷಣ ಇದು ಭೂಷಣ**
**ಶೇಷಗಿರಿವಾಸ ಶ್ರೀವರ ವೆಂಕಟೇಶ ಪ**

**ನಾಲಿಗೆಗೆ ಭೂಷಣ ನಾರಾಯಣ ನಾಮ**
**ಕಾಲಿಗೆ ಭೂಷಣ ಹರಿಯಾತ್ರೆಯು**
**ಆಲಿಯಕೆ ಭೂಷಣ ತುಲಸಿ ವೃಂದಾವನ ವಿ**
**ಶಾಲ ಕರ್ಣಕೆ ಭೂಷಣ ವಿಷ್ಣು ಕಥೆಯು**

**ದಾನವೇ ಭೂಷಣ ಇರುವ ಹಸ್ತಂಗಳಿಗೆ**
**ಮಾನವೇ ಭೂಷಣ ಮಾನವರಿಗೆ**
**ಜ್ಞಾನವೇ ಭೂಷಣ ಮುನಿಯೋಗಿವರರಿಗೆ**
**ಮಾನಿನಿಗೆ ಭೂಷಣ ಪತಿಭಕ್ತಿಯು**

**ರಂಗನನು ನೋಡುವುದೇ ಕಂಗಳಿಗೆ ಭೂಷಣ**
**ಮಂಗಳಾಂಗಗೆ ಮಣಿವ ಶಿರ ಭೂಷಣ**
**ಶೃಂಗಾರ ತುಳಸಿ ಮಣಿ ಕೊರಳಿಗೆ ಭೂಷಣ**
**ರಂಗವಿಠಲ ನಿಮ್ಮ ನಾಮ ಅತಿ ಭೂಷಣ**

ಈ ಕೀರ್ತನೆಯಲ್ಲಿ ಎಂದು ಯಾರು ಯಾರಿಗೆ ಯಾವುದು ಭೂಷಭವೆಂದು ಹೇಳುವ ಮೂಲಕ ಸಾರ್ಥಕ ಜೀವನ ನಡೆಸುವ ಬಗೆ ಹೇಗೆಂದು ಧ್ವನಿಪೂರ್ಣವಾಗಿ ಚಿತ್ರಿಸಿದ್ದಾರೆ. ಒಟ್ಟಾರೆ ಸದಾಚಾರ, ಸನ್ನಡತೆ, ಸತ್ಸಂಗಗಳಿಂದ ಪ್ರತಿಯೊಬ್ಬ ಮನುಷ್ಯನು ಹೇಗೆ ಧನ್ಯತೆಯನ್ನು ಪಡೆಯಬಹುದೆಂಬ ಮಾರ್ಗದರ್ಶನವನ್ನು ಲೋಕನೀತಿಯ ಕೃತಿಗಳಲ್ಲಿ ಮಾರ್ಮಿಕವಾಗಿ ಚಿತ್ರಿಸಿದ್ದಾರೆ.

ವ್ಯಾಸರಾಯರೂ ಸಹ ಶ್ರೀಪಾದರಾಜರಂತೆ ಮಧ್ವತತ್ವ ಪ್ರತಿಪಾದನೆಗೆ ಕೊಟ್ಟಷ್ಟು ಪ್ರಾಮುಖ್ಯತೆಯನ್ನು ಲೋಕನೀತಿಗೆ ಕೊಟ್ಟಿಲ್ಲವೆಂದೇ ಹೇಳಬೇಕು. ಆದರೆ ಅವರು ಮಠದ ಪೀಠಾಧಿಪತಿಗಳಾಗಿ ಕಾರ್ಯವನ್ನು ನಿರ್ವಹಿಸುತ್ತಿದ್ದರೆಂಬುದನ್ನು ನಾವು ಮರೆಯುವಂತಿಲ್ಲ. ಆದರೂ ವಿರಳವಾಗಿ ಕೆಲವು ಕೃತಿಗಳಲ್ಲಿ ಉಪದೇಶವಾಣಿಯನ್ನು ಕಾಣಬಹುದು. 'ಕೃಷ್ಣ ಕೃಷ್ಣ ಕೃಷ್ಣಯೆಂದು ಮೂರು ಬಾರಿ ನೆನೆಯಿರೊ ಸಂತೃಪ್ತವಾಗಿ ಮುಕುತಿ ಕೊಟ್ಟು ಮಿಕ್ಕ ಭಾರ

ಹೊರುವನೊ', ಎಂದು ಹೇಳುತ್ತ ಭಗವಂತನ ನಾಮವೊಂದೇ ಸುಲಭೋಪಾಯ ಎಂಬ ಭರವಸೆಯನ್ನು ನೀಡಿದ್ದಾರೆ. ಕ್ಷಣಿಕ ಸುಖಗಳಿಗೆ ಬಲಿಯಾಗಿ ಭಗವಂತನ ನಾಮಸ್ಮರಣೆ ಮಾಡದೆ ನೀಚವೃತ್ತಿಯನ್ನು ಕೈಗೊಂಡವರಿಗೆ 'ಛೀ ಛೀ ಮನವೆ ನಾಚನ ತನುವೆ ನೀಚ ವೃತ್ತಿಯ ಬಿಟ್ಟುನೆನೆ ಕಂಡ್ಯ ಹರಿಯೆ', ಎಂದು ಹೇಳುತ್ತಾ ಅಚ್ಯುತನ ಕಥೆಯನ್ನು ಕೇಳು, ಮಾಧವನ ಸ್ಮರಣೆ ಮಾಡು, ನಾರಾಯಣನ ನಾಮಾಮೃತವನ್ನು ಸವಿ, ಸಿರಿಲಲನೇಶನಂಘ್ರಿಯ ಅಪ್ಪಿಕೊ, ಶ್ರೀಕೃಷ್ಣನಂಘ್ರಿಯೊಳಪ್ಪ ತುಳಸಿಯನಾಘ್ರಾಣಿಸು ಮನವೆ; ಎಂದು ಉಪದೇಶಿಸಿದ್ದಾರೆ.

ಬಿಗಿಯದಿರು ಬಿಗಿಯದಿರು ಎಲೆ ಮಾನವಾ
ಧಿಗಿ ಧಿಗಿ ಧಿಗಿಯೆನುತ ನಿನಗೇಕೆ ಗರ್ವ ಅ

ವಿರಕ್ತಿಯಲಿ ಹನುಮನೆ ವಿವೇಕದಲಿ ವಸಿಷ್ಠನೆ
ಶೂರತನದಲಿ ಶಂತನುತನಯನೇನೊ
ಸ್ಥಿರದಲಿ ತುಂಬುರನೆ ಗೀತದಲಿ ನಾರದನೆ
ಪರಾಶರ ಮುನಿಯೆ ವ್ರತತಿ ಪಟ್ಟದಲ್ಲಿ

ಚೆಲುವಿನಲಿ ರಾಮನೆ ಸತ್ಯದಿ ಹರಿಶ್ಚಂದ್ರನೆ
ಛಲದಲ್ಲಿ ಋಷಿ ವಿಶ್ವಾಮಿತ್ರನೇನೋ
ಬಲದಲ್ಲಿ ವಾಲಿಯೇ ಹಲಧರನೆ ಹಿರಣ್ಯಕನೆ
ಬಿಲು ವಿದ್ಯದಲಿ ಪರಶುರಾಮನೇ ನೀನು

ತ್ಯಾಗದಲಿ ಕರ್ಣನೇ ಭೋಗದಲಿ ಶತಮುಖನೆ
ಯೋಗದಲಿ ಶುಕಸನಕ ಜನಕನೇನೋ
ಭಾಗ್ಯದಲಿ ಬಲಿಚಕ್ರವರ್ತಿಯೋ ದಶಶಿರನೊ
ದೀರ್ಘದಲಿ ಮೇರುವೇ ಮಂದರವೆ ನೀನು

ಭಕ್ತಿಯಲಿ ಭರತನೆ ಭಾವದಲಿ ಲಕ್ಷ್ಮಣನೆ
ಯುಕ್ತಿಯಲಿ ನೀನಿಂದುಸೂತನೇನೊ
ಶಕ್ತಿಯಲಿ ಕಾಲನೆ ಭುಕ್ತಿಯಲಗಸ್ತ್ಯನೆ
ಮುಕ್ತಿ ಪಡೆವಲ್ಲಿ ಖಟ್ವಾಂಗರಾಯನೇನೋ

ಶಾಪದಲಿ ಬ್ರಹ್ಮನೆ ತಾಪದಲಿ ಸೂರ್ಯನೆ
ಕೋಪದಲಿ ಮಹೇಶನೇನೋ ನೀನು
ತಪದಲ್ಲಿ ಹನುಮನೆ ವ್ರತದಿ ರುಕ್ಮಾಂಗದನೆ
ಕೃಪೆಯಲ್ಲಿ ಶ್ರೀಕೃಷ್ಣದೇವನೆ ನೀನು,

ಎಂದು ಮೊದಲಾಗುವ ಕೀರ್ತನೆಯಲ್ಲಿ ಶ್ರೇಷ್ಠರಾದ ಪೌರಾಣಿಕ ಮಾದರಿ ವ್ಯಕ್ತಿತ್ವಗಳ ಸೌಜನ್ಯವನ್ನು ಪರಿಚಯಿಸುತ್ತಾ, ನೀನೇನು ಸಾಧನೆ ಮಾಡಿರುವೆ ಬಿಗಿಯಲು ಎಂದು ಪ್ರಶ್ನಿಸಿರುವಂತಿದೆ. 'ಹರಿದಿನ ಪಾತಕ ಮಾಡಿರುವೆ ದನುಜರ ಕರುಣಕ್ಕೆ ಕಾರಣ ನಂಬೆಲೊ ಮನುಜ'[೧೧] ಎಂದು ಪ್ರಾರಂಭವಾಗುವ ಕೀರ್ತನೆಯಲ್ಲಿ ಏಕಾದಶಿಯ ಮಹಿಮೆಯನ್ನು ಹೇಳಿದ್ದಾರೆ.

**ಗಂಗೆ ಮೊದಲಾದ ತೀರ್ಥಂಗಳಿಣೆಯ – ಶ್ರೀ**
**ರಂಗ ಮೊದಲಾದ ಕ್ಷೇತ್ರವು ಸರಿಯೆ – ಉ**
**ತ್ತುಂಗ ಜಪತಪ ಹೋಮಗಳಿದುರೆ – ಶ್ರೀ**
**ರಂಗನಾಥನ ದಿನದೊಂದುಪವಾಸಕ್ಕೆ**

ಗಂಗೆ ಮೊದಲಾದ ತೀರ್ಥಸ್ನಾನ ಫಲ, ಕ್ಷೇತ್ರದರ್ಶನದ ಫಲ, ಜಪತಪ ಹೇಮಾದಿಗಳ ಫಲ, ಪಾಪ ಪರಿಹಾರವಾಗಿ ಪುಣ್ಯ ಸಂಪಾದನೆಯಾಗಿ ಕಡೆಗೆ ರುಕ್ಮಾಂಗದನಂತೆ ಮುಕ್ತಿ ದೊರೆಯುವುದೆಂದು ಹೇಳಿದ್ದಾರೆ. ಇಂದಿಗೂ ಏಕಾದಶಿ ವೈಷ್ಣವರಿಗೆ ಒಂದು ಉಪವಾಸದ ವ್ರತವಾಗಿ ಮಹತ್ವವನ್ನು ಪಡೆದುಕೊಂಡಿದೆ.

ನೂರಿಪ್ಪತ್ತು ವರ್ಷಗಳ ಕಾಲ ತುಂಬು ಜೀವನ ನಡೆಸಿದ ವಾದಿರಾಜರ ಅನುಭವ ಪರಿಪಕ್ವವಾದುದು ತಾಳ್ಮೆಯ ಮಹತ್ವವನ್ನು ಕುರಿತು ಅವರು ರಚಿಸಿರುವ ಒಂದೊಂದು ನುಡಿಯೂ ಅರ್ಥವತ್ತಾಗಿದೆ.

**ತಾಳುವಿಕೆಗಿಂತ ತಪವು ಇಲ್ಲ** ಪ

**ಕೇಳಬಲ್ಲವರಿಗೆ ಹೇಳುವೆನು ಸೊಲ್ಲ** ಅ.ಪ

**ದುಷ್ಟಮನುಜರು ಪೇಳ್ವ ನಿಷ್ಠುರದನುಡಿ ತಾಳು**
**ಕಷ್ಟಬಂದರೆ ತಾಳು ಕಂಗೆಡದೆ ತಾಳು**
**ನೆಟ್ಟಸಸಿ ಫಲಬರುವತನಕ ಶಾಂತಿಯ ತಾಳು**
**ಕಟ್ಟುಬುತ್ತಿಯ ಮುಂದೆ ಉಣಲುಂಟು ತಾಳು**

**ಹಳಿದು ಹಂಗಿಸುವ ಹಗೆಯ ಮಾತನು ತಾಳು**
**ಸುಳಿನುಡಿ ಕುಹಕ ಕುಮಂತ್ರವನು ತಾಳು**
**ಅಳುಕದಲೆ ಬಿರುಸು ಬಿಂಕದ ನುಡಿಯ ನೀ ತಾಳು**

ಹಲಧರಾನುಜನನ್ನು ಹೃದಯದಲಿ ತಾಳು

ನಕ್ಕುನುಡಿವರ ಮುಂದೆ ಮುಕ್ಕರಿಸದೆ ತಾಳು
ಅಕ್ಕಸವ ಮಾಡುವರ ಅಕ್ಕರದಿ ತಾಳು
ಉಕ್ಕೋಹಾಲಿಗೆ ನೀರು ಇಕ್ಕಿದಂದದಿ ತಾಳು
ಪಕ್ಷೀಶ ಹಯವದನ ಶರಣೆಂದು ಬಾಳು॥

ಈ ಕೀರ್ತನೆಯಲ್ಲಿ ತಾಳ್ಮೆಯನ್ನು ಒಂದು ತಪಸ್ಸಿಗೆ ಹೋಲಿಸಿದ್ದಾರೆ. 'ತಾಳಿದವನು ಬಾಳಿಯಾನು' ಎಂಬ ಗಾದೆ ಮಾತಿನಂತೆ ಜೀವನದಲ್ಲಿ ಪ್ರತಿಯೊಬ್ಬರಿಗೂ ತಾಳ್ಮೆ ಎಷ್ಟು ಅಗತ್ಯವಾದುದು ಎಂಬುದನ್ನು ಮನಸ್ಸಿಗೆ ಮುಟ್ಟುವಂತೆ ವಿವರಿಸಿದ್ದಾರೆ. ವಾದಿರಾಜರ ಅಪಾರವಾದ ಲೋಕಾನುಭವ ಈ ಕೀರ್ತನೆಯಲ್ಲಿ ಮಡುಗಟ್ಟಿದೆ. ಬದುಕಿನ ಎಂಥ ಸಂದರ್ಭದಲ್ಲೂ ತಾಳ್ಮೆಯನ್ನು ಕಳೆದುಕೊಂಡು ಕಂಗೆಡದೆ ಪಕ್ಷೀಶಹಯವದನನಿಗೆ ಶರಣೆಂದು ಬಾಳಬೇಕೆಂದಿದ್ದಾರೆ.

ಪ್ರತಿಯೊಬ್ಬ ಮನುಷ್ಯನಿಗೂ ಹಣದ ಅಗತ್ಯ ಅನಿವಾರ್ಯವಾದುದು. ಹಣವಿಲ್ಲದೆ ಜೀವನ ನಿರ್ವಹಣೆ ಅಸಾಧ್ಯ. ಆದರೆ ಅದೇ ಹಣದಿಂದ ಸಂಭವಿಸುವ ಅನರ್ಥಗಳು ಎಷ್ಟು? ಎಂಬುದನ್ನು ವಾದಿರಾಜರು ಹಣವನ್ನು ಕುರಿತು ಒಂದು ಕೀರ್ತನೆಯಲ್ಲಿ

ಹಣವೇ ನಿನ್ನಯ ಗುಣವೆನಿತು ಬಣ್ಣಿಪೆನೊ ಪ

ಹಣವಿಲ್ಲದವನೊಬ್ಬ ಹೆಣವೇ ಸರಿ ಕಂಡ್ಯಾ ಅ.ಪ

ಬೆಲೆಯಾಗದವನೆಲ್ಲ ಬೆಲೆಯ ಮಾಡಿಸುವಿ
ಎಲ್ಲಾ ವಸ್ತುಗಳನಿದ್ದಲೇ ತರಿಸುವಿ
ಕುಲಗೆಟ್ಟವರ ಸತ್ಕುಲಕೆ ಸೇರಿಸುವಿ
ಹೊಲೆಯನಾದರೂ ತಂದೊಳಗಿರಿಸುವಿ ೧

ಅಂಗನೆಯರ ಸಂಗ ಅತಿಶಯದಿ ಮಾಡಿಸುವಿ
ಶೃಂಗಾರಾಭರಣಂಗಳ ಬೇಗ ತರುಸುವಿ
ಮಂಗನಾದರೂ ಅನಂಗನೆಂದನೆಸುವಿ
ಕಂಗಳಿಲ್ಲದವಗೆ ಮಗಳ ಕೊಡಿಸುವಿ ೨

ಚರಣಕ್ಕೆ ಬಂದಂಥ ದುರಿತವನು ಬಿಡಿಸುವಿ
ಸರುವರಿಗೆ ಶ್ರೇಷ್ಠನರನ ಮಾಡಿಸುವಿ

**ಅರಿಯದ ಶುಂಠನ ಅರಿತವನೆನಿಸುವಿ**
**ಸಿರಿ ಹಯವದನನ ಸ್ಮರಣೆ ಮರೆಸುವಿ** [೧೨] **೩**

ಎಂದು ವಿಡಂಬನಾತ್ಮಕವಾಗಿ ಚಿತ್ರಿಸಿದ್ದಾರೆ 'ಹಣವಿಲ್ಲದವ ಹೆಣದಂತೆ' ಎಂಬ ವಾಸ್ತವ ಕಹಿ ಸತ್ಯವನ್ನು ಹೇಳುತ್ತಾ ಹಣದ ಅಹಂಕಾರ ಏನೆಲ್ಲಾ ಮಾಡಿಸುತ್ತದೆ, ಕಡೆಗೆ ಸಿರಿಹಯವದನನ ಸ್ಮರಣೆಯನ್ನು ಮರೆಸುತ್ತದೆ ಎಂದಿದ್ದಾರೆ. ಇದೇ ಭಾವವನ್ನು ಪುರಂದರ ದಾಸರ 'ರೊಕ್ಕ ಎರಡಕ್ಕೂ ದುಃಖ ಕಾಣಕ್ಕೆ' ಎಂಬ ಕೀರ್ತನೆಯಲ್ಲಿ ಕಾಣಬಹುದು.

ಸಂಸಾರ ಬಂಧನದಲ್ಲಿ ಸಿಲುಕಿರುವವರಿಗೆ 'ಬಿಟ್ಟು ಬನ್ನಿರೊ ಸಂಸಾರದ್ದಂಬಲ, ಸೃಷ್ಟಿಪತಿಯ ಸೇರಿ ನೀವು ಸುಖಿಸ ಬನ್ನಿರೋ'[೧೩] ಎಂದು ವೈರಾಗ್ಯದ ದಾರಿ ತೋರಿಸುತ್ತಾ

**'ಹೆಂಡಿರುಮಕ್ಕಳು ಎಂಬೋ ಹಂಬಲ ಬೇಡಿರೋ,**
**ಕೊಂಡವರಲ್ಲ ಕೊಡುವರಲ್ಲ ಮುಂದಿನ ಗತಿಯನು**

**ಎಷ್ಟುಮಾಡಿ ಗಳಿಸಿ ತಂದರು ಸಾಲದೆಂಬರೊ**
**ನಷ್ಟಮಾಡಿ ಇವನ ಬದುಕು ಎಲ್ಲ ತಿಂಬರು**
**..........................................................**
**ಮುಟ್ಟ ಭಜಿಸಿರೋ ಹಯವದನನಂಘ್ರಿಯ**
**ನೆಟ್ಟನೆ ಮುಕ್ತಿಮಾರ್ಗ ತೋರಿಕೊಡುವೆನೊ**

ಎಂದು ಮುಕ್ತಿಮಾರ್ಗ ತೋರಿಕೊಡುವೆನೊ ಎಂದು ಮುಕ್ತಿ ಪಥವನ್ನು ತೋರಿಸಿದ್ದಾರೆ. 'ಕುಲಮದ ವೈಭವಮದ, ವಿದ್ಯಾಮದಗಳನುಳಿದು ಹರಿದಾಸರ ಮರೆಯೊಕ್ಕು ಸುಖಿಯಾಗು'[೧೪] 'ಗುರುಹಿರಿಯನುಸರಿಸಿ ಹರಿಯ ಮನದೊಳಗಿರಿಸಿ ಪರಗತಿಯ ಬೇಗ ಸಾಧಿಸಿರೊ'[೧೫] 'ಪಾಥೇಯವ ಕಟ್ಟಿರೊ ವೈಕುಂಠಕೆ ಪಯಣ ಸಮ್ಮತವಾದರೆ'[೧೬] ಹೀಗೆ ಅನೇಕ ಕೀರ್ತನೆಗಳಲ್ಲಿ ವಾದಿರಾಜರ ಪರಿಪಕ್ವವಾದ ಅನುಭವವನ್ನು ಅವರ ಉಪದೇಶಗಳಲ್ಲಿ ಮೂಡಿಬಂದಿದೆ.

ವಿದ್ಯಾಪ್ರಸನ್ನ ತೀರ್ಥರು ವಕೀಲರಾಗಿ ಲೌಕಿಕ ಜೀವನವನ್ನು ನಡೆಸುತ್ತಿದ್ದವರು. ತಮ್ಮ ಮೂವತ್ತಾರನೆಯ ವರ್ಷದಲ್ಲಿ ವ್ಯಾಸರಾಯ ಮಠದ ಯತಿಗಳಾದುದು ಆಕಸ್ಮಿಕ. ಯತಿಗಳಾದ ಮೇಲೂ ಸಮಾಜದ ಆಗುಹೋಗುಗಳಿಗೆ ನೇರವಾಗಿ ಸ್ಪಂದಿಸಿದ್ದಾರೆ. ಲೌಕಿಕ ಸಂಗತಿಗಳಿಗೆ ಆಧ್ಯಾತ್ಮಿಕ ಮೆರಗನ್ನು ನೀಡಿ ಕೀರ್ತನೆಗಳನ್ನು ರಚಿಸಿರುವುದು ಇವರ ವೈಶಿಷ್ಟ್ಯ.

ಕ್ಷಣಿಕತೆಯ ಸಂಸಾರದಲ್ಲಿ ಹೇಗಿರಬೇಕೆಂದು ವಿದ್ಯಾಪ್ರಸನ್ನ ತೀರ್ಥರು ಸೊಗಸಾಗಿ ಚಿತ್ರಿಸಿದ್ದಾರೆ. 'ತಗುಲಿ ತಗುಲದೆ ಈ ಜಗದೊಳು ಜೀವಿಸೋ, ಕಮಲ ಪತ್ರದಲ್ಲಿನ ಜಲದ ಕಣಗಳಂತೆ'[೧೭] ಎಂದಿದ್ದರೆ ಮತ್ತೊಂದು ಕೀರ್ತನೆಯಲ್ಲಿ 'ತ್ಯಜಿಸದೆಲೆ ಸಂಸಾರ ಭಜಿಸಬಹುದು'[೧೮] ಎಂದು ಹೇಳಿದ್ದಾರೆ. ಸಂಸಾರದ ಮೇಲೆ ಹೆಚ್ಚು ವ್ಯಾಮೋಹವನ್ನು ಹೊಂದದೆ. ಸಂಪೂರ್ಣವಾಗಿ ತ್ಯಜಿಸದೆ, ಅಂಟಿಯೂ ಅಂಟದಂತೆ ಇರಬೇಕೆಂಬುದು ಅವರ ಅಭಿಪ್ರಾಯ. ಜೀವನದಲ್ಲಿ ಎಷ್ಟು ಸುಖಪ್ರಾಪ್ತಿಯಾದರೂ ತೃಪ್ತಿಯಿಲ್ಲದ ಮನುಜರನ್ನು ದುರಾಸೆಯಿಂದ ಪರರ ಸಿರಿಗೆ ಮರುಗುವ ಜನರನ್ನು ಕಂಡು 'ಪರಸಿರಿಗೆ ಕರುಗುತಿಹುದು ಸರಿಯೇ ಯೋಚಿಸು ಹರಿಯೆ ಕರುಣದಿಂದ ಕೊಟ್ಟ ಸಿರಿಗೆ ತೃಪ್ತನಾಗದಂತೆ'[೧೯] ಎಂದಿದ್ದಾರೆ. ಲೋಭಿಗಳನ್ನು ಕುರಿತು ಒಂದು ಕೀರ್ತನೆಯಲ್ಲಿ

**ಲೋಭಿಯು ಬೇಡಲು ಲಾಭವೇನಿರುವುದು**
**ನಾಭಿಯು ಒಣಗುವುದು, ಬೇರೊಂದಿಲ್ಲ**
**ನಾಭಿಯು ಒಣಗುವುದು**[೨೦]

ಜಿಪುಣರನ್ನು ಬೇಡಿ ಏನೂ ಪ್ರಯೋಜನವಿಲ್ಲ ಎಂದು ಹೇಳಿದ್ದರೆ, ಮತ್ತೊಂದು ಕೀರ್ತನೆಯಲ್ಲಿ ದಾನವ ಮಾಡಿರೆಂದು ದಾನದಿಂದಾಗುವ ಆನಂದ ಮತ್ತು ಪ್ರಯೋಜನವನ್ನು ತಿಳಿಸಿದ್ದಾರೆ.

**ಬಿಕ್ಷೆಯ ಹಾಕಿರಿ ಜೋಳಿಗೆಗೆ**
**ಅಕ್ಷಯವಾಗುವುದು ನಿಮಗೆ**[೨೧]          ಎಂದಿದ್ದಾರೆ

ತಮ್ಮ ಮನೆಯಲ್ಲೆ ನೂರೆಂಟು ಹುಳುಕಿದ್ದರೂ, ಮತ್ತೊಬ್ಬರ ಮನೆಯ ಹುಳುಕನ್ನು ನೋಡುವ ಆಸೆ ಮನುಷ್ಯನಿಗೆ, ಅಂತಹ ಮನುಜರನ್ನು ಕಂಡು 'ಎಲ್ಲರ ಮನೆಯ ದೋಸೆ ತೂತು ಚಿಲ್ಲರೆಯಲ್ಲವಿದೀ ಮಾತು'[೨೨] ಎಂದಿದ್ದಾರೆ. 'ಮನೆ ಮನೆಯೂ ಹರಿಯ ಆಲಯವಾಗಬೇಕು. ಜನರು ಸದಾಚಾರಶೀಲರಾಗಬೇಕು' ಎಂಬುದು ವಿದ್ಯಾಪ್ರಸನ್ನ ತೀರ್ಥರ ಆಶಯ'.

**ಅಸ್ತವಾಗಲಿ ಜಾತಿ ಮತ ಭೇದವೆಲ್ಲವು**
**ಪ್ರಸ್ತಾಪ ಬಿಡಿರಿ ಹರಿ ಗುರು ಹಿರಿಯರ**
**ಸ್ವಸ್ಥವಾಗುವುದೆಂದು ಭಾರತವು ಎನ್ನುವರು**
**ಮಸ್ತಕದಿ ಕರವಿಟ್ಟು ಕುಳಿತುಕೊಳ್ಳುವ ತೆರದಿ'**[೨೩]

ಎಂದು ಜಾತಿಮತರಹಿತವಾದ ಆರೋಗ್ಯವಾದ ಭಾರತದ ಕನಸನ್ನು ಕಂಡಿದ್ದಾರೆ.

**ಸುಲಿದ ಬಾಳೆ ಹಣ್ಣು ಸುಟ್ಟು ತಿನ್ನಬೇಡಿರೊ**
**ಹಳೆಯ ಜನರ ಅನುಭವಗಳ ಹಳಿಯಬೇಡಿರೋ**
**ಬಿಳಿಯ ವಸ್ತುಗಳೆಲ್ಲ ಕ್ಷೀರವಲ್ಲ ಕಾಣಿರೊ**
**ಥಳಥಳಿಸುವುದೆಲ್ಲ ರಜತವಲ್ಲ ಕಾಣಿರೊ**
**ಸಿರಿಯು ಬಂದ ಕಾಲದಲ್ಲಿ ಮೆರೆಯಬೇಡವೋ**
**ಶಿರವು ಗಟ್ಟಿಯೆಂದು ಕಂಬ ಗುದ್ದಬೇಡವೊ**
**ಮನಕೆ ತುಷ್ಟಿಕೊಡದ ಕಾರ್ಯಗಣನೆ ಬೇಡವೊ**
**ಅನುವಿನಲ್ಲಿ ಪಿಡಿದ ಕಾರ್ಯ ಕೊನೆಯಗಾಣಿಸೊ**
**ಹಾವು ಕೊಂದು ಹದ್ದುಗಳಿಗೆ ಹಾಕಬೇಡವೊ**
**ಗೋವು ಕೊಂದು ಪಾದರಕ್ಷೆ ದಾನಬೇಡವೊ**

**ಅರಿಯದ ಜನರಲ್ಲಿ ಅಂತಂಗಬೇಡವೊ**
**ಪರರ ಗೋಪ್ಯ ತಿಳಿದರೆ ಬಹಿರಂಗಬೇಡವೊ**
**ನಗುವ ಜನರ ಮುಂದೆ ಜಂಭ ಕೊಚ್ಚಬೇಡವೊ**
**ರಗಳೆ ರಂಪದಿಂದ ಪರರ ಒಲಿಸಬೇಡವೊ**
**ಗೆದ್ದರಾ ಎತ್ತು ಬಾಲವನ್ನು ಹಿಡಿಯಬೇಡವೊ**
**ಒದ್ದರೆ ಅದು ಹಲ್ಲುಗಳನು ಕಿರಿಯಬೇಡವೊ**
**ಮೂರ್ಖ ಜನಗಳಲ್ಲಿ ವಾದ ಮಾಡಬೇಡವೊ**
**ಮಕ್ಕಳೆದುರಲ್ಲಿ ಗ್ರಾಮ್ಯವಚನ ಬೇಡವೊ**
**ಬಳಿಕ ಮಾತನಾಡುವನು ಗೆಳೆಯನಲ್ಲಯ್ಯ**
**ಕುಳಿತು ತಿನ್ನುವವನು ಸಾಹುಕಾರನಲ್ಲಯ್ಯ**[೨೪]

ಎಂದು ಬೋಧಿಸಿದ್ದಾರೆ.

'ಕೆರೆಯನು ದಾಟಲು ಅರಿಯದ ಜನ ಭವ ಶರಧಿಯ ದಾಟುವರೇ ಶ್ರೀ ನರಹರೆ'[೨೫] ಎಂದು ಪ್ರಶ್ನಿಸಿದರೆ. ಮತ್ತೊಂದು ಕೀರ್ತನೆಯಲ್ಲಿ 'ಎಲ್ಲ ಭಯ ಎಲ್ಲ ಭಯ ಕ್ಷುಲ್ಲಕ ಜನಗಳಿಗೆಲ್ಲ ಭಯ, ತಲ್ಲಣಿಸದೆ ಸಿರಿವಲ್ಲಭನಲಿ ಮನ ನಿಲ್ಲಿಸುವರಿಗೆಲ್ಲ ಜಯ'[೨೬] ಎಂದು ಹೇಳುತ್ತಾ ತಲ್ಲಣಿಸದೆ ಲಕ್ಷ್ಮಿವಲ್ಲಭನಲ್ಲಿ ಮನಸ್ಸಿನಲಿ ನಿಲ್ಲಿಸಿದರೆ ಜಯ ಖಚಿತವೆಂದು ದೃಢವಾಗಿ ನಂಬುವ ಅವರು, 'ಆಪ್ತರಾರೆಂಬುದನು ಆಲೋಚನೆಯ ಮಾಡೆ ಆಪ್ತರೊಬ್ಬರ ಕಾಣೆ ನೀನಿಲ್ಲದೆ'[೨೭] ಎಂಬ ಕೀರ್ತನೆಯಲ್ಲಿ ಮನುಷ್ಯರ ಸಣ್ಣತನಗಳನ್ನು ಚಿತ್ರಿಸುತ್ತಾ ಭಗವಂತನಲ್ಲದೆ ಬೇರಾರು ಆಪ್ತರಿಲ್ಲ 'ಪ್ರೀತ ನೀನಾಗೊ ಅನಿಮಿತ್ತ ಬಾಂಧವ ನಿನ್ನ ದೂತ ದೂತರ ದೂತನಾಗುವೆ ಪ್ರಸನ್ನ' ಎಂದು ಭಗವಂತನಲ್ಲಿ ಮೊರೆ ಹೋಗಿದ್ದಾರೆ.

ವಿದ್ಯಾಪ್ರಸನ್ನ ತೀರ್ಥರು ನೀತಿಯನ್ನು ಹೇಳುವಾಗ ಧಾರಾಳವಾಗಿ ಗಾದೆ ಮಾತುಗಳನ್ನು ಬಳಸಿಕೊಂಡು ತಮ್ಮ ಅಭಿಪ್ರಾಯವನ್ನು ಕಣ್ಣಿಗೆ ಕಟ್ಟುವಂತೆ ಮಂಡಿಸುತ್ತಾರೆ.

೧. ಹೊಟ್ಟೆಗೆ ಹಿಟ್ಟಿಲ್ಲ ನಿನ್ನ ಜುಟ್ಟಿಗೆ ಮಲ್ಲಿಗೆಯು

೨. ಎಲ್ಲರ ಮನೆಯ ದೋಸೆಯು ತೂತು

೩. ಕೋಳಿಕೂಗದೆ ಬೆಳಕು ಬಾರದು

೪. ಬರಿಯ ಪಾತ್ರೆಗಳು ಬಹಳ ಸದ್ದಂತೆ

೫. ಸಂತೆಗೆ ಸೇರುವ ಗಂಟು ಕಳ್ಳರು

೬. ಗೆದ್ದ ಎತ್ತಿನ ಬಾಲ ಹಿಡಿಯಬೇಡಿ

೭. ಮೂರ್ಖ ಜನಗಳಲ್ಲಿ ವಾದ ಬೇಡ

೮. ಇರುಳು ಕಂಡ ಬಾವಿಗೆ ನೀ ಉರುಳಬೇಡ

೯. ಗಿಡದಲ್ಲಿ ಬಗ್ಗಿಸದೆ ಮರವು ಬಗ್ಗಲಾರದು

೧೦. ಬೆಕ್ಕಿನಂತೆ ಕಣ್ಣು ಮುಚ್ಚಿ ಯತಿಗಳಾದರು

೧೧. ಬೀಸಿದ ಗುಂಡದೆ ಬುಕ್ಕಿದ್ದೇ ಲಾಭ

೧೨. ಗಳಿಸಿದವನ ದನ ಬಳಸಿದವನಿಗೆ

ಹೀಗೆ ಹರಿದಾಸಯತಿಗಳು ಮಠದ ಪೀಠಾದಿಪತಿಗಳಾಗಿ ಅಧ್ಯಯನ, ಅಧ್ಯಾಪನ, ಪ್ರವಾಸ, ತತ್ವಪ್ರಚಾರದಲ್ಲಿ ಸಮಯ ಕಳೆಯುತ್ತಿದ್ದುದರಿಂದ ಬೃಹತ್ ಸಮಾಜದ ಕಡೆ ಅವರ ದೃಷ್ಟಿ ಅಷ್ಟಾಗಿ ಹರಿದಿಲ್ಲ. ಆದರೂ ನಿತ್ಯಜೀವನದಲ್ಲಿ ಒಬ್ಬ ವ್ಯಕ್ತಿ ಹೇಗೆ ಸದಾಚಾರಿಯಾಗಿ ಬದುಕಬೇಕೆಂಬುದನ್ನು ಮತ್ತೆ ಮತ್ತೆ ಒತ್ತಿ ಹೇಳಿದ್ದಾರೆ. ಮದ, ಮತ್ಸರ, ಮೋಹ, ಸಣ್ಣತನ, ಕೊಂಕು, ಭ್ರಮೆ, ಡಾಂಭಿಕ ಮನೋಭಾವ ಇತ್ಯಾದಿ ಕ್ಷುಲ್ಲಕ ಗುಣಗಳನ್ನು ತೊರೆದು, ಸಂಸಾರಕ್ಕೆ ಅಂಟಿಯೂ ಅಂಟದಂತೆ ಬಾಳಬೇಕು. ವೈರಾಗ್ಯವನ್ನು ಹೊಂದಿ ಶಾಂತಿಯ ಸಮಾಧಾನದ ಸಂತೃಪ್ತ ಜೀವನವನ್ನು ನಡೆಸಬೇಕೆಂಬುದೆ ಅವರ ಉಪದೇಶವಾಣಿಯ ಪ್ರಮುಖ ಆಶಯ.

# ಅಧ್ಯಾಯ ೬ ಅಡಿಟಿಪ್ಪಣಿಗಳು

೧. 'ಶ್ರೀಪಾದರಾಜರ ಮತ್ತು ವ್ಯಾಸರಾಯರ ಕೀರ್ತನೆಗಳು', ಸಮಗ್ರ ದಾಸ ಸಾಹಿತ್ಯ, ಸಂಪುಟ ೧, ಪು–೭೭
೨. ಅದೇ, ಪು–೭೮
೩. ಅದೇ, ಪು–೭೯
೪. ಅದೇ, ಪು–೮೦
೫. ಅದೇ, ಪು–೮೦
೬. ಅದೇ, ಪು–೧೬
೭. ಅದೇ, ಪು–೨೪೪
೮. ಅದೇ, ಪು–೨೪೪
೯. ಅದೇ, ಪು–೨೪೬
೧೦. ಅದೇ, ಪು–೨೪೭
೧೧. ಡಾ. ಟಿ.ಎನ್. ನಾಗರತ್ನ, 'ಶ್ರೀವಾದಿರಾಜರ ಕೀರ್ತನೆಗಳು', ಪು–೨೩೩
೧೨. ಅದೇ, ಪು–೨೪೭
೧೩. ಅದೇ, ಪು–೨೪೪
೧೪. ಅದೇ, ಪು–೨೨೭
೧೫. ಅದೇ, ಪು–೨೩೦
೧೬. ಅದೇ, ಪು–೨೪೧
೧೭. 'ಶ್ರೀವಿದ್ಯಾಪ್ರಸನ್ನತೀರ್ಥರು ಹಾಗೂ ಇತರ ಯತಿಗಳ ಕೀರ್ತನೆಗಳು', ಸಮಗ್ರ ದಾಸ ಸಾಹಿತ್ಯ, ಸಂಪುಟ ೨೮, ಪು–೨೯೪
೧೮. ಅದೇ, ಪು–೨೯೫
೧೯. ಅದೇ, ಪು–೩೦೧
೨೦. ಅದೇ, ಪು–೩೧೨
೨೧. ಅದೇ, ಪು–೩೦೭
೨೨. ಅದೇ, ಪು–೨೯೦

೨೩. ಅದೇ, ಪು–೩೦೯

೨೪. ಅದೇ, ಪು–೩೧೭

೨೫. ಅದೇ, ಪು–೨೯೨

೨೬. ಅದೇ, ಪು–೨೮೮

೨೭. ಅದೇ, ಪು–೨೮೪

ಅಧ್ಯಾಯ ೭

# ದೀರ್ಘ ಕೃತಿಗಳ ಹಿನ್ನೆಲೆ

ದಾಸ ಸಾಹಿತ್ಯದ ಆದ್ಯ ಪ್ರವರ್ತಕರಾದ ಶ್ರೀಪಾದರಾಜರು ಭಗವಂತನ ಪೂಜೆಯ ಸಮಯದಲ್ಲಿ ಆತ್ಮನಿವೇದನೆಗೆಂದು ಕೀರ್ತನೆಯನ್ನು ರಚಿಸಿದರು. ಮುಂದೆ ಅದು ಕ್ರಮಕ್ರಮವಾಗಿ ವಿಸ್ತಾರವಾಗುತ್ತಾ ಹೋಯಿತು. ಕೀರ್ತನೆ, ಉಗಾಭೋಗ, ಸುಳಾದಿಗಳು ತೀರ ಸಣ್ಣ ರಚನೆಗಳಾದ್ದರಿಂದ, ಇವುಗಳ ವ್ಯಾಪ್ತಿ ಸೀಮಿತವಾದ್ದರಿಂದ ಅವುಗಳಲ್ಲಿ ರಾಮಾಯಣ, ಮಹಾಭಾರತ, ಭಾಗವತ, ಪುರಾಣ, ಐತಿಹ್ಯ ಇವುಗಳ ವಿವರವಾದ ಸಂಪೂರ್ಣ ಕಥನವನ್ನು ತರಲು ಸಾಧ್ಯವಾಗಲಿಲ್ಲ. ಹಾಗಾಗಿ ಶ್ರೀಪಾದರಾಜರು ವೃತ್ತನಾಮ ದಂಡಕದಂತಹ ದೀರ್ಘಕೃತಿಗಳನ್ನು ರಚಿಸಿದರು. ಮುಂದೆ ಬಂದ ವಾದಿರಾಜರು ಶ್ರೀಪಾದರಾಜರ ಹಾದಿಯಲ್ಲೇ ನಡೆದುದಲ್ಲದೆ, ಅದನ್ನು ಮತ್ತಷ್ಟು ವಿಸ್ತರಿಸಿದರು.

ವಾದಿರಾಜರು ಏಳೆ, ತ್ರಿಪದಿ, ಷಟ್ಪದಿ, ಸಾಂಗತ್ಯ ಮೊದಲಾದ ಜಾನಪದ ಲಯಗಳ ಮೂಲಕ ಹಾಡನ್ನು ಜನರ ಹತ್ತಿರ ತರಲು ಪ್ರಯತ್ನಿಸಿದರು. ಹಾಡು ಬರಿಯ ರಂಜನೆಯಾಗದೆ ಭೋದಪ್ರವವು ಆಗಲೆಂದು ಹಾಡಿನ ಲಯದಲ್ಲಿ ತತ್ವವನ್ನು ಬೆರೆಸಿದರು. ಕಥನಕಲೆಯನ್ನು ಪರಿಚಯಿಸಿದರು. ಸಾಹಿತ್ಯ ಮತ್ತು ಶಾಸ್ತ್ರ ಎರಡರಲ್ಲೂ ತಾವು ಸಿದ್ಧಹಸ್ತರೆಂದು ತೋರಿಸಿದರು. ವೈಕುಂಠವರ್ಣನೆ, ಹರಿಸರ್ವೋತ್ತಮಸಾರ, ಲಕ್ಷ್ಮೀಶೋಭಾನೆ, ಗುಂಡಕ್ರಿಯೆ, ಅವತಾರತ್ರಯ ಸುವ್ವಾಲಿ ಮೊದಲಾದ ಧೀರ್ಘಕೃತಿಗಳನ್ನು ರಚಿಸಿದರು. ಇವೆಲ್ಲಾ ನಿರ್ದಿಷ್ಟವಾದ ವಿಷಯವೊಂದನ್ನು ಕುರಿತು ಬರೆದ ಕಿರು ಕಾವ್ಯಗಳು ಮುಂದೆ ಜಗನ್ನಾಥದಾಸರು ಮೊದಲಾದವರಿಗೆ ಇದು ಪ್ರೇರಣೆ ನೀಡಿತು. ೨೦ನೇ ಶತಮಾನದಲ್ಲಿ ವಿದ್ಯಾಪ್ರಸನ್ನತೀರ್ಥರು ನೀತಿಸಾರ ಮೊದಲಾದ ದೀರ್ಘಕೃತಿಗಳನ್ನು ರಚಿಸಿದರು. ಹೀಗೆ ದೀರ್ಘ ಕೃತಿಗಳ ಮೂಲಕ ಕಥನ ಕಲೆಯನ್ನು ಬೆಳೆಸಿದರು.

## ೭.೧ ಶ್ರೀ ಮಧ್ವನಾಮ :

ಹರಿದಾಸ ಪಂಥದ ಮೂಲಗುರುಗಳಾದ ಮಧ್ವಾಚಾರ್ಯರು ವಾಯುದೇವರ ಅವತಾರ. ತ್ರೇತಾಯುಗದಲ್ಲಿ ಹನುಮಂತನಾಗಿ, ದ್ವಾಪರಯುಗದಲ್ಲಿ ಭೀಮಸೇನನಾಗಿ ಹಾಗೂ ಕಲಿಯುಗದಲ್ಲಿ ಆಚಾರ್ಯ ಮಧ್ವರಾಗಿ ಅವತಾರ ಮಾಡಿದ್ದಾರೆ ಎಂಬುದು ಮಧ್ವಮತೀಯರ ನಂಬಿಕೆ. ಸಾಮಾನ್ಯವಾಗಿ ಎಲ್ಲಾ ಹರಿದಾಸರು ಮಧ್ವಾಚಾರ್ಯರನ್ನು ಸ್ತುತಿಸುವಾಗ ಮೊದಲು ಅವತಾರತ್ರಯವನ್ನು ಭಜಿಸಿಯೇ ಮುಂದಿನ ಕಾರ್ಯದಲ್ಲಿ ತೊಡಗುತ್ತಾರೆ. ದಾಸ ಸಾಹಿತ್ಯದ ಆದ್ಯ ಪ್ರವರ್ತಕರಾದ ಶ್ರೀಪಾದರಾಜರು ರಚಿಸಿರುವ 'ಶ್ರೀಮಧ್ವನಾಮ' ಮೊಟ್ಟಮೊದಲನೆಯದು ಹಾಗೂ ಇಪ್ಪತ್ತೇಳು ನುಡಿಗಳಿರುವ ದೀರ್ಘಕೃತಿಯೂ ಆಗಿದೆ. 'ಜಯ ಜಯ ಜಗತ್ರಾಣ

ಜಗದೊಳಗೆ ಸುತ್ರಾಣ ಅಖಿಲಗುಣ ಸದ್ಧಾಮ ಮಧ್ವನಾಮ' ಮಧ್ವಮತದ ಮಹತ್ವವನ್ನು ಹೇಳುತ್ತಲೇ ಪ್ರಾರಂಭವಾಗುವ ಈ ಕೀರ್ತನೆಯಲ್ಲಿ ಒಂದೊಂದು ಅವತಾರದ ಹಿರಿಮೆಯನ್ನು ಶ್ರೀಪಾದರಾಜರು ಭಾವಪರವಶರಾಗಿ ತನ್ಮಯತೆಯಿಂದ ಚಿತ್ರಿಸಿದ್ದಾರೆ. ವಾಯುಸುತನಾದ ಹನುಮನನ್ನು ಕೊಂಡಾಡುವ ಸಂದರ್ಭದಲ್ಲಿ ಮೊದಲಿಗೆ ವಾಯುದೇವರ ಹಿರಿಮೆಯನ್ನು ವರ್ಣಿಸಿದ್ದಾರೆ.

**ಆವವನು ದೇಹದೊಳಗಿರಲು ಹರಿ ನೆಲಸಿಹನು**
**ಆವವನು ತೊಲಗೆ ಹರಿ ತಾ ತೊಲಗುವ**
**ಆವವನು ದೇಹದ ಒಳ ಹೊರಗೆ ನಿಯಾಮಕನು**
**ಆ ವಾಯು ನಮ್ಮ ಕುಲಗುರುರಾಯನು**

**ಕರುಣಾಭಿಮಾನಿ ಸುರರು ದೇಹವ ಬಿಡಲು**
**ಕುರುಡ ಕಿವುಡ ಮೂಕನೆಂದೆನಿಸುವ**
**ಪರಮ ಮುಖ್ಯಪ್ರಾಣ ತೊಲಗಲಾ ದೇಹವನು**
**ಅರಿತು ಪೆಣವೆಂದು ಪೇಳುವರು ಬುಧಜನ**

**ಸುರರೊಳಗೆ ನರರೊಳಗೆ ಸರ್ವಭೂತಗಳೊಳಗೆ**
**ಪರತರನೆನಿಸಿ ನೇಮಿಸಿ ನೆಲೆಸಿಹ**
**ಹರಿಯನಲ್ಲದೆ ಬಗೆಯನನ್ಯರನು ಲೋಕದೊಳು**
**ಗುರುಕುಲ ತಿಲಕ ಮುಖ್ಯ ಪವಮಾನನು೧**

ಮಧ್ವ ಶಾಸ್ತ್ರದ ತತ್ವದಂತೆ "ವಾಯುದೇವರು ಬ್ರಹ್ಮದೇವರ ನಂತರದ ತಾರತಮ್ಯದಲ್ಲಿ ದೊಡ್ಡವರು. ಬ್ರಹ್ಮದೇವರಿಗೆ ಇವರು ಸಮಾನ ಕಕ್ಷಾಪನ್ನರು. ಬ್ರಹ್ಮದೇವರು ಇವರಿಗಿಂತಲು ಪದವಿಯಲ್ಲಿ ಮಾತ್ರ ಹಿರಿಯರು. ವಾಯುದೇವರು ಪ್ರಾಣಾದಿ ಪಂಚವಾಯುಗಳಿಗೆ ಅಧಿಪತಿಗಳು. ಸೃಷ್ಟಿಕಾರ್ಯದಲ್ಲಿ ವಾಯುದೇವರು ಮತ್ತು ಅವರ ಪತ್ನಿ ಭಾರತೀದೇವಿಯರೂ ಸಹ ಭಗವಂತನ ಇಚ್ಛಾನುಸಾರವಾಗಿ ಬೇರೆ ಬೇರೆ ಪದಾರ್ಥಗಳಲ್ಲಿದ್ದು ವ್ಯಾಪಾರ ಮಾಡುವರು. ಪ್ರಾಣದೇವರ ಈ ಮಹಿಮೆಯನ್ನು ಐತರೇಯ, ಷಟ್ಪ್ರಶ್ನಾದಿ ಉಪನಿಷತ್ತುಗಳಲ್ಲಿ ವಿಸ್ತಾರವಾಗಿ ಹೇಳಿರುವರು".೨ ಆದ್ದರಿಂದ ವಾಯುದೇವರಿದ್ದಲ್ಲಿ ಹರಿ ಸಾನ್ನಿಧ್ಯವಿರುತ್ತದೆ 'ಹರಿ ನೆಲೆಸಿಹನು' ಇಲ್ಲದಿದ್ದರೆ 'ಹರಿ ತಾ ತೊಲಗುವನು'. ಹೀಗೆ ವಾಯುದೇವರೆ ಮುಖ್ಯಪ್ರಾಣರೆನಿಸಿ, ಜೀವೋತ್ತಮರಾಗಿದ್ದಾರೆ. ದೇಹದ ಸರ್ವಚೇಷ್ಟೆಗೂ ಕಾರಣರಾಗಿದ್ದಾರೆ. ಅವರು ಅಗಲಿದರೆ ಇಡೀ ದೇಹವೇ ನಿಷ್ಪ್ರಯೋಜನವಾಗಿ ಹೆಣವಾಗುತ್ತದೆ. ಆದ್ದರಿಂದ ವಾಯುದೇವರೇ ಸುರರೊಳಗೆ ನರರೊಳಗೆ ಸರ್ವಭೂತಗಳೊಳಗೆ ಪರತರನೆನಿಸಿ ನಿಯಾಮಿಸಿ ನೆಲೆಸಿಹ'ರೆಂದು ಹರಿಭಕ್ತರೆಂದು ತಿಳಿಸಿದ್ದಾರೆ. ಪ್ರಾರಂಭದಲ್ಲಿಯೇ ವಾಯುದೇವರ ಸ್ತುತಿ ಮಾಡಿರುವುದು ಮಧ್ವನಾಮಕ್ಕೆ ಸೂಕ್ತ ಹಿನ್ನಲೆಯಾಗಿದೆ. ಹೀಗೆ ವಾಯುದೇವರಿಗೆ ನಮಸ್ಕರಿಸಿದ ನಂತರ, ವಾಯುಸುತನಾದ ಹನುಮಂತನ ಮಹಿಮೆಯನ್ನು ವರ್ಣಿಸಿರುವರು.

**ತ್ರೇತೆಯಲಿ ರಘುಪತಿಯ ಸೇವೆ ಮಾಡುವೆನೆಂದು**
**ವಾತಸುತ ಹನುಮಂತನೆಂದೆನಿಸಿದ**
**ಪೋತ ಭಾವದಿ ತರಣಿ ಬಿಂಬಕ್ಕೆ ಲಂಘಿಸಿದ**
**ಈತಗೆಣೆಯಾರು ಮೂರ್ಲೋಕದೊಳಗೆ**

**ತರಣಿಗಭಿಮುಖನಾಗಿ ಶಬ್ದ ಶಾಸ್ತ್ರವ ರಚಿಸಿ**
**ಉರವಣಿಸಿ ಹಿಂದು ಮುಂದಾಗಿ ನಡೆದ**
**ಪರಮ ಪವಮಾನಸುತ ಉದಯಾಸ್ತ ಶೈಲಗಳ**
**ಭರದಿಯ್ಯೆದಿದಗೀತಗುಪಮೆ ಉಂಟೇ**

**ಅಖಿಳ ವೇದಗಳ ಸಾರಪಠಿಸಿದವನು ಮುನ್ನಲ್ಲಿ**
**ನಿಖಿಳ ವ್ಯಾಕರಣಗಳ ಇವ ಪಠಿಸಿದ**
**ಮುಖದಲ್ಲಿ ಕಿಂಚಿದಪಶಬ್ಧ ಇವಗಿಲ್ಲೆಂದು**
**ಮುಖ್ಯಪ್ರಾಣನನು ರಾಮನನುಕರಿಸಿದ**

**ತರಣಿಸುತನನು ಕಾಯ್ದು ಶರಧಿಯನು ನೆರೆದಾಟಿ**
**ಧರಣಿಸುತೆಯಳ ಕಂಡು ದನುಜರೊಡನೆ**
**ಭರದಿ ರಣವನೆ ಮಾಡಿ ಗೆಲಿದು ದಿವ್ಯಾಸ್ತ್ರಗಳ**
**ಉರುಹಿ ಲಂಕೆಯ ಬಂದ ಹನುಮಂತನು**

ಈ ನುಡಿಗಳನ್ನು ಗಮನಿಸಿದ ಕೂಡಲೇ ಹನುಮಂತ ಎಂತಾ ಧಿರನೂ ಪರಾಕ್ರಮಿಯೂ ಆಗಿದ್ದನೆಂಬುದು ನಮ್ಮ ಅರಿವಿಗೆ ಬರುತ್ತದೆ. ಸೂರ್ಯ ಬಿಂಬವನ್ನೇ ಹಿಡಿಯಲು ಹೋದ ಇವನ ಸಾಹಸಕ್ಕೆ ಎಣೆ ಇಲ್ಲ. ಅಖಿಲ ವೇದಗಳ ಸಾರವನ್ನೇ ಬಲ್ಲ, ನವವ್ಯಾಕರಣದಲ್ಲಿ ಪ್ರವೀಣನೆನಿಸಿದ ಹನುಮಂತನ ಈ ಸ್ಪಷ್ಟೋಚಾರವನ್ನು ಮೆಚ್ಚಿ ರಾಮನು ಇವನನ್ನು ಅನುಕರಿಸಿದ. ರಾಮಭಂಟನಾದ ಹನುಮಂತ ಮಾಡಿದ ಎಲ್ಲಾ ಸಾಧನೆಗಳನ್ನು ಬಾಲ್ಯದಿಂದ ಹಿಡಿದು ಶ್ರೀರಾಮನ ಕೃಪೆಗೆ ಒಳಗಾಗುವವರೆಗಿನ ಕತೆಯನ್ನು ಸಂಕ್ಷಿಪ್ತವಾಗಿ ಚಿತ್ರಿಸಿದ್ದಾರೆ. ರಾಮಾಯಣದ ಹನುಮಂತನ ಪಾತ್ರ ಎಲ್ಲರಿಗೂ ಚಿರಪರಿಚಿತವಾದದ್ದು. ರಾಮನನ್ನು ಸುರಕ್ಷಿತವಾದ ಸ್ಥಳದಲ್ಲಿ ನಿಲ್ಲಿಸಿ ಸಮುದ್ರವನ್ನು ಹಾರಿ, ಲಂಕೆಗೆ ಬೆಂಕಿಯನ್ನಿಟ್ಟು ಬಂದವನು. ಸೀತೆ ಕೊಟ್ಟ ಚೂಡಾಮಣಿಯನ್ನು ರಾಮನಿಗೆ ತಂದು ಒಪ್ಪಿಸಿದ. ರಾವಣನ ಸಂಹಾರದಲ್ಲಿ ಶ್ರೀರಾಮನಿಗೆ ಬೆಂಬಲವಾಗಿ ನಿಂತ. ಕಪಿ ಸೈನ್ಯವೆಲ್ಲ ಸರ್ಪಬಂಧದಲ್ಲಿ ಸಿಕ್ಕು ಒದ್ದಾಡುತ್ತಿರುವ ಸಂದರ್ಭದಲ್ಲಿ ಜಾಂಬವಂತನ ಆಜ್ಞೆಯಂತೆ ಸಂಜೀವಿನಿ ಮೂಲಿಕೆಯನ್ನು ತರಲು ಹೋಗಿ, ಸಂಜೀವಿನಿ ಪರ್ವತವನ್ನೇ ತಂದಿಟ್ಟ ಧೀರ. ಹನುಮಂತನ ಈ ಎಲ್ಲಾ ಸಾಹಸಗಳನ್ನು ಮೆಚ್ಚಿದ ಶ್ರೀರಾಮನು

ಅವನಿಗೆ ಬ್ರಹ್ಮ ಪದವಿಯನ್ನೇ ಕೊಡುವೆನೆಂದು ಹೇಳಿದರೂ, ಹನುಮಂತನು ಅದಾವುದಕ್ಕೂ ಆಸೆ ಪಡದೆ 'ನಿಜಭಕುತಿಯನೆ ಬೇಡಿ ವರವ ಪಡೆದ' ಎಂದು ಅವನ ಸ್ವಾಮಿ ನಿಷ್ಠೆಯನ್ನು ಪ್ರಾಮಾಣಿಕ ಭಕ್ತಿಯನ್ನು ಹೊಗಳಿರುವ ರೀತಿ ಅನನ್ಯವಾದುದು. ಈ ಮಾರುತನೆ ಭೀಮನಾಗಿ ದ್ವಾಪರಯುಗದಲ್ಲಿ ಅವತಾರವೆತ್ತಿದನು. ಈ ಯುಗದಲ್ಲೂ ಇವನ ಸಾಹಸಗಳಿಗೆ ಮಿತಿಯಿಲ್ಲ. ಕೌರವರು ಕುಡಿಸಿದ ವಿಷ, ಅರಗಿನ ಮನೆಗೆ ಹಚ್ಚಿದ ಬೆಂಕಿ ಈ ಯಾವ ಕಷ್ಟಕ್ಕೂ ಅವನು ಜಗ್ಗಲಿಲ್ಲ, ಅಲ್ಲದೇ ಬಕಾಸುರ, ಹಿಡಿಂಬಾ ಮೊದಲಾದ ರಾಕ್ಷಸರ ಹುಟ್ಟನ್ನು ಅಡಗಿಸಿದ್ದು, ರಾಜಕುಲ ಶ್ರೇಷ್ಠನಾದ ಮಾಗಧನನ್ನು ಸೀಳಿದ್ದು, ಮೊದಲಾದವು, ಭೀಮಸೇನನ ಜೀವನ ಬರಿ ಸಾಹಸಕ್ಕೆ ಮಾತ್ರ ಮೀಸಲಾದುದಲ್ಲ. 'ಮಾನನಿಧಿ ದ್ರೌಪದಿಯ ಮನದಿಂಗಿತವನರಿತು' ಅವಳಿಗೆ ಸೌಗಂಧಿಕಾ ಪುಷ್ಪವನ್ನು ತಂದುಕೊಟ್ಟದ್ದು, ಕೀಚಕ, ದುರ್ಯೋಧನ, ದುಶ್ಯಾಸನಾದಿಗಳನ್ನು ಸಂಹಾರ ಮಾಡಿದ್ದು, ಅಶ್ವತ್ಥಾಮನ ನಾರಾಯಣಾಸ್ತ್ರಕ್ಕೆ ಸಿಕ್ಕಿ ಭಯಗ್ರಸ್ಥರಾದ ಸಹೋದರರನ್ನು ಸಂರಕ್ಷಿಸಿದ್ದು, ಹೀಗೆ ಶೌರ್ಯ, ಶಕ್ತಿ, ಸಾಹಸಗಳಿಗೆ ಪ್ರತಿರೂಪನಾಗಿ ಪವನಕುಮಾರನಾದ ಭೀಮಸೇನನ ಹಿರಿಮೆಯನ್ನು ಚಿತ್ರಿಸಿದ್ದಾರೆ.

ಚಂಡ ವಿಕ್ರಮನು ಗದೆಗೊಂಡು ರಣದಿ ಭೂ
ಮಂಡಲದೊಳಿದಿರಾಂತ ಖಳರನೆಲ್ಲಾ
ಹಿಂಡಿ ಬಿಸುಟಿಹ ವೃಕೋದರನ ಪ್ರತಾಪವನು
ಕಂಡು ನಿಲ್ಲುವರಾರು ತ್ರಿಭುವದೊಳು,

ಎಂದು ಸ್ತುತಿಸಿದ್ದಾರೆ.

ಮುಂದೆ ಕಲಿಯುಗದಲ್ಲಿ 'ಮಾನನಿಧಿ ಮಧ್ವಾಖ್ಯನೆಂದೆನಿಸಿ, ಮಧ್ವಾಚಾರ್ಯರಾಗಿ ಅವತಾರವೆತ್ತಿ ದುರ್ವಾದಿ ಮತಗಳ ಖಂಡಿಸಿ, ಮಧ್ವಮತದ ಹರಿ ಸರ್ವೋತ್ತಮ ತತ್ವವನ್ನು ಜಗತ್ತಿಗೆ ಬೋಧಿಸಿದರೆಂದು ಪ್ರಶಂಶಿಸುತ್ತಾ ಮಧ್ವಾಚಾರ್ಯರ ಸಾಧನೆಗಳ ಸಾರವನ್ನು ಒಂದೇ ನುಡಿಯಲ್ಲಿ ಅಡಕಗೊಳಿಸಿದ್ದಾರೆ.

ಸರ್ವೇಶಹರಿ ವಿಶ್ವ ಎಲ್ಲ ತಾ ಪುಸಿಯೆಂಬ
ದುರ್ವಾದಿಗಳ ಮತವ ನೆರೆ ಖಂಡಿಸಿ
ಸರ್ವೇಶ ಹರಿ ವಿಶ್ವ ಸತ್ಯವೆಂದರುಹಿದಾ
ಶರ್ವಾದಿ ಗೀರ್ವಾಣ ಸಂತತಿಯಲ್ಲಿ,ಕಲಿಯುಗದಲ್ಲಿ ಮಾಯವಾದವನ್ನು ನಿರಾಕರಿಸಿ

'ಸರ್ವೇಶ ಹರಿವಿಶ್ವಸತ್ಯ'ವೆಂಬ ನುಡಿಯನ್ನು ಸಾರಲು ವಾಯುದೇವರು ಮಧ್ವಾಚಾರ್ಯರಾಗಿ ಅವತರಿಸಿದರು. ಬದರಿಕಾಶ್ರಮಕ್ಕೆ ಹೋಗಿ ವೇದವ್ಯಾಸರಿಂದ ಸಮಸ್ತ ಶಾಸ್ತ್ರ ರಹಸ್ಯಗಳನ್ನು ಅರಿತು, ಲೋಕಕ್ಕೆ ಆ ಜ್ಞಾನಸುಧೆಯನ್ನು ನೀಡಿ ತಮ್ಮ ಈ ಲೋಕದ ಎಲ್ಲಾ ಕೆಲಸಗಳನ್ನು ಮುಗಿಸಿ, ಮತ್ತೆ ಬದರಿಕಾಶ್ರಮಕ್ಕೆ ಹೋಗಿ, ವ್ಯಾಸರ ಪಾದಕ್ಕೆರಗಿ ಅಲ್ಲಿ ಅದೃಶ್ಯರಾದರೆಂದು ಮಧ್ವಮತೀಯರ ನಂಬಿಕೆ. ಶ್ರೀಪಾದರಾಜರು ರಚಿಸಿದ ಈ ಮಧ್ವನಾಮಕ್ಕೆ ಮುಂದೆ ಬಂದ ಜಗನ್ನಾಥದಾಸರು ಮೂರು ನುಡಿಗಳ ಫಲಸ್ತುತಿಯನ್ನು ಬರೆದಿದ್ದಾರೆ. ಅಂದರೆ ಜಗನ್ನಾಥದಾಸರ ಕಾಲಕ್ಕೆ ಈ ಕೃತಿಗೆ ಎಂತಹ ಮಾನ್ಯತೆ ದೊರೆತಿತ್ತೆಂದು ತಿಳಿಯುತ್ತದೆ. ಜಗನ್ನಾಥದಾಸರು ಶ್ರೀಪಾದರಾಜರ ಮಧ್ವನಾಮಕ್ಕೆ ರಚಿಸಿರುವ ಫಲಶೃತಿಯ ಕಡೆಯ ನುಡಿಯಲ್ಲಿ ಹೀಗೆ ಹೊಗಳಿದ್ದಾರೆ.

**ಶ್ರೀಪಾದರಾಯರು ಪೇಳಿದ ಮಧ್ವನಾಮ ಸಂ**
**ತಾಪಕಳೆದಖಿಳ ಸೌಖ್ಯವನೀವುದು**
**ಶ್ರೀಪತಿ ಜಗನ್ನಾಥವಿಠಲನ ತೋರಿ ಭವ**
**ಕೂಪಾರದಿಂದ ಕಡೆ ಹಾಯಿಸುವುದು॥**

"ಸಂಸ್ಕೃತದಲ್ಲಿ ತಿವಿಕ್ರಮ ಪಂಡಿತಾಚಾರ್ಯರು ಬರೆದಿರುವ ಶ್ರೀವಾಯು ಸ್ತುತಿಗೆ ಯಾವ ಹಿರಿಮೆ ಇರುವುದೋ ಹಾಗೆಯೇ ಕನ್ನಡದ ಅವತಾರತ್ರಯ ಸ್ತುತಿಗಳಲ್ಲಿ ಶ್ರೀಪಾದರಾಜ ವಿರಚಿತ ಮಧ್ವನಾಮಕ್ಕೆ ಕಾಲದ ದೃಷ್ಟಿಯಿಂದಲೂ, ವಿಷಯ ಪ್ರತಿಪಾದನೆಯ ದೃಷ್ಟಿಯಿಂದಲೂ ಪ್ರಥಮ ಸ್ಥಾನ ಸಲ್ಲುತ್ತದೆ ಎನ್ನಬಹುದು".[೭] ಪುರಾಣ ಮತ್ತು ಇತಿಹಾಸಗಳ ಸಮನ್ವಯ, ಹಾಗೂ ಶ್ರೀಪಾದರಾಜರ ಸಂಸ್ಕೃತ ಜ್ಞಾನ ಇವುಗಳಿಗೆ ಈ ಕೃತಿ ಉತ್ತಮ ನಿದರ್ಶನವಾಗಿದೆ.

### ೭.೨ ಶ್ರೀ ಲಕ್ಷ್ಮಿನೃಸಿಂಹ ಪ್ರಾದುರ್ಭಾವ ದಂಡಕ

ಶ್ರೀಪಾದರಾಜರು ರಚಿಸಿರುವ ಶ್ರೀ ಲಕ್ಷ್ಮಿನೃಸಿಂಹ ಪ್ರಾದುರ್ಭಾವ ದಂಡಕ ದೀರ್ಘವಾದ ಮತ್ತು ವಿಶಿಷ್ಟವಾದ ಕೃತಿ. ಇದರಲ್ಲಿ ಒಟ್ಟು ೫೪೬ ಪಾದಗಳಿವೆ. ಭಾಗವತದ ಸಪ್ತಮಸ್ಕಂದದ ಎಂಟು ಮತ್ತು ಒಂಭತ್ತನೇ ಅಧ್ಯಾಯದಲ್ಲಿ ಬರುವ ಕಥೆಯನ್ನು ಅನುವಾದಿಸಲಾಗಿದೆ. ಶ್ರೀಪಾದರಾಜರು ಯಥಾವತ್ತಾಗಿ ಅನುಕರಿಸದೆ, ಸನ್ನಿವೇಶಕ್ಕೆ ತಕ್ಕಂತೆ ತಮ್ಮ ಕಲ್ಪನೆಯನ್ನು ಮಿತಗೊಳಿಸಿ ಈ ದಂಡಕದ ಸೌಂದರ್ಯವನ್ನು ಹೆಚ್ಚಿಸಿದ್ದಾರೆ. ದಶಾವತಾರದಲ್ಲಿ ಶ್ರೀಹರಿಯು

ನರಸಿಂಹಾವತಾರವೆತ್ತಿ ದೈತ್ಯನಾದ ಹಿರಣ್ಯಕಶಿಪುವನ್ನು ಸಂಹಾರ ಮಾಡಿ ಭಕ್ತ ಪ್ರಹ್ಲಾದನನ್ನು ಅನುಗ್ರಹಿಸುವುದೇ ಇಲ್ಲಿಯ ಕಥಾವಸ್ತು.

ದೈತ್ಯ ಮಕ್ಕಳು ತಮ್ಮ ಗುರುವಿನ ಮಾತನ್ನು ಕೇಳದೆ ಶ್ರೀಹರಿಯ ಭಕ್ತನಾದ ಪ್ರಹ್ಲಾದನನ್ನು ಅನುಸರಿಸಿದಾಗ, ಭಯಭೀತರಾದ ಗುರುಗಳು ಅದನ್ನು ಹಿರಣ್ಯಕಶಿಪುವಿಗೆ ತಿಳಿಸುತ್ತಾರೆ. ತನ್ನ ಶತ್ರುವಾದ ವಿಷ್ಣುವಿನ ಗುಣಗಾನವನ್ನು ತನ್ನ ಮಗನೇ ಮಾಡುತ್ತಿರುವುದನ್ನು ಕೇಳಿ ಕೋಪಗೊಂಡು ಮಗ ಪ್ರಹ್ಲಾದನನ್ನು ಕರೆಸಿ ವಿಚಾರಣೆ ಮಾಡುತ್ತಾನೆ. ಎಷ್ಟು ಹೆದರಿಸಿ ಬೆದರಿಸಿದರೂ ಅಂಜದ ಬಾಲಕ ನಿರ್ಭಯವಾಗಿ 'ನಿನ್ನಾಸುರೀ ಭಾವವಿನ್ನಾದರೂ ನೀ ಬಿಡೋ ನೋಡೋ ಶ್ರೀಕಾಂತನಲ್ ಕಾಂತನಲ್ ಸ್ವಾಂತ ನೀನಿತ್ತು ಸರ್ವತ್ರ ಸಮಚಿತ್ತನಾಗೈಯ ಎನ್ನಯ್ಯನೇ' ಎಂದು ತಂದೆಗೆ ಹಿತೋಪದೇಶವನ್ನು ಮಾಡುತ್ತಾನೆ. ಮಗನ ಈ ನುಡಿಗಳನ್ನು ಕೇಳಿದ್ದೇ ತಡ ಹಿರಣ್ಯಕಶಿಪು ಕೆಂಡಾಮಂಡಲನಾಗಿ ವಿಷ್ಣುವೆಂಬುವನು ಎಲ್ಲಿದ್ದಾನೆ? ತೋರಿಸು ಎಂದು ಕೇಳಿದಾಗ ಪ್ರಹ್ಲಾದನು 'ಸರ್ವತ್ರದಲ್ಲಿಪ್ಪ ನೀನೆಂದಡೇ ಡಿಂಭಕಾಡಂಭಕಾಡೋಣಗಳ್' ಎಂದು ಉತ್ತರವೀಯುತ್ತಾನೆ. ಆಗ 'ಸಾಕು ಮಾಡಿನ್ನು ಮೇಲೀ ಸ್ತಭಾಸ್ತಂಭದಲ್ ಶೀಘ್ರ ಸಂರಂಭದಲ್ ತೋರು' ನೀ ತೋರಿಸದಿದ್ದರೆ ನಿನ್ನ ಶಿರವನ್ನು ಕತ್ತರಿಸುತ್ತೇನೆಂದು ಹೇಳುತ್ತಾ, ವಿಷ್ಣುವನ್ನು ನಾನಾ ರೀತಿಯಲ್ಲಿ ಹೀನಾಯವಾಗಿ ತೆಗಳಿ ಖಡ್ಗವನ್ನು ಝಳಪಿಸಿ, ಮುಷ್ಟಿಯಿಂದ ಒಂದು ಏಟು ಕೊಡುತ್ತಾನೆ. ಈ ಸಂದರ್ಭದಲ್ಲಿ ನರಸಿಂಹದೇವರು ತನ್ನ ಭಕ್ತನ ಮಾತನ್ನು ನಿಜಮಾಡಲು ಕಂಬದಿಂದ ಪ್ರತ್ಯಕ್ಷನಾಗಿ ಬರುತ್ತಾನೆ. ಈ ಸಂದರ್ಭವನ್ನು ಕಣ್ಣಿಗೆ ಕಟ್ಟುವಂತೆ ಮನೋಜ್ಞವಾಗಿ ಚಿತ್ರಿಸಿದ್ದಾರೆ.

**ಭೂತ ಭೇತಾಳಿಕಾ ತಂಡಗಳ್ ಶಾಕಿನೀ**
**ಡಾಕಿನೀ ದಂಡುಗಳ್ ಅಂಜಿ ಬೆಂಡಾದವಾ**
**ಸ್ತಂಭವಾ ವೇಳೆ ಫಟ್ ಫಟಾರಾವದಿಂ**
**ಸೀಳಿಯಾ ಲೇಲಿಹಾನೋಜ್ವಲ ಜ್ವಾಲೆಗಳ್**
**ಮಾಲೆಗಳ್ ತುಂಬಿ ಕಾಳ್ಗಿಚ್ಚುಗಳ್ ಚೆಂದದಿಂ**
**ಜಂತು ಸಂಘಕ್ಕೆ ಸಂತಾಪಗೈಸೇ ಛಿಟಾ**
**ಛೀಟ್ ಛಿಟಾಂಗಾರಗಳ್ ಬೀಸೆ ಇದೇವುದೋ**
**ಭುತ ಉದ್ಭೂತವಾಗೊಪ್ಪಿತೆಂದಾಗ ಮೂ**
**ರ್ಲೋಕವೆಲ್ಲಾ ಸಮುಲ್ಲೋಕವಾಗಿ ಪ್ಪುದಾ**

ವೇಳೆ ತದ್ಭೃತ್ಯವಾಕ್ ಸತ್ಯವಂ ಮಾಡುಬೇ
ಕಾಗಿ ಸರ್ವತ್ರ ತಾನ್ ತನ್ನ ವ್ಯಾಪ್ತತ್ವವಂ
ಪಥ್ಯವಾಗಿಪ್ಪವೋಲ್ ಅದ್ಭುತಾಕಾರ ಪೊ
ತ್ತಂ ಜಗದ್ಭರ್ತ ತಾನೊಂದೆ ಸಿಂಹಾಕೃತೀ
ಯಾಗದೇ ಮರ್ತ್ಯಮೂರ್ತ್ಯಲ್ಲದೇ ತತ್ಸಭಾ
ಸ್ತಂಭದಲ್ ಡಿಂಬ ಸಂಭಾವನಕ್ಕಾಗಿ ಸಂ
ಭೂತನಾದಂ॥

ಶ್ರೀಪಾದರಾಜರು ನರಸಿಂಹದೇವರ ಉಗ್ರ ಸ್ವರೂಪವನ್ನು ಚಿತ್ರಿಸುವಾಗ ಎಷ್ಟು ಭಾವೋದ್ವೇಗಕ್ಕೆ ಒಳಗಾಗಿದ್ದಾರೆಂಬುದನ್ನು ಇಲ್ಲಿ ಕಾಣಬಹುದು. ಹಿರಣ್ಯಕಶಿಪು ನರಸಿಂಹನೊಡನೆ ಯುದ್ಧಕ್ಕೆ ನಿಂತಾಗ, ನರಸಿಂಹದೇವರು ಲೋಕನಿಯಮವನ್ನು ಮೀರಬಾರದೆಂದು ದಾನವನೊಂದಿಗೆ ಯುದ್ಧ ಮಾಡಲು ನಿಂತಾಗ ಅವರಿಬ್ಬರ ನಡುವೆ ಯುದ್ಧವು ತಾರಕಕ್ಕೇರಿ ಭೀಕರ ಸ್ವರೂಪವನ್ನು ಪಡೆದುಕೊಂಡಿತು. ದೇವತೆಗಳೆಲ್ಲಾ ಭಯಭೀತರಾದರು. ಹಿರಣ್ಯಕಶಿಪುವನ್ನು ಕೊಂದ ನರಸಿಂಹದೇವರ ಉಗ್ರಸ್ವರೂಪವನ್ನು ಶಾಂತಗೊಳಿಸಲು ದೇವಾನುದೇವತೆಗಳು ಸರದಿಯಲ್ಲಿ ವಿಜ್ಞಾಪಿಸಿ ಕೊಂಡರೂ ಶಾಂತನಾಗುವುದಿಲ್ಲ. ಬ್ರಹ್ಮ ದೇವರ ವಿನಂತಿಯೂ ವಿಫಲವಾದಾಗ, ಬ್ರಹ್ಮದೇವರ ಕೋರಿಕೆಯಂತೆ ಲಕ್ಷ್ಮಿದೇವಿ ವಿನಂತಿಸಿಕೊಳ್ಳಲು ಮುಂದಾಗುವ ಸಂದರ್ಭವನ್ನು ಸ್ವಾರಸ್ಯಪೂರ್ಣವಾಗಿ ಚಿತ್ರಿಸಿದ್ದಾರೆ.

ಆಮೇಲೆ ಆ ಬಾಲೆ ಸಾ
ಕ್ಷಾಜ್ಜಗನ್ಮೋಹಿನೀ ಲೀಲೆಗಳ್ ಮಿಂಚುತಾ
ಪೂಂಚುತಾ ಬಂದು ಸಿಂಹಾಸನಸ್ಥಾನದಲ್
ಉಗ್ರನಂತಿಪ್ಪನೃಸಿಂಹ ಮೂರ್ತ್ಯುಗ್ರವಂ
ಕಂಡತಿವ್ಯಗ್ರಳಂತಾಗಿ ಆ ತಾಯಿ ಹಿಂ
ದಕ್ಕೆ ತಾ ಬಂದಳಮ್ಮಮ್ಮ ಏಂ ಗುಮ್ಮನಂ
ತಿಪ್ಪನೇ ಸ್ವಾಮಿ ಮನ್ನಿಂತು ಆಶ್ಚರ್ಯವಂ
ಈಸು ವಿಕ್ರಮ್ಯವಂ ಎಂದಿಗಾನೆಲ್ಲಿ ಕಂ
ಡಿಲ್ಲಲ್ಲವಲ್ಲಾ ಕಿವಿಯ್ಯಾದರುಂ ಕೇಳಲೇ
ಇಲ್ಲವಲ್ಲಾ ಇದೇನೋ ವಿಚಿತ್ರಾಕೃತೀ
ಯಂತೆ ತೋರೂವನೆಂದಂಜಿಕೇಗೊಂಡ ರೀ
ತಿಂದ ತಾ ಹೆಜ್ಜೆ ಕಾಲ್ಗೆಜ್ಜೆಗಳ್ ಸಪ್ಪುಳಂ
ಮಾಡದೇ ಮೆಲ್ಲನೇ ಪಾರ್ಶ್ವದಲ್ ನಿಂತಳು॥

"ಸಂಸ್ಕೃತ ಪಾಂಡಿತ್ಯದಲ್ಲಿ ಅದ್ವಿತೀಯರೆನಿಸಿದ ಯತಿವರೇಣ್ಯರು, ಕನ್ನಡದ ಸೊಗಡನ್ನು ಮರೆತವರಲ್ಲವೆನ್ನುವುದಕ್ಕೆ ಅವರು ನರಸಿಂಹ ದೇವರ ಭಯಂಕರಾಕಾರವನ್ನು ಸಾಕ್ಷಾತ್ ಲಕ್ಷ್ಮಿಯೇ 'ಏಂ ಗುಮ್ಮನಂತಿಪ್ಪನೇ ಸ್ವಾಮಿ' ಎಂದು ಹೇಳುವ ಒಕ್ಕಣೆಯಲ್ಲಿ ಕಾಣಬಹುದು. ಆಧ್ಯಾತ್ಮಿಕವಾಗಿ ಲಕ್ಷ್ಮಿಯ ಭಯ ಕೇವಲ ನಟನೆಯೆಂದು ಪಂಡಿತರು ಸಮಾಧಾನ ಕೊಡಲು ಯತ್ನಿಸಿದರೂ, ಶ್ರೀಪಾದರಾಜರ ಈ ಸನ್ನಿವೇಶ ವರ್ಣನೆ ಸಾಕಷ್ಟು ಸಹಜವಾಗಿರುವುದರಿಂದ ಸರ್ವಸಾಮಾನ್ಯರೂ ಕೇಳಿ ಸಂತೋಷ ಪಡುವಂತಿದೆ".[೯]

ಕಡೆಗೆ ಲಕ್ಷ್ಮಿಯೂ ನರಸಿಂಹದೇವರ ಉಗ್ರಸ್ವರೂಪವನ್ನು ಪ್ರಸನ್ನಗೊಳಿಸಲು ಸಾಧ್ಯವಾಗದಾಗ ಬ್ರಹ್ಮದೇವರು ತರಳ ಪ್ರಹ್ಲಾದನನ್ನೇ 'ಬಾರೋ ಎಲೋ ವತ್ಸ ನೀನೀ ನೃಸಿಂಹಾತ್ಮನಲ್ ಮೆಲ್ಲನೆ ಸೇರಿ ನಿಮ್ಮಪ್ಪಗಾಗಿಂದು ನಮ್ಮಪ್ಪನಲ್ಲಿಪ್ಪ ತತ್ಕೋಪ ಸಂಕ್ಷೇಪಗೈಸು' ಎಂದು ಕೇಳುವುದು ಮತ್ತೂ ಸುಂದರವಾಗಿದೆ. ಆಗ ಬಾಲಕ ಪ್ರಹ್ಲಾದನ ಮೊರೆ ಕೇಳಿ ನರಸಿಂಹದೇವರು ಶಾಂತಚಿತ್ತರಾಗಿ ಪ್ರಹ್ಲಾದನನ್ನು ಹತ್ತಿರ ಬರಮಾಡಿಕೊಳ್ಳುವ ದೃಶ್ಯ ಆಪ್ಯಾಯಮಾನವಾಗಿದೆ. ಈ ಸಂದರ್ಭದಲ್ಲಿ ಎಲ್ಲಾ ದೇವತೆಗಳು ಸಂತೋಷಗೊಳ್ಳುತ್ತಾರೆ. ದೇವರನ್ನು ನಾನಾ ರೀತಿಯಲ್ಲಿ ಪೂಜಿಸುತ್ತಾರೆ. 'ತಂತ್ರಸಾರೋಕ್ತದಿಂ ದೇವನಂ' ಪೂಜಿಸಿದರು ಎನ್ನುವಲ್ಲಿ ಶ್ರೀಪಾದರಾಜರ ಮಧ್ವ ತತ್ವದ ನಿಷ್ಠೆಯನ್ನು ಕಾಣಬಹುದು. ಕಡೆಯ ಸಾಲುಗಳಲ್ಲಿ ಈ ದಂಡಕವನ್ನು ಓದಿದವರಿಗೆ ಶ್ರೀ ನರಸಿಂಹನ ಕೃಪಾಕಟಾಕ್ಷಕ್ಕೆ ಒಳಗಾಗುವರೆಂದು ಹೇಳುತ್ತಾರೆ. ಹೀಗೆ ನರಸಿಂಹನನ್ನು ಸ್ತುತಿಸುತ್ತಾ ಶಾಂತಭಾವದ ಭಕ್ತಿಯಿಂದ ಮುಕ್ತಾಯ ಮಾಡಿದ್ದಾರೆ.

ಶ್ರೀಲಕ್ಷ್ಮಿ ನೃಸಿಂಹಪಾದುರ್ಭಾವ ದಂಡಕದಲ್ಲಿ ಶ್ರೀಪಾದರಾಜರ ಕನ್ನಡ ಮತ್ತು ಸಂಸ್ಕೃತ ಭಾಷೆಯ ಅಭಿರುಚಿ, ಭಾಗವತ ಪ್ರಜ್ಞೆ, ವರ್ಣನಾ ಕೌಶಲ್ಯ, ಹಾಗೂ ಅವರ ಕಲ್ಪನಾ ಸಾಮರ್ಥ್ಯವನ್ನು ಗಮನಿಸಬಹುದು. ಸಂದರ್ಭಕ್ಕೆ ತಕ್ಕಂತೆ ಬಳಸಿರುವ ಬಿಗಿಯಾದ ಭಾಷೆ, ಅನುಕರಣಾವ್ಯಯಗಳೂ ಪ್ರಾಸಗಳು ಕೃತಿಗೆ ಸೊಬಗನ್ನು ನೀಡಿದೆ. ಸಂಭಾಷಣಾ ತಂತ್ರದಿಂದ ಎದ್ದು ಕಾಣುವ ನಾಟಕೀಯ ಅಂಶಗಳು, ಹಲವಾರು ರಸಮಯ ವೃತ್ತಾಂತಗಳಿಂದ ಕೂಡಿರುವ ಈ ದೀರ್ಘಕೃತಿ ಒಂದು ಕಿರು ಕಾವ್ಯದಂತಿದೆ. ಪ್ರತಿಪಾದದಲ್ಲೂ ಓದುಗರ ಆಸಕ್ತಿಯನ್ನು ಕುತೂಹಲವನ್ನು ಕೆರಳಿಸುತ್ತಾ ಸಾಗುತ್ತದೆ. ಹೀಗೆ ಹಲವು ದೃಷ್ಟಿಯಿಂದ ಇದು ದಾಸಸಾಹಿತ್ಯದಲ್ಲೇ ವಿಶಿಷ್ಟವಾದ ಕೃತಿಯಾಗಿದೆ.

ಹರಿದಾಸ ರಲ್ಲಿ ದಂಡಕವನ್ನು ಮೊದಲು ಬಳಸಿದವರು ಶ್ರೀಪಾದರಾಜರು. 'ಶ್ರೀಲಕ್ಷ್ಮಿನರಸಿಂಹ ಪ್ರಾದುರ್ಭಾವ ದಂಡಕ' ಶ್ರೀಪಾದರಾಜರ ಇತರ ಗೇಯ ಕೃತಿಗಳಿಂತ ಭಿನ್ನವಾದದ್ದು. 'ಹರಿದಾಸರಲ್ಲಿ ನಮಗೆ ಸಿಕ್ಕಿರುವ ದಂಡಕ ಇದೊಂದೇ' ಎಂದು ಡಾ॥ ಟಿ. ಎನ್. ನಾಗರತ್ನ ಅವರು ತಿಳಿಸುತ್ತಾರೆ.೧೧೦ ಆದರೆ ಹತ್ತೊಂಬತ್ತನೇ ಶತಮಾನದ ಹರಿದಾಸರಲ್ಲಿ ದಂಡಕದ ಬಳಕೆಯಾಗಿರುವುದನ್ನು ಅನಂತಪದ್ಮನಾಭರಾವ್ ಗುರುತಿಸಿದ್ದಾರೆ.೧೧೧ ತಿಪ್ಪಾಣಾರ್ಯ, ಶ್ರೀನಿವಾಸ ದಾಸರು, ಗೋಕಾವಿ ಅನಂತಾಚಾರ್ಯರು ಮೊದಲಾದ ದಾಸರು ಗದ್ಯ ದಂಡಕಗಳನ್ನು ರಚಿಸಿದ್ದಾರೆ.

**೭.೩ ವೈಕುಂಠ ವರ್ಣನೆ :**

ವೈಕುಂಠವರ್ಣನೆ ೩೮೮ ನುಡಿಗಳ ಒಂದು ಹಾಡುಗಬ್ಬ, ವೈಷ್ಣವ ಸಿದ್ಧಾಂತದ ತತ್ವಗಳನ್ನು ಸಂಸ್ಕೃತ ಮೂಲದಿಂದ ಅರಿಯಲು ಸಾಧ್ಯವಾಗದ ಸಾಮಾನ್ಯರಿಗೆ ಈ ಕೃತಿ ರಚಿತವಾಗಿದೆ. ವೇದ, ಉಪನಿಷತ್ತು, ಪುರಾಣಗಳಲ್ಲಿಯ ಸಂಸ್ಕೃತ ಉಕ್ತಿಗಳನ್ನು ಉದಾಹರಿಸಿ ಅವುಗಳಲ್ಲಿ ನಿರೂಪಿತವಾದ ವಿಷಯಗಳನ್ನು ಕನ್ನಡದಲ್ಲಿ ನಿರೂಪಿಸಲಾಗಿದೆ. ವಾದಿರಾಜರಿಂದ ರಚಿಸಲ್ಪಟ್ಟ ಕಾವ್ಯಗಳಲ್ಲಿ ಅತ್ಯಂತ ದೊಡ್ಡ ಕೃತಿ ಇದು. ಇದರಲ್ಲಿ ಒಟ್ಟು ನಾಲ್ಕು ಸಂದಿಗಳಿವೆ. ದ್ವೈತ ಸಿದ್ಧಾಂತಕ್ಕೆ ಅನುಸಾರವಾಗಿ ಮೋಕ್ಷ, ಲಯ, ಸೃಷ್ಟಿ, ಸ್ಥಿತಿ, ಇವುಗಳ ಸ್ವರೂಪವನ್ನು ಒಂದೊಂದು ಸಂಧಿಯಲ್ಲಿ ವಿವರಸಿದ್ದಾರೆ. ವೈಕುಂಠ ಎಂಬುದು ವಿಷ್ಣುವಿನ ಹೆಸರೂ ಹೌದು ವಿಷ್ಣುವಿನ ರಾಜಧಾನಿಯ ಹೆಸರೂ ಹೌದು. ಆದ್ದರಿಂದ 'ವೈಕುಂಠವರ್ಣನೆ' ಎಂದರೆ ವಿಷ್ಣುವಿನ ವರ್ಣನೆಯೇ ಆಗಿದೆ. ವಿಷ್ಣುವಿನ ಮಹಿಮೆಗಳ ನಿರೂಪಣೆಯೇ 'ತತ್ವಸಾರ' ವಿಷ್ಣುವಿನ ಮಹಿಮೆಗಳ ಜ್ಞಾನವೆ'ತತ್ವಜ್ಞಾನ'.

**ತತ್ವಸಾರದ ಸೊಬಗ ಧರೆಯೊಳು**
**ವಿಸ್ತರಿಸಬೇಕೆಂದು ಮುನಿಕುಲ**
**ರತ್ನ ಶ್ರೀಗುರುವಾದಿರಾಜನು, ಶ್ರುತಿ ಪುರಾಣಗಳ**
**ಮೊತ್ತವನು ನೆರೆ ಮಥಿಸಿ ಮೇಲಣ**
**ಮುಕ್ತಿ ಸೃಷ್ಟಿ ಸ್ಥಿತಿಲಯಗಳ**
**ಅರ್ಥಿಯಿಂದಲಿ ಬಣ್ಣಿಸಿದ ಕಥೆ ಕೇಳಿ ಸಜ್ಜನರು**೧೧೨

ಭಗವನ್ಮಹಿಮೆಗಳ ಸೊಬಗನ್ನು ಜನರಿಗೆ ತಿಳಿಸಬೇಕೆಂದು, ವೇದಪುರಾಣಗಳ ತಾತ್ಪರ್ಯವನ್ನು ವಿಮರ್ಶಿಸಿ ಮೋಕ್ಷ, ಸೃಷ್ಟಿ, ಸ್ಥಿತಿ, ಲಯ ಸಂಬಂಧಿಯಾದ ನಿರ್ಣಯಗಳನ್ನು ವಾದಿರಾಜರು ಇಲ್ಲಿ ಮಂಡಿಸಿದ್ದಾರೆ. ಇದು ಪುಣ್ಯ ಕಥೆ, ಇದು ಮಾರುತಿಯ ಪಥ, ಇದನ್ನು

ಕೇಳುವವನೇ ಕೃತಾರ್ಥ ಎನ್ನುತ್ತಾರೆ.

**ಕನ್ನಡಿಯೊಳಿಪ್ಪಂಥ ಪೂರ್ಣಪ್ರಜ್ಞರ ಮತ**
**ದುನ್ನತ ತತ್ವಸಾರವನು**
**ಕನ್ನಡಿಸಿ ಬಣ್ಣಿಸಿದ ವಾದಿರಾಜಮುನಿಯ**
**ಬಿನ್ನಪವನೆಲ್ಲರು ಮನ್ನಿಪುದು॥**

ಮಧ್ವಾಚಾರ್ಯರ ಕೃತಿಗಳು ಉತ್ಕೃಷ್ಟವಾದ ತತ್ವಗಳಸಾರ. ಅದನ್ನು ಕನ್ನಡಿಸಿದ್ದಷ್ಟೇ ತಮ್ಮ ಕೆಲಸ ಎಂಬ ವಿನಯ ವಾದಿರಾಜರದು. ಕ್ಲಿಷ್ಟವಾದ ವಿಷಯಗಳ ನಿರೂಪಣೆಯೂ ಕ್ಲಿಷ್ಟವಾಗಬಾರದು ಎಂದು ವಿವಿಧ ತಾಳ, ಲಯ, ರಾಗಗಳನ್ನು ಬಳಸಿದ್ದಾರೆ.

**ಮೇಲೆನಿಪ ನಾಟ ಮೊದಲಾದ ರಾಗಂಗಳ**
**ತಾಳಮೇಳದಿ ನಾಲ್ಕು ಸಂಧಿ**
**ಶ್ರೀಲೋಲ ಚರಿತೆ ತತ್ವ ರಹಸ್ಯದ**
**ಮಾಲೆಪೇಳ್ವೆರಿಗಲಂಕಾರ॥**

ಹೀಗೆ ಶ್ರೀಲೋಲ ಚರಿತೆಯ ತತ್ವರಹಸ್ಯದ ಮಾಲೆಯನ್ನು ಕಟ್ಟಲು ಅತ್ಯಂತ ಜನಪ್ರಿಯವಾದ 'ಸಾಂಗತ್ಯ' ಛಂದಸ್ಸನ್ನು ಪ್ರಾಸಾನುಪ್ರಾಸಗಳನ್ನು ವಾದಿರಾಜರು ಆಶ್ರಯಿಸಿದ್ದಾರೆ.

**ಇಂದ್ರನ್ನ ರಾಜ್ಯವ ತಂದನ್ನಶುಭಗುಣ**
**ಸಾಂದ್ರನ್ನ ಸುರಸಭಾ ಚಂದ್ರನ್ನ**
**ನಂದನ್ನಕಂದನ ವಂದ್ಯನ್ನ ನಿತ್ಯಾ**
**ನಂದನನು ತುತಿಪೆ ಮುಕುಂದನ್ನ**

**ಶೌರಿಯ ನೆನವೆನು ದಾರಿಯನ ಕುಜನರ**
**ವೈರಿಯ ಮಂದರೋದ್ಧಾರಿಯ**
**ಹರಿಯ ದುರಿತನಿವಾರಿಯ ಸುಜನೋಪ**
**ಕಾರಿಯ ಮುಕುತಿಗೆ ದಾರಿಯ**

**ನೀಲನ್ನ ನಿಜಜನಪಾಲನ್ನ ನಿರ್ಮಲ**
**ಶೀಲನ್ನ ಸುಚರಿತ್ರ ಜಾಲನ್ನ**
**ಬಾಲನ್ನ ಸಂಗೀತ ಲೋಲನ್ನ ತುತಿಪೆನು**
**ಕಾಲನವರಿಗೆ ಅನಲನ್ನ**

**ಇಷ್ಟನ್ನ ದುರಿತಾಘಟ್ಟರನ್ನ ಜಗಕತಿ**
**ದಿಟ್ಟನ್ನ ಸತತ ಸಂತುಷ್ಟನ್ನ**

**ಶಿಷ್ಟನ್ನ ಶುಭಗುಣ ಪುಷ್ಟನ್ನ ತುತಿಪೆನು**
**ತೃಷ್ಟನ್ನ ಶ್ರುತಿಗಿಂಬುಗೊಟ್ಟನ್ನ**

**ರಂಗನ್ನ ಕರುಣಾಂತರಂಗನ್ನ ಖಲಕುಲ**
**ಭಂಗನ್ನ ಮುನಿಜನ ಸಂಗನ್ನ**
**ಅಂಗಜಾನಂಗನ್ನಜನ್ನಕ ನಿತ್ಯಕಶು**
**ಭಾಂಗನ್ನ ತುತುಪೆನುತ್ತುಂಗನ್ನ॥**

ವೈಕುಂಠ ವರ್ಣನೆ ಕಾವ್ಯವನ್ನು 'ತತ್ವಸಾರದ ಸೊಬಗಿನ ಸೋನೆ' ಎಂದು ವಾದಿರಾಜರು ಕರೆಯುತ್ತಾರೆ. 'ಸೊಬಗಿನ ಸೋನೆ' ಎಂಬ ಪದಪ್ರಯೋಗ ಇಲ್ಲಿ ಗಮನಾರ್ಹವಾದದ್ದು. ಸೊಬಗಿನ ಸೋನೆ ಲಯ, ಸೊಬಗಿನ ಸೋನೆಯಮಟ್ಟು, ಸೊಬಗಿನ ಸೋನೆ ವರ್ಣ, ಸೊಬಗಿನ ಸೋನೆಯ ರಚನೆ – ಇತ್ಯಾದಿಗಳು. ತ್ರಿಪದಿಯ ಹಾಡುವ ಧಾಟಿಯಿಂದ ಹುಟ್ಟಿ ಸಾಂಗತ್ಯದ ಸಿದ್ಧರೂಪಕ್ಕೆ ದಾರಿಮಾಡಿಕೊಟ್ಟ ರಚನೆಗಳು.

ಮೊದಲನೆಯ ಮೋಕ್ಷಸಂದಿಯಲ್ಲಿ ಭಗವದ್ರೂಪಗಳನ್ನು ಮಧ್ವಸಿದ್ಧಾಂತದ ತಾರತಮ್ಯದ ಪ್ರಕಾರ ಸ್ತುತಿಸುತ್ತಾರೆ. ಮಧ್ವಾಚಾರ್ಯರ ಅವತಾರತ್ರಯವನ್ನು ವಾಯುವಿನ ಅವತಾರವೆಂಬುದನ್ನು ವೇದ–ಪುರಾಣಗಳ ನಿದರ್ಶನದ ಮೂಲಕ ಸಮರ್ಥಿಸುತ್ತಾರೆ. ಮಾಯಾವಾದದ ನಿರಾಕರಣೆ, ಹರಿಸರ್ವೋತ್ತಮತ್ವ, ಇಂದ್ರಿಯಗಳನ್ನು ಹರಿಸೇವೆಗಾಗಿ ಮೀಸಲಿಟ್ಟು ಅವುಗಳನ್ನು ಸಾರ್ಥಕವಾಗಿ ಬಳಸಿಕೊಳ್ಳಬೇಕೆಂಬ ಸಂದೇಶ, ಜೀವಬ್ರಹ್ಮರಿಗೆ ಇರುವ ಬೇಧ, ವೈಕುಂಠದ ಹಿರಿಮೆ, ವೈಕುಂಟಪುರದ ಸುಂದರ ವರ್ಣನೆಗಳನ್ನು ಕಾಣಬಹುದು.

**ಲೋಕೈಕನಾಥ ನಾರಾಯಣನಿಗೆ ಪ್ರಿಯವಾದ**
**ವೈಕುಂಠಪುರಿಯ ವರ್ಣಿಪೆನು**
**...............................................**

**ಅರ್ಕಕೋಟಿಗಳಂತೆ ವೈಕುಂಠಲೋಕ ದಶ**
**ದಿಕ್ಕಿನೊಳಗೆ ಬೆಳಗುವುದು**
**ಲಕುಮಿಗಲ್ಲದೆ ಇಂತ ಕಾಂತಿ ಮಿಕ್ಕವರಿಗೆ**
**ಬರ್ಕೇ ನೀವೇ ವಿಚಾರಿಸಿರೋ॥**

ಅಲ್ಲದೆ ಮುಕ್ತರ ಸ್ವರೂಪ, ವರ್ತನೆ, ಮುಕ್ತರು ಯೋಗ್ಯತಾನುಸಾರ ಸಾಮುಖ್ಯ, ಸಾರೂಪ್ಯ, ಸಾಲೋಕ್ಯ, ಸಾಮೀಪ್ಯರೂಪ ಚತುರ್ವಿಧ ಮುಕ್ತಿಯನ್ನು ಪಡೆಯುವ ಬಗೆ ಮುಂತಾದ

ವಿಚಾರಗಳನ್ನು ವರ್ಣಿಸಲಾಗಿದೆ.

ಎರಡನೆಯ ಲಯಸಂಧಿಯಲ್ಲಿ ಮುಕ್ತಿಯ ಪೂರ್ವಾವಸ್ಥೆಯನ್ನು ವರ್ಣಿಸುತ್ತದೆ. ಸೃಷ್ಟಿಯಾದ ಮೇಲೆ ಬ್ರಹ್ಮದೇವರಿಗೆ ನೂರು ವರ್ಷ ಕಳೆದ ಕೂಡಲೇ ಲಯವಾಗುವುದು. ಸೃಷ್ಟಿಯಾದ ಜೀವಿಗಳಿಗೆ ತಕ್ಕ ಗತಿಯನ್ನು ನೀಡುವ ಸಲುವಾಗಿಯೇ ಶ್ರೀಹರಿಯು ಲಯ ಮಾಡುವನು. ಮೂಲ ಪ್ರಕೃತಿಯಲ್ಲಿ ಎಲ್ಲಾ ತತ್ವಗಳು ಲಯವಾಗುವುದು. ಎಲ್ಲಾ ಜೀವರಾಶಿಗಳಂತೆ ಮುಕ್ತರೂ ಗರುಡ, ಶೇಷರಿಂದ ಬ್ರಹ್ಮನಲ್ಲಿ ಸೇರಿ ಹರಿಯುದರ ಪ್ರವೇಶ ಮಾಡುವರು. ಎಲ್ಲಾ ಜೀವರನ್ನು ಹೊಟ್ಟೆಯಲ್ಲಿಟ್ಟುಕೊಂಡ ಹರಿಯು ಪವಡಿಸುವನು.

**ಎಲ್ಲ ಜೀವರ ತನ್ನ ಪೊಟ್ಟೆಯೊಳಿಟ್ಟು ಸಿರಿ**
**ಯೊಲ್ಲಭ ನಿದ್ರೆಗೊಳಿಸಿದ**
**ಸಲ್ಲೀಲೆಯಿಂದಲಿ ಸತಿಯೊಡನಾಡುವ**
**ಉಲ್ಲಾಸಗಳ ಕಾಣದಂತೆ॥**

ಪ್ರಳಯ ಕಾಲದಲ್ಲಿ ಬಾಲರೂಪಿನಿಂದ ಆಲೆದೆಲೆಯ ಮೇಲೆ ಮಲಗುವುದು. ಇಂತಹ ಪ್ರಳಯ ಕಾಲದಲ್ಲೂ ಹರಿಯ ಮೂರು ಲೋಕಗಳಲ್ಲೂ ಲಯವಿಲ್ಲದಿವುರುದು. ದುರ್ಗಾರೂಪಿಯಾದ ಲಕ್ಷ್ಮಿಯು ಹರಿಯನ್ನು ಸ್ತುತಿಸಿ ನಿದ್ರೆಯಿಂದ ಎಚ್ಚರಿಸಿ ಮತ್ತೆ ಸೃಷ್ಟಿಕಾರ್ಯದಲ್ಲಿ ಮಗ್ನನಾಗುವಂತೆ ಪ್ರಾರ್ಥಿಸುವುದು, ಶ್ರೀಹಿರಯು ಕಣ್ತೆರೆದು ಪುನಃ ಸೃಷ್ಟಿಕ್ರಿಯೆಯಲ್ಲಿ ತೊಡಗುವ ಸಂಕಲ್ಪ ಮಾಡಿದ್ದು, ಇನ್ನೂ ಮುಂತಾದ ವಿವರಗಳಿವೆ.

ಮೂರನೇ ಸೃಷ್ಟಿ ಸಂಧಿಯಲ್ಲಿ ಹಿಂದಿನ ಕಲ್ಪದಲ್ಲಿ ಮುಕ್ತರಾದ ಜೀವಿಗಳಿಗೆ ಮಾತ್ರವಲ್ಲದೆ ಮತ್ತೊಂದು ತಂಡದ ಜೀವರಾಶಿಗಳಿಗೆ ಗತಿಯನ್ನೀಯಲು ಹರಿಯು ಜಗತ್ತನ್ನು ಸೃಷ್ಟಿ ಮಾಡಿದ. ಸತ್ವ, ರಜಸ್, ತಮೋ ಗುಣಗಳ ಸೃಷ್ಟಿ, ಬೆಳಗುವ ಪದ್ಮದಲ್ಲಿ ಬ್ರಹ್ಮನ ಉದಯ, ಕಮಲ ದಳಗಳಲ್ಲಿ ಹದಿನಾಲ್ಕು ಲೋಕಗಳು ಉದಯಿಸಿದ್ದು, ವಾಯುದೇವರಾಗಿದ್ದವರು ಬಹಳಕಾಲ ತಪಸ್ಸು ಮಾಡಿ ಬ್ರಹ್ಮ ಪದವಿ ಪಡೆದುದರ ವಿವರಗಳಿವೆ.

**ಮೊದಲಾ ಬ್ರಹ್ಮನಿಗೆ ಮುಕ್ತಿಪದವಿಯನಿತ್ತು**
**ಳಿದದ ಮುಖ್ಯಪ್ರಾಣನನಿಗೆ**
**ಪದುಮ ಸಂಭವನೆಂಬ ಪಟ್ಟವನ್ನಿತ್ತು ಈ**
**ಹದಿನಾಲ್ಕು ಲೋಕವನಾಳೆಂದ॥**

ಅಲ್ಲದೆ ಜಗತ್ತು ಸೃಷ್ಟಿಯಾದ ಮೇಲೆ ದೈತ್ಯರ ಉಪಟಳ ಹೆಚ್ಚಾದಾಗ ಶ್ರೀಹರಿಯು ದಶಾವತಾರಗಳನ್ನು ತಾಳಿ ದುಷ್ಟರನ್ನು ಕೊಂದು ಭಕ್ತರನ್ನು ರಕ್ಷಿಸಿದ್ದು ಮೊದಲಾದ ವಿವರಗಳು ಬರುತ್ತದೆ. ಈ ಮೂರನೇ ಸಂಧಿಗೆ ಸೊಬಗಿನ ಸೋನೆ ಎಂಬ ಹೆಸರು ಬಂದಿದೆ.

ನಾಲ್ಕನೆಯ ಸ್ಥಿತಿ ಸಂಧಿಯಲ್ಲಿ ಶ್ರೀಹರಿಯ ರೂಪ, ಗುಣಗಳ ವರ್ಣನೆ, ಊರ್ಧ್ವಪುಂಡ್ರಧಾರಣ, ತಪ್ತಮುದ್ರಧಾರಣವನ್ನು ವೇದಗಳ ಆಧಾರದೊಂದಿಗೆ ಸಮರ್ಥಿಸಿದ್ದಾರೆ. ವೈಷ್ಣವ ಲಾಂಛನಗಳು, ತ್ರಿವಿಧ ಜೀವರ ಬೇಧಗಳನ್ನು ಹರಿಯ ಗುಣಗಳನ್ನು ವಿವರಿಸಿದ್ದಾರೆ.

**ಹರಿಯೆ ಸರ್ವೋತ್ತಮ ಹರಿಯೆ ಪರದೇವತೆ**
**ಹರಿಯೆ ಸಕಲ ವೇದವೇದ್ಯ**
**ನಿರುಪಮ ಸತ್ಕೀರ್ತಿ ನಿತ್ಯನಿರ್ಮಲಮೂರ್ತಿ**
**ಸುರಚಕ್ರವರ್ತಿ ಜಯತು ಜಯತು॥**

ಒಟ್ಟಾರೆ ಈ ಕೃತಿಯಲ್ಲಿ ದ್ವೈತ ಸಿದ್ಧಾಂತದ ತತ್ವದ ಹಿನ್ನೆಲೆಯಲ್ಲಿ ಹರಿಸರ್ವೋತ್ತಮತ್ವ, ಹರಿಯ ಹಿರಿಮೆಗಳನ್ನು ಎತ್ತಿಹಿಡಿದಿದ್ದಾರೆ.

### ೭.೪ ಲಕ್ಷ್ಮೀ ಶೋಭಾನೆ

ಲಕ್ಷ್ಮಿ ಶೋಭಾನೆ ೧೧೩ ನುಡಿಗಳ ಹಾಡಗಬ್ಬ, ಲಕ್ಷ್ಮಿಯು ತನ್ನ ಸ್ವಯಂವರದಲ್ಲಿ ಉಳಿದ ದೇವತೆಗಳನ್ನೆಲ್ಲ ಬಿಟ್ಟು ನಾರಾಯಣನನ್ನು ವರಿಸಿ ಮದುವೆಯಾಗಿದ್ದು ಈ ಕೃತಿಯ ವಸ್ತು. ಎಲ್ಲ ದೇವತೆಗಳಲ್ಲೂ ಒಂದಲ್ಲ ಒಂದು ದೋಷವಿದೆ. ವಿಷ್ಣು ಒಬ್ಬನೇ ದೋಷವರ್ಜಿತ, ಅವನ ಅವತಾರಗಳಲ್ಲಿ ದೋಷಗಳೆಂದು ತೋರುವ ಅಂಶಗಳು ದೋಷಗಳಲ್ಲ, ಎಂಬ ಪ್ರತಿಪಾದನೆಯೇ ಈ ಕೃತಿಯ ಆಶಯ, ಸಮದ್ರ ಮಥನ, ಲಕ್ಷಿಯ ಆವಿರ್ಭಾವ, ಲಕ್ಷ್ಮಿಯ ಸ್ವಯಂವರ ಲಕ್ಷ್ಮಿಯು ಹರಿಗೆ ಉರುಟಣೆ ಮಾಡುವುದು. ಕೃಷ್ಣನಿಗೆ ಬಾಗಿಲು ಕಟ್ಟುವುದು, ಆರತಿ ಹಾಡು ಮೊದಲಾದವುಗಳ ಹಿನ್ನಲೆಯಲ್ಲಿ ಶ್ರೀಹರಿಯ ಸರ್ವೋತ್ತಮತ್ವವನ್ನು ನಿರೂಪಿಸುವ ಖಂಡ ಕಾವ್ಯ ಇದು. ಈ ಕಾವ್ಯದ ಪ್ರಾರಂಭವೇ ನಾರಾಯಣನ ಸ್ತುತಿಯಿಂದ ಪ್ರಾರಂಭವಾಗುತ್ತದೆ.

**ಶೋಭನವೆನ್ನಿರೆ ಸುರರೊಳು ಸುಭಗನಿಗೆ**
**ಶೋಭನವೆನ್ನಿ ಸುಗುಣನಿಗೆ**
**ಶೋಭನವೆನ್ನಿ ತ್ರಿವಿಕ್ರಮರಾಯಗೆ**
**ಶೋಭನವೆನ್ನಿ ಸುರಪ್ರಿಯಗೆ**

**ಲಕ್ಷ್ಮಿ ನಾರಾಯಣರ ಚರಣಕ್ಕೆ ಶರಣೆಂಬೆ**
**ಪಕ್ಷಿವಾಹನ್ನಗೆರಗುವೆ**
**ಪಕ್ಷಿವಾಹನ್ನಗೆರಗುವೆ ಅನುದಿನ**
**ರಕ್ಷಿಸಲಿ ನಮ್ಮ ವಧುವರರ**

**ಪಾಲಸಾಗರವನ್ನು ಲೀಲೆಯಲಿ ಕಡೆಯಲು**
**ಬಾಲೆ ಮಹಲಕ್ಷುಮಿ ಉದಿಸಿದಳು**

**ಬಾಲೆ ಮಹಲಕ್ಷುಮಿ ಉದಿಸಿದಳಾದೇವಿ**
**ಪಾಲಿಸಲಿ ನಮ್ಮ ವಧುವರರ॥**

ದೇವದಾನವರು ಅಮೃತಕ್ಕಾಗಿ ಕ್ಷೀರ ಸಮುದ್ರವನ್ನು ಮಥನ ಮಾಡಿದಾಗ ಆವಿರ್ಭವಿಸಿದ ಲಕ್ಷ್ಮಿ ನಮ್ಮ ವಧೂವರರ ಪಾಲಿಸಲಿ ಎಂಬ ಶುಭ ಹಾರೈಕೆಯೊಂದಿಗೆ ಈ ಕೃತಿ ಪ್ರಾರಂಭವಾಗುತ್ತದೆ. ಚತುರ್ಭುಜೆಯಾದ ಲಕ್ಷ್ಮಿ ಎರಡು ಕೈಗಳಲ್ಲಿ ಕಮಲವನ್ನು ಧರಿಸಿ, ಒಂದು ಹಸ್ತದಿಂದ ಅಭಯ ನೀಡುತ್ತ ಮತ್ತೊಂದು ಕರದಿಂದ ವರಗಳ ನೀಡುತ್ತ. ಭಕ್ತರಾದವರಿಗೆ ಕುಂದಿಲ್ಲದ ಆನಂದ ಸಂದೇಹವನ್ನು ಉಣಬಡಿಸುವ ಜಗನ್ಮಾತೆ ಅವಳು. ಉಟ್ಟ ಪೀತಾಂಬರ, ಉಲಿವ ಕಿಂಕಿಣಿಗಳು, ನಲಿವ ಕಾಲಂದಿಗೆ, ಮುತ್ತಿನ ಓಲೆ, ಕಸ್ತೂರಿತಿಲಕ, ಮುತ್ತಿನ ಅಕ್ಷತೆ, ನವರತ್ನದ ಮಕುಟ, ಇವುಗಳಿಂದ ಶೋಭಿಸುವ ಕುಂದಣವರ್ಣದ ಕೋಮಲೆ. ಸಾಗರ ಮಧ್ಯದಿಂದ ಆವಿರ್ಭವಿಸಿದ ಲಕ್ಷ್ಮಿ ತನ್ನ ಸುತ್ತಲೂ ನೆರೆದ ಋಷಿಮುನಿಗಳ ದೇವತೆಗಳನ್ನು ನೋಡಿದಳು. ಒಬ್ಬೊಬ್ಬರಲ್ಲಿ ಅವಳಿಗೆ ಒಂದೊಂದು ನ್ಯೂನತೆ ಕಂಡಿತು. ಯಾರು ಪರಿಪೂರ್ಣರೆನಿಸಲಿಲ್ಲ. ಪ್ರಕೃತಿ ಸಹಜವಾದ ಅನೇಕ ಲೋಪದೋಷಗಳು, ವಿಕೃತಿಗಳು, ಬ್ರಹ್ಮ, ರುದ್ರ, ಇಂದ್ರ, ದಿಕ್ಪಾಲಕರು, ಋಷಿಗಳು, ಗ್ರಹಗಳು ಎಲ್ಲರಲ್ಲೂ ಉಂಟು. ನಿರ್ದೋಷ ಎಂದರೆ ಶ್ರೀಹರಿ ಒಬ್ಬನೇ. ಸುಖದುಃಖಗಳಲ್ಲಿ ಜೀವಿಸುವ ಯಾವ ಜೀವಿಯು ದುಃಖದೂರಳಾದ ತನಗೆ ಸರಿಸಮವಲ್ಲ ಎಂದು ಲಕ್ಷ್ಮಿ ಭಾವಿಸುತ್ತಾಳೆ. ಜಗದೊಡೆಯನಿಗೆ ತನ್ನನ್ನು ಸಮರ್ಪಿಸಿಕೊಂಡಿರುವ ಇವರು ಯಾರ ಜೊತೆಯಲ್ಲೂ ತಾನು ಪತ್ನಿಯಾಗಿ ಸಂಬಂಧ ಕಲ್ಪಿಸಿಕೊಳ್ಳಲೂ ಸಾಧ್ಯವಿಲ್ಲ, ಎಲ್ಲರೂ ಹರಿಯ ಸಂಬಂಧಿಗಳೇ.

**ಒಬ್ಬನವನ ಮಗ, ಮತ್ತೊಬ್ಬನವನ ಮೊಮ್ಮಗ**
**ಒಬ್ಬನವನಿಗೆ ಶಹನಾಯ**
**ಒಬ್ಬನವನ ಹೊರುವ ಮತ್ತಿಬ್ಬರವನಿಗಂಜಿ**
**ಅಬ್ಬರದಲಾವಾಗ ಸುಳಿವರು॥**

ಬ್ರಹ್ಮಮಗ, ರುದ್ರಮೊಮ್ಮಗ, ಆದಿಶೇಷ ಹಾಸಿಗೆ, ಗರುಡವಾಹನ ಸೂರ್ಯಚಂದ್ರರು ಶ್ರೀಹರಿಗೆ ಹೆದರಿ ಆಕಾಶದಲ್ಲೇ ಇರುವರು. ಎಲ್ಲ ದೇವತೆಗಳಲ್ಲೂ ಒಂದೊಂದು ಶ್ರೇಷ್ಠಗುಣವಿರಬಹುದು, ಆದರೆ ಅವರಿಗೆ ಅವರದೇ ಆದ ದೋಷಗಳೂ ಇವೆ. ಆದರೆ ನಿರನಿಷ್ಠ, ನಿರವದ್ಯ, ದುರಿತದೂರ, ದೋಷರಹಿತ, ಶ್ರೀಹರಿ ಒಬ್ಬನೇ, ಹಸಿವು, ತೃಷೆ, ಜರೆ ಮರಣ, ರೋಗಗುಜಿನಗಳಿಗೆ ಒಳಗಾಗದವನು. ಅಸುರ ಪಿಶಾಚಿಗಳ ಭಯದಿಂದ ದೂರನಾದ, ವ್ಯಸನರಹಿತನಾದವನು. ಹೀಗೆ ಲಕ್ಷ್ಮಿ ಹರಿಯಸರ್ವೋತ್ತಮತ್ವವನ್ನು ಪ್ರಶಂಸಿಸುತ್ತಾ ಶ್ರೀಕಾಂತನ ಬಳಿಗೆ ಬಂದಳು.

**ಕಂದರ್ಪಕೋಟಿಗಳ ಗೆಲುವ ಸೌಂದರ್ಯದ**
**ಚೆಂದವಾಗಿರ್ದ ಚೆಲುವನ**
**ಇಂದಿರೆ ಕಂಡು ಇವನೆ ತನಗೆ ಪತಿ**

ಯೆಂದವನ ಬಳಿಗೆ ನಡೆದಳು

ಈ ತರದ ಸುರರ ಸುತ್ತ ನೋಡುತ ಲಕ್ಷ್ಮಿ
ಚಿತ್ತವ ಕೊಡದೆ ನಸುನಗುತ
ಚಿತ್ತವಕೊಡದೆ ನಸನಗುತ್ತ ಬಂದು ಪುರು
ಷೋತ್ತಮನ ಕಂಡು ನಮಿಸಿದಳು

ನಾನಾ ಕುಸುಮಗಳಿಂದ ಮಾಡಿದ ಮಾಲೆಯ
ಶ್ರೀನಾರಿ ತನ್ನ ಕರದಲ್ಲಿ
ಪೀನಕಂಧರದ ತ್ರಿವಿಕ್ರಮರಾಯನ ಕೊರ
ಳಿನ ಮೇಲಿಟ್ಟು ನಮಿಸಿದಳು೨೦

ಸಮುದ್ರ ರಾಜ ಅರ್ಘ್ಯ ಪಾದ್ಯಾದಿಗಳಿಂದ ಅಳಿಯನನ್ನು ಸತ್ಕರಿಸಿದ ಷೋಡಷ ದಾನಗಳ ಜೊತೆ ಕನ್ಯಾದಾನ ಮಾಡಿದ ತನ್ನ ಮಗಳನ್ನು ಧಾರೆಯೆರೆದು ಕೊಟ್ಟು ತನಗೆ ಸದ್ಗತಿ ನೀಡುವಂತೆ ಪ್ರಾರ್ಥಿಸಿದ. ವಸಿಷ್ಠ ನಾರದ ಮುನಿಗಳು ವೇದ ಮಂತ್ರಗಳನ್ನು ಹೇಳಿದರು. ತುಂಬುರ ನಾರದರು ಸ್ತುತಿಸಿದರು, ದೇವನಾರಿಯರು ಹೂಮಳೆಗೆರೆದರು. ನಾರಿಯರು ಹಸೆಗೆ ಕರೆಯುವಾಗಲೂ ಅವನನ್ನು ಸಾಮಾನ್ಯ ಮದುಮಗನೆಂದು ಭಾವಿಸದೆ ಕರೆಯುತ್ತಾರೆ. ಶೇಷಶಯನ, ದೋಷದೂರ, ಭಾಸುರಕಾಯ, ಮಂಜುಳಮೂರ್ತಿ, ಕುಂಜದವರದ, ವಟಪತ್ರಶಾಯಿ, ಜಗದುದರ ಪರಮಮೂರುತಿ ಇವು ಹೆಂಗಳೆಯರು ಹರಿಗೆ ನೀಡುವ ವಿಶೇಷಣಗಳು. ಅವನ ಹಿರಿಮೆಗಳು ಇಷ್ಟೇ ಅಲ್ಲ ಸುರರಿಗೆ ಆನಂದವೀವ ಕರುಣಿ ಬ್ರಹ್ಮನಿಂದ ನಿರ್ಮಲಪೂಜೆಯ ಕೈಗೊಂಬ ಪರಮ ಮೂರುತಿ' ಮುಖ್ಯಪ್ರಾಣನ ಮನೆಯಲ್ಲಿ ಭಾರತೀದೇವಿ ಬಡಿಸಿದ ಸಕ್ಕರೆ ಪಾಯಸ ಸವಿವವನು. ರುದ್ರನ ಮನೆಯಲ್ಲಿ ಭದ್ರಮಂಟಪದಿ ಕುಳಿತು ಸ್ವಾದಾನ್ನ ಉಂಬುವನು, ಗರುಡ ಗಮನನಾಗಿ ಸುರಸ್ತ್ರೀಯರ ಗಾಯನ ಸವಿವ ನರಹರಿ ಅದಿತಿಗೆ ಕುಂಡಲಗಳನಿತ್ತವನು, ಸುರತರುವ ತಂದವನು – ಹೀಗೆ ಹೊಗಳಿಸಿಕೊಂಡ ಹರಿ ಲಕ್ಷ್ಮಿಯ ಜೊತೆ ಹಸೆಮಣೆ ಮೇಲೆ ಕುಳಿತ ಮುತ್ತೈದೆಯರು ಧವಳದ ಪದವ ಪಾಡುತ್ತ ಆರತಿ ಎತ್ತಿದರು. ದೇವತೆಗಳು ಉಡುಗೊರೆಯನ್ನು ನೀಡಿದರು. ಮಾವನ ಮನೆಯಲ್ಲಿ ದೇವತೆಗಳಿಗೆ ಔತಣ ನೀಡುವುದು ಸರಿಯಲ್ಲ ದಾನವರು ಅದನ್ನು ಕೆಡಿಸಬಹುದು ಎಂದು ತಾನೇ ಸ್ತ್ರೀವೇಷ ಧರಿಸಿ ದೇವತೆಗಳಿಗೆ ಅಮೃತ ಉಣಿಸಿದ. ಸಮುದ್ರ ರಾಜ ಕ್ಷೀರಾಂಬುಧಿಯಲ್ಲಿಯೇ ನವರತ್ನದ ಮನೆ ಮಾಡಿ ಅಳಿಯನಿಗೆ ನೆಲೆ ಮಾಡಿಕೊಟ್ಟ.

ಹೀಗೆ ಲಕ್ಷ್ಮಿ ಮಾಡುವ ವರ ಪರೀಕ್ಷೆ, ಸಮುದ್ರ ರಾಜ ಮಾಡುವ ವರಪೂಜೆ, ನಾರಿಯರು ಹಸೆಗೆ ಕರೆದದ್ದು, ದೇವತೆಗಳು ಉಡುಗೊರೆ ಓದಿಸಿದ್ದು, ಉಡುಗೊರೆ ಪಡೆದದ್ದು–ಮದುವೆ ಎಂಬುದು ಹುಡುಗಾಟವಲ್ಲ ವಧುವರರು ಸಾಕ್ಷಾತ್ ಲಕ್ಷ್ಮೀನಾರಾಯಣ ಸಮಾನರಾಗಿರುವುದು. ಬಂಧುಮಿತ್ರರೆಲ್ಲ ದೇವಋಷಿಗಳು, ಮದುವೆಯ ಊಟವು ಹರಿಯೇ ಬಡಿಸಿದ ಅಮೃತ. ಹೀಗೆ

ಇಡೀ ಕೃತಿಯು ಒಂದು ಮದುವೆಯ ಸುಂದರ ಚಿತ್ರಣ ನೀಡುತ್ತದೆ. ಮೇಲ್ನೋಟಕ್ಕೆ ಇದು ಒಂದು ಮದುವೆಯ ಕಥೆಯಾದರೂ, ಮಾಧ್ವ ತತ್ವದ ಹಿನ್ನೆಲೆಯಲ್ಲಿ ಹರಿಸರ್ವೋತ್ತಮತ್ವವನ್ನು ಸ್ಥಾಪಿಸುವುದೇ ಈ ಕೃತಿಯ ಮುಖ್ಯ ಆಶಯ ಎಂದರೆ ತಪ್ಪಾಗಲಾರದು.

**ಮದುವೆಯ ಮನೆಯಲ್ಲಿ ಈ ಪದನ ಪಾಡಿದರೆ**
**ಮದು ಮಕ್ಕಳಿಗೆ ಮುಂದವಹುದು**
**ವಧುಗಳಿಗೆ ವಾಲೆಭಾಗ್ಯ ದಿನದಿನಕೆ ಹೆಚ್ಚುವುದು**
**ಮದನನಯ್ಯನ ಕೃಪೆಯಿಂದ** ೨೧

ಮದುವೆಯ ಮನೆಯಲ್ಲಿ ಈ ಹಾಡನ್ನು ಹಾಡಿದರೆ ಮದುಮಕ್ಕಳಿಗೆ ಶುಭವಾಗುತ್ತದೆ. ಕನ್ಯೆಯರಿಗೆ ಕಂಕಣಬಲವೊದಗುತ್ತದೆ. ವಧುವಿಗೆ ಓಲೆಭಾಗ್ಯವುಂಟಾಗುತ್ತದೆ ಎಂಬ ನಂಬಿಕೆಗಳು ಮಧ್ವಮತೀಯರಲ್ಲಿ ಇಂದಿಗೂ ಇದೆ. ಶ್ರಾವಣಶುಕ್ರವಾರದಂದು ಈ ಹಾಡನ್ನು ಹಾಡುವ ಕ್ರಮವುಂಟು. ವಾದಿರಾಜರ ಭಕ್ತ ಅರಸಪ್ಪನಾಯಕರ ಅಳಿಯ ಮದುವೆಮನೆಯಲ್ಲೇ ಸತ್ತುಹೋಗಲು ವಾದಿರಾಜರು ಭಕ್ತನ ಮೇಲಣಕರುಣೆಯಿಂದ ಈ ಹಾಡನ್ನು ರಚಿಸಿ ಹಾಡಿದರೆಂತಲೂ ಕೂಡಲೇ ನಾಯಕನ ಅಳಿಯ ಬದುಕಿ, ಮದುಮಗಳಿಗೆ 'ವಾಲೆಭಾಗ್ಯ ಮಾಂಗಲ್ಯಭಾಗ್ಯಗಳು ದೊರೆತುವೆಂದೂ ಪ್ರತೀತಿ.

**೭.೫ ಅವತಾರತ್ರಯ ಸುವ್ವಾಲಿ :**

ಮಧ್ವಾಚಾರ್ಯರು ತ್ರೇತಾಯುಗದಲ್ಲಿ ಹನುಮಂತನಾಗಿ, ದ್ವಾಪರದಲ್ಲಿ ಭೀಮಸೇನನಾಗಿ, ಕಲಿಯುಗದಲ್ಲಿ ಮಧ್ವಾಚಾರ್ಯರಾಗಿ ಅವತರಿಸಿ ಶ್ರೀಹರಿಯ ಸೇವೆ ಮಾಡಿದರೆಂಬುದು ಮಾಧ್ವಮತೀಯರ ನಂಬಿಕೆ. ಹರಿದಾಸ ಸಾಹಿತ್ಯದಲ್ಲಿ ಮೊದಲಿಗರಾದ ಶ್ರೀಪಾದರಾಜರು ಹನುಮ, ಭೀಮ, ಮಧ್ವರನ್ನು ಕುರಿತಂತೆ 'ಮಧ್ವನಾಮ' ಎಂಬ ದೀರ್ಘಕೃತಿಯನ್ನು ರಚಿಸಿದರು. ಹರಿದಾಸ ಸಾಹಿತ್ಯದಲ್ಲಿ ಈ ಕೃತಿ ಹೆಚ್ಚು ಪ್ರಸಿದ್ಧಿಯನ್ನು ಪಡೆಯಿತಲ್ಲದೆ, ಮುಂದಿನ ಎಲ್ಲಾ ಹರಿದಾಸರಿಗೂ ಇದೇ ಸಂಪ್ರದಾಯವಾಯಿತು. ಮೊದಲು ಅವತಾರ ತ್ರಯಗಳನ್ನು ಸ್ತುತಿಸಿ ನಂತರ ಮುಂದಿನ ಕೆಲಸಕ್ಕೆ ತೊಡಗುತ್ತಿದ್ದರು. ವಾದಿರಾಜ ಯತಿಗಳೂ ಇದಕ್ಕೆ ಹೊರತಲ್ಲ. ಅವರೂ ಸಹ ಹನುಮ, ಭೀಮ ಮಧ್ವರನ್ನು ಕುರಿತು ಬಿಡಿ ಕೀರ್ತನೆಗಳನ್ನು ಮಾತ್ರವಲ್ಲದೇ ಶ್ರೀಪಾದರಾಜರ 'ಮಧ್ವನಾಮ' ದಂತೆ 'ಅವತಾರತ್ರಯ ಮಧ್ವ ಸುವ್ವಾಲಿ' ಎಂಬ ದೀರ್ಘ ಕೃತಿಯನ್ನೂ ರಚಿಸಿದ್ದಾರೆ. "ಸಮಾಜದ ಕೆಳವರ್ಗದವರಿಗಾಗಿ ತುಳು ಭಾಷೆಯಲ್ಲಿ ಹರಿಯ ದಶಾವತಾರ ಸ್ತುತಿಯನ್ನು ರಚಿಸಿಕೊಟ್ಟ ವಾದಿರಾಜರು ಬಹುಶಃ ಸುಮಧ್ವ ವಿಜಯವನ್ನು ಹೆಣ್ಣುಮಕ್ಕಳು ಪಾರಾಯಣ ಮಾಡಬಾರದೆನ್ನುವ ನಿರ್ಬಂಧವಿರುವುದರಿಂದ ಕನ್ನಡದಲ್ಲಿ ಈ ಸುವ್ವಾಲಿ ಹಾಡನ್ನು ಹಾಡಿರುವರೆಂದು ತೋರುತ್ತದೆ". ೨೨

೨೩೦ ನುಡಿಗಳಿರುವ ಈ ದೀರ್ಘ ಕೃತಿಯಲ್ಲಿ ಶೀರ್ಷಿಕೆಯೇ ಸೂಚಿಸುವಂತೆ

ಅವತಾರತ್ರಯದ ಮಹಿಮೆಯನ್ನು ಕುರಿತು ಚಿತ್ರಿಸಿದ್ದಾರೆ. ಮೊದಲನೆಯ ಭಾಗದಲ್ಲಿ ಭಾರತೀಶನು ಹನುಮಾವತಾರದಲ್ಲಿ ಶ್ರೀರಾಮನ ದೂತನಾಗಿ ಲಂಕೆಗೆ ತೆರಳಿ ಸೀತೆಯ ವಿಷಯವನ್ನು ತಂದು ಶ್ರೀರಾಮನಿಗೆ ತಿಳಿಸುತ್ತಾನೆ. ರಾಮಾಯಣದ ಸುಂದರಕಾಂಡದ ಕಥೆಯನ್ನು ಮೊದಲ ಭಾಗದಲ್ಲಿ ಕಾಣಬಹುದು. ಎರಡನೇ ಭಾಗದಲ್ಲಿ ಭೀಮಾವತಾರದ ಕಥೆಯನ್ನು ಚಿತ್ರಿಸಿದ್ದಾರೆ. ಬಾಲ್ಯದಿಮದಲೂ ಸದೃಢಶಾಲಿಯಾಗಿದ್ದ ಭೀಮನ ಸಾಧನೆಗಳನ್ನು ಚಿತ್ರಿಸುತ್ತಾ ಕಡೆಗೆ ಗಾಂಧಾರಿ ಸುತರಾದ ದುರ್ಯೋಧನಾಧಿಗಳನ್ನು ಕೊಲ್ಲುವಲ್ಲಿಗೆ ಭೀಮಾವತಾರದ ಕಥೆ ಮುಗಿಯುತ್ತದೆ. ಕೊನೆಯ ಭಾಗದಲ್ಲಿ ಮಧ್ವಾಚಾರ್ಯರಾಗಿ ಜನಿಸಿ ಮಾಡಿದ ಸಾಧನೆಗಳನ್ನು ಕುರಿತು ಚಿತ್ರಿಸಿದ್ದಾರೆ.

ಶ್ರೀಪಾದರಾಜರ 'ಮಧ್ವನಾಮ'ದಷ್ಟು ಪ್ರಸಿದ್ಧಿಯನ್ನು ಈ ಕೃತಿ ಪಡೆಯಲಿಲ್ಲ. ಭಾಷಿಕವಾಗಿ, ತಂತ್ರಗಾರಿಕೆಯಲ್ಲಿ, ನಿರೂಪಣೆ ಈ ಎಲ್ಲಾ ದೃಷ್ಟಿಗಳಿಂದಲೂ ಈ ಕೃತಿ ದುರ್ಬಲವಾಗಿದೆ. ವಾದಿರಾಜರ ಇತರ ಕೃತಿಗಳಿಗೆ ಈ ಕೃತಿಯನ್ನು ಹೋಲಿಸಿದರೆ, ಇದು ವಾದಿರಾಜರ ಕೃತಿಯೇ? ಎಂಬ ಅನುಮಾನ ಹುಟ್ಟುತ್ತದೆ. ಆದರೂ ಕೊನೆಯಲ್ಲಿ ಬರುವ ಹಯವದನ ಅಂಕಿತನಾಮದಿಂದ ಮಾತ್ರ ಇದನ್ನು ವಾದಿರಾಜರ ಕೃತಿಯೆಂದು ಪರಿಗಣಿಸಬಹುದಾಗಿದೆ ಎಂದು ಡಾ॥ ಟಿ. ಎನ್. ನಾಗರತ್ನರವರು ಅಭಿಪ್ರಾಯ ಪಡುತ್ತಾರೆ.[೨೩]

### ೭.೬ ನಾರದ ಕೊರವಂಜಿ

**ಹರಿಯೇ ಪತಿಯಾಗಬೇಕೆಂದು ರುಕುಮಿಣಿ**
**ಪರದೇವತೆಯ ನೆನವುತಿರಲು**
**ಕೊರವಂಜಿ ವೇಷದಿ ರುಕುಮಿಣಿದೇವಿಗೆ**
**ಪರಮ ಹರುಷವೀವೆನೆಂದು ನಾರದ ಬಂದ**[೨೪]

'ನಾರದ ಕೊರವಂಜಿ' ಒಂದು ಗದ್ಯ ಪದ್ಯ ಮಿಶ್ರಿತ ಹಾಡಗಬ್ಬ. ಶ್ರೀಹರಿಯೇ ತನ್ನ ಪತಿಯಾಗಬೇಕೆಂದು ಹಂಬಲಿಸುತ್ತಿರುವ ರುಕ್ಮಿಣಿಗೆ ನಾರದ ಮಹರ್ಷಿಯು ಕೊರವಂಜಿ ವೇಷವನ್ನು ಧರಿಸಿ ಬಂದು, ಅವಳಿಗೆ ಕಣಿ ಹೇಳುವ ಮೂಲಕ ಆನಂದವನ್ನು ಉಂಟುಮಾಡುವುದೇ ಈ ದೀರ್ಘ ಕಥನದ ಕಥಾವಸ್ತು.

**ಕುಂಕುಮಗಂಧದಿ ಮಿಂಚುವ್ವೈಯ್ಯಾರಿ**
**ಚುಂಗು ಜಾರಲು ಒಲವುತ್ತ**
**ಕಿಂಕಿಣಿ ಸರಘಂಟೆ ಉಡಿಯೊಳು**
**ಘಲ್ಲು ಘಲ್ಲೆಂದು ಬಂದಳು**
**ಘಲ ಘಲ ಘಲ್ಲು ಘಲ್ಲೆಂದು ಬಂದಳು**[೨೫]

ಗದ್ಯ : ಬ್ರಹ್ಮಾಣಿ ಸುರಾಗ್ರಣೀ ಸಕಲ ಸಜನಾಂಬುಜದ್ಯುಮಣಿ ಕಲ್ಯಾಣಿ ಗುಣಮಣೀ

ಕೋಗಿಲಾಲಾಪವಾಣೀ ಅಂಗನಾಮಣೀ ಶಿಖಾಮಣಿ ಏನೇ ರುಕುಮಿಣಿ ನಿನ್ನ ಚೆಲುವಿಕೆಯನೇನೆಂತು ಬಣ್ಣಿಪೆ.೨

**ಶ್ಲೋಕ ॥ ಅಯೋಧ್ಯಾ ಮಥುರಾ ಮಾಯಾ ಕಾಶೀ ಕಾಂಚಿ**
**ಅವಂತೀಕಾಪುರೀ ದ್ವಾರಾವತೀ ಚೇದಿ ॥**
**ಇವು ಮೊದಲಾದ ಪುಣ್ಯ ಪುರಗಳೆಲ್ಲ**
**ಮೆಚ್ಚಿ ಬಂದ ಕೊರವಿ ನಾನಮ್ಮ**
**ಪುರಗಳಿಗೆ ಹೋಗಿ ನರಪತಿಗಳಿಗೆ**
**ಸಾರಿ ಬರ ಹೇಳಿ ನಾ ಕಪ್ಪವ ತಂದೆ.೩**

**ಯಪ್ಪುಡು ವಚ್ಚನು ಯಪ್ಪುಡು ಚೂಸ್ತುನು**
**ತಪ್ಪ ಚಪ್ಪಿತಿನಿ ನೀವತಿ ಚಿಂತಿಂಚವದ್ದು**

**ಬಂಗಾರು ವಂಟೀ ಸಿಂಗಾರೀ ತೋಡೇ**
**ಅಂಗನಾಮಣಿ ನೀಕು ಅತಿ ಚಿಂತಿಚವದ್ದೂ.೮**

ಇಲ್ಲಿಯ ಗದ್ಯ ಬಿಗಿಯಾದ ಬಂಧವಾದರೆ ಪದ್ಯಗಳು ಸರಳ ಕಣಿ ಹೇಳುವ ಹೆಂಗಸರ ಉಡುಗೆ, ತೊಡುಗೆ ಆಭರಣ, ಅಲಂಕಾರ, ನಡಿಗೆ, ಮಾತು, ಭಾಷೆ, ಎಲ್ಲವನ್ನು ವಾದಿರಾಜರು ಇಲ್ಲಿ ಸಚಿತ್ರವಾಗಿ ದಾಖಲಿಸಿದ್ದಾರೆ. ಸಂದರ್ಭಕ್ಕೆ ತಕ್ಕಂತೆ ಬಳಸಿರುವ ಅನುಕರಣಾವ್ಯಯಗಳು ಚಿತ್ತಾಕರ್ಷಕವಾಗಿದೆ. ಕನ್ನಡ ತೆಲುಗು ಭಾಷೆಗಳ ಮಧುರ ಬಾಂಧವ್ಯಕ್ಕೆ ಈ ಕೃತಿ ಒಂದು ಉತ್ತಮ ಉದಾಹರಣೆ. ವಾದಿರಾಜರು ವ್ಯಾಸರಾಜರ ಪ್ರಮುಖ ಶಿಷ್ಯರಲ್ಲಿ ಒಬ್ಬರಾಗಿದ್ದು ಮುಳುಬಾಗಿಲು, ತಿರುಪತಿ, ಚಂದ್ರಗಿರಿ ವಿಜಯನಗರಗಳ ಪರಿಚಯವಿದ್ದುದರಿಂದ ತೆಲುಗನ್ನೂ ಬಲ್ಲವರಾಗಿದ್ದರು ಎಂಬುದನ್ನು ನಾರದ ಕೊರವಂಜಿ ಕೃತಿ ಸಮರ್ಥಿಸುತ್ತದೆ.

ಗದ್ಯ : ಆಗ ರುಕುಮಿಣಿದೇವಿಯು ಕೊರವಂಜಿಯನೆ ಕರೆಸಿ, ಸರ್ವಾಭರಣವನಿತ್ತು ಸಲ್ಲನೆ ನಸುನಕ್ಕು ಹೋಗಿಬಾಯೆನ್ನ ಕೊರವಂಜಿಯು ಸಂತೋಷದಿಂದಲೈದಲಾ ನಿಜಪುರಿಯಲ್ಲಿ ಮಂಡಲ ಮಂದಿರದಲಿ ಸರಸಸಲ್ಲಾಪದಿಂದ–ಲಖಂಡ ಸುಖರೂಪಳಾಗಿ ತನ್ನ ನಿಜಜನರಿಗೆ ಸರ್ವಾಭಿಷ್ಟನೀವುತ್ತ ಜಯಪಾಂಡುರಂಗನ ಕೂಡಿ ಸಂತೋಷದಿಂದ ಬಾಳಿದಳು.೨೯

ಕೊರವಂಜಿ ಕಣಿ ನಿಜವಾಗುತ್ತದೆ. ರುಕ್ಮಿಣಿಗೆ ಕೃಷ್ಣನು ದೊರಕಿ ಆನಂದ ಹೊಂದುತ್ತಾಳೆ. ಪುನಃ ಬಂದ ಕೊರವಂಜಿಗೆ ಸಂತೋಷಗೊಂಡ ರುಕ್ಮಿಣಿಯು ಸರ್ವಾಭರಣಗಳನ್ನು ಕೊಟ್ಟು ಗೌರವಿಸುದರೊಂದಿಗೆ ಸುಖಾಂತ್ಯದಲ್ಲಿ ಈ ಕಾವ್ಯ ಮುಕ್ತಾಯವಾಗುತ್ತದೆ. ವಾದಿರಾಜರು ಸಂಸ್ಕೃತದಲ್ಲಿ 'ಶ್ರೀ ರುಕ್ಮಿಣೀಶ ವಿಜಯ'ವನ್ನು ಬರೆದಂತೆ, ಸಾಮಾನ್ಯರಿಗಾಗಿ ಸರಳವಾಗಿ 'ನಾರದ ಕೊರವಂಜಿ' ಪ್ರಸಂಗವನ್ನು ರಚಿಸಿದ್ದಾರೆ.

## ೭.೭ ಸ್ವಪ್ನಪದ

ಸ್ವಪ್ನಪದ ಒಂದು ತತ್ವಮಾಲೆ ೪೫ ಭಾಮಿನಿ ಷಟ್ಪದಿಗಳ ಒಂದು ಕೃತಿ. ಇದರ ಶೈಲಿ ಸರಳವಾದುದಾದರೂ, ನಿರೂಪಿತವಾಗಿರುವ ವಿಚಾರ ಬಹಳ ಗಂಭೀರವಾದುದಾಗಿದೆ. ಹರಿಸರ್ವೋತ್ತಮತ್ವದ ಪ್ರತಿಪಾದನೆಯೇ ಇದರ ಪ್ರಧಾನ ಆಶಯ. ಈ ತತ್ವಮಾಲೆಯನ್ನು ಶ್ರೀಹರಿ ವಾದಿರಾಜರಿಗೆ ಸ್ವಪ್ನದಲ್ಲಿ ಬೋಧಿಸಿದನಂತೆ

'ನೆನೆದು ಶ್ರೀಹಯವದನ ಸ್ವಪ್ನದೊಳೆನಗೆ ಪೇಳಿದ ಪದವ ಲೋಕದ ಜನರಿಗಿದ ಸಂಗ್ರಹವ ಮಾಡುವೆನವನ ಕೃಪೆಯಿಂದ'[೧]

ಈ ಇಡೀ ಕಾವ್ಯವೂ ಸ್ವಯಂ ಹರಿಯೇ ಹೇಳಿದಂತೆ ಬರೆಯಲ್ಪಟ್ಟಿದೆ.

**ಅಂಜಬೇಡಲೆ ಮನುಜ ನಾ ಜಡ**
**ಕುಂಜರನ ಕಾಯ್ದವನು ಪರರಿಗೆ**
**ಸಂಜೆಯನು ತೋರಿ ಧನಂಜಯನಸುವ ಪೊರೆದವನು**
**ಕಂಜಲೋಚನೆ ಕರೆಯೆ ವಸ್ತ್ರದ**
**ಪುಂಜಗಳ ಕೊಟ್ಟವಳ ಸಲಹಿದೆ**
**ನಂಜುಂಡನ ವೈರಿಯನು ಕುಂದಿಸಿದನುವ ಕೇಳ್ದರಿಯಾ**[೨]

ಎಂದು ಗಜೇಂದ್ರ, ಅರ್ಜುನ, ದ್ರೌಪದಿ ಮೊದಲಾದ ಶ್ರೇಷ್ಠ ಭಕ್ತರನ್ನು ಕಾಪಾಡಿದ್ದನ್ನು ಹೇಳುತ್ತಾ ಜನರಿಗೆ ಅಭಯವನ್ನು ನೀಡಿದ್ದಾರೆ.

**ಎನ್ನ ಚರಣೋದಕವ ಶಿವ ಪಾ**
**ವನ್ನವೆನುತಾದರದಿ ಧರಿಸಿದ**
**ನೆನ್ನ ಕಾರುಣ್ಯ ಬಿಲದಲಾವಿಧಿ ವೇದವೋದಿದನು**
**ಎನ್ನರಸಿ ರಮೆ ಸಕಲಗುಣ ಸಂ**
**ಪನ್ನ ಸುರಮುನಿಮಾನ್ಯ ಶ್ರುತಿತತಿ**
**ಗಣ್ಯನೆನುತಲಿ ಮನದಿ ಮನ್ನಿಸಿ ಮುನ್ನ ವರಿಸಿದಳು**[೩]

ನನ್ನ ಪಾದದಲ್ಲಿ ಜನಿಸಿದ ಗಂಗೆಯನ್ನು ಶಿವ ತನ್ನ ಶಿರಸ್ಸಿನಲ್ಲಿ ಧರಿಸಿದ. ಬ್ರಹ್ಮ ನನ್ನಿಂದ ವೇದೋಪದೇಶ ಪಡೆದ. ರಮೆ ಸರ್ವೋತ್ತಮನಾದ್ದರಿಂದ ನನ್ನನ್ನು ವರಿಸಿದಳು.

**ಎನ್ನ ವೈಕುಂಠಾವಲೋಕನ**
**ಜನ್ನರಿಗೆ ಭವಬಂಧ ಮೋಚನ**
**ಎನ್ನ ನಾಮಸ್ಮರಣೆ ಪಾಪಟವಿಗೆ ಕಾಳ್ಗಿಚ್ಚು**
**ಇನ್ನು ನೀನನ್ಯರನು ಬೀಳ್ಕೊ**

**ಟ್ಟೆನ್ನ ಚರಣದೊಳಿಟ್ಟುಮನುವನು**
**ಘನ್ನ ಭಕುತಿಯ ಮಾಡು ಸುಕೃತವ ಕೂಡು ನಲಿದಾಡು** [೨]

ನನ್ನ ಲೋಕದಿಂದಲೇ ಜನರಿಗೆ ಮುಕ್ತಿ. ನನ್ನ ನಾಮಸ್ಮರಣೆಯಿಂದಲೇ ಪಾಪವೆಂಬ ಅಡವಿಗೆ ಕಾಳ್ಗಿಚ್ಚು. ನೀನು ಅನ್ಯರಿಗೆ ಬೀಳ್ಕೊಟ್ಟು, ಘನ್ನ ಭಕ್ತಿಯನ್ನು ಮಾಡಿ ಪುಣ್ಯವನ್ನು ಹೊಂದು.

**ದೇವರೆಲ್ಲರು ಎನ್ನ ದಾಸರು**
**ಶ್ರೀವಧುವೆ ಎನ್ನರಸಿ ಜಗದೀ**
**ಜೀವರಾಸಿಯ ನಾನೆಪುಟ್ಟಿಸಿ ಮಗುಳೆ ರಕ್ಷಿಪೆನು**
**ಲಾವಕರ ಕೊಲಿಸುವೆನು ನರಕವ**
**ನೀವೆ ಸ್ವರ್ಗವನಿತ್ತು ಸುಜನರ**
**ಕಾವೆನಿದು ವೇದಾಂತ ಸಿದ್ಧಾಂತದ ರಹಸ್ಯಕಣಾ** [೩೩]

ಈ ವೇದಾಂತ ಸಿದ್ಧಾಂತ ರಹಸ್ಯಗಳನ್ನು ಕನ್ನಡದಲ್ಲಿ ತಿಳಿಯಪಡಿಸುವುದು ವಾದಿರಾಜರ ಕೃತಿಗಳ ಉದ್ದೇಶ. "ತಮ್ಮ ತಾತ್ವಿಕ ನಿಲುವನ್ನು ಸ್ವಪ್ನಪದದ ಮೂಲಕ ಶ್ರೀಹರಿಯ ಮಾತುಗಳಲ್ಲಿ ಅತ್ಯಂತ ಖಚಿತವಾಗಿ ನಿರೂಪಿಸಿದ್ದಾರೆ. ಈ ನಿರೂಪಣೆ ಮುಂದೆ ಶ್ರೀ ವಿಜಯದಾಸರು, ಜಗನ್ನಾಥದಾಸರುಗಳಿಗೆ ಕನ್ನಡದಲ್ಲಿ ತತ್ತ್ವನಿರೂಪಣೆ ಮಾಡಲು ಮಾರ್ಗದರ್ಶಿಯಾಯಿತೆನ್ನಬಹುದು". [೩೪]

**೭.೮ ಗುಂಡಕ್ರಿಯೆ**

ಗುಂಡಕ್ರಿಯೆ ೪೦ ನುಡಿಗಳ ಒಂದು ಕೃತಿ ಒಂದೊಂದು ನುಡಿಯೂ ಒಂದು ದಶಪದಿ ಗುಂಡಕ್ರಿಯೆ ಎನ್ನುವುದು. ಒಂದು ರಾಗದ ಹೆಸರು ಅಥವಾ ಹಾಡಿನ ಒಂದು ದಾಟಿ. ಅಂತಃ ಪ್ರಾಸಗಳು ಬರುವ ಕಡೆ ಅರ್ಥಾನುಸಾರಿಯಾಗಿ ನಿಲ್ಲಿಸಿಕೊಂಡು ೧೦ ಸಾಲುಗಳ ದೀರ್ಘನುಡಿಯನ್ನು ಹಾಡುವ ರೀತಿ ಗುಂಡಕ್ರಿಯೆ. ಮತ್ತೊಂದು ಅಭಿಪ್ರಾಯದಂತೆ "ಇತರ ಮತಗಳ ದೃಷ್ಟಿ ಧೋರಣೆಗಳನ್ನು ತಮ್ಮ ಮಾತುಗಳ ಪ್ರಹಾರದಿಂದ ಕುಟ್ಟಿ ಪುಡಿಮಾಡಿರುವುದರಿಂದ (ಗುಂಡ್ = ಕುಟ್ಟಿಪುಡಿಮಾಡು) ಈ ಕೃತಿಗೆ ಗುಂಡಕ್ರಿಯೆಯೆಂದು ಹೆಸರು ಬಂದಿರಬಹುದು. ಕೃತಿಯ ಪ್ರತಿಯೊಂದು ನುಡಿಯ ಕೊನೆಯಲ್ಲೂ ಹಯವದನ ಅಂಕಿತವಿರುವುದು ಒಂದು ವಿಶೇಷ"[೩೫] ದ್ವೈತಮತದ ತತ್ವಗಳನ್ನು ಲೋಕಾನುಭವಗಳ ಹಿನ್ನೆಲೆಯಲ್ಲಿ ಸಮರ್ಥಿಸಿ ಚಾರ್ವಾಕ, ಬೌದ್ಧ, ಜೈನ, ಅದ್ವೈತ ಇತ್ಯಾದಿ ಮತಗಳನ್ನು ವಿಮರ್ಶಿಸಿರುವುದು ಇದರ ವಸ್ತು. ಅನ್ಯಮತ, ಅನ್ಯದೈವಗಳನ್ನು ನಿರಾಕರಿಸುತ್ತಾ ಹರಿಸರ್ವೋತ್ತಮತ್ವವನ್ನು ಎತ್ತಿ ಹಿಡಿದಿದ್ದಾರೆ.

**ಆ ದೇವ ಈ ದೇವನೆಂದ್ಯಾಕೆ ಕಲಹ ನಾ**
**ನಾ ದೇಶದವರಿಗೆ ಬೇಡಿದಿಷ್ಟವನೀವ**

**ಸಾಧಿಸಿದ ಧನದಿ**
**ಈಧರೆಯೊಳಗಿರ್ದ ರಾಯಗೆ ಕೋಟಿ ದ್ರ**
**ವ್ಯಾದಿ ಕಡನ ಕೊಟ್ಟ**
**ವಾದವ ಮುರಿದ ವೆಂಕಟಗಿರಿರಾಯನಂ**
**ಥಾದೇವನನ್ನು ತೋರೋ**
**ಶ್ರೀದೇವಿಯರದ ತಿಮ್ಮಯ್ಯರಾಯಗೆ ಪ್ರತ್ಯ**
**ಕ್ಷದಿ ಎಣೆಗಾಣೆ ಹಯದನ್ನನ**
**ಪಾದಪದುಮದಾಣೆ**[೩೬]

"ಸಮಸ್ತ ಜಗತ್ತಿಗೂ ಒಡೆಯನಾದ ಪರಮಾತ್ಮ ಸರ್ವಶ್ರೇಷ್ಠನೆಂದು ಶ್ರುತಿಗಳು ಸಾರುವುವು. ಇಂತಹ ಭಗವಂತನು ಮಹಾ ಕರುಣಾಳು, 'ಕ್ಷಿಪಾಮ್ಯಜಸ್ರಂ', 'ಮತ್ಕರ್ಮನ್ಮತ್ಪರಮೋ' ಎಂಬ ವಾಕ್ಯಗಳು ಅವನೇ ಜೀವರುಗಳಿಗೆ ಗತಿಪ್ರದನೆಂದು ಹೇಳುವುವು. ಆದ್ದರಿಂದ ಸಂಸಾರದಲ್ಲಿ ದುಃಖಿಗಳಾದ ಜೀವರು ಅವನನ್ನೇ ಭಜಿಸಬೇಕು"[೩೭] ಎಂದು ಹೇಳುತ್ತಾ ಕಡೆ ಮೂರು ನುಡಿಗಳಲ್ಲಿ ಪರಮಾತ್ಮನನ್ನು ಸ್ತುತಿಸಿದ್ದಾರೆ.

### ೭.೯ ಕೀಚಕ ವಧೆ

ಮಹಾಭಾರತದ ವಿರಾಟಪರ್ವದಲ್ಲಿ ಬರುವ 'ಕೀಚಕ ವಧೆ'ಯ ಕಥೆಯನ್ನು ಈ ಕೃತಿ ನಿರೂಪಿಸುತ್ತದೆ. ೨೩ ನುಡಿಗಳುಳ್ಳ ಈ ಕೃತಿಯಲ್ಲಿ ಶ್ರೀ ವಾಯುದೇವರ ದ್ವಿತೀಯಾವತಾರವಾದ ಭೀಮಾವತಾರದ ಹಿರಿಮೆಗಳಲ್ಲಿ ಒಂದನ್ನು ಚಿತ್ರಿಸುತ್ತದೆ. ಪಾಂಡವರು ಅಜ್ಞಾತವಾಸದಲ್ಲಿ ವಿರಾಟನ ಅರಮನೆಯಲ್ಲಿದ್ದ ಸಂದರ್ಭದಲ್ಲಿ ಸುದೇಷ್ಣೆಯ ತಮ್ಮನಾದ ಕೀಚಕನು ದ್ರೌಪದಿಗೆ ಮೋಹಿತನಾಗಿ ಅವಳೊಂದಿಗೆ ಅಸಭ್ಯವಾಗಿ ವರ್ತಿಸುತ್ತಾನೆ.

**ಅಕ್ಕನಿಗೆ ಬಾಚಿ ಹಿಕ್ಕುವ ಸೇವೆಗೆ**
**ಪುಕ್ಕಟ್ಟೆ ಅನ್ನಕ್ಕೆ ಸಿಕ್ಕುವರೇ ನೀನು**
**ಚಿಕ್ಕ ಪ್ರಾಯಕ್ಕೆನ್ನ ಪಕ್ಕಕ್ಕೆ ಬಂದರೆ**
**ಸಕ್ಕರೆದುಟಿಸವಿ ದಕ್ಕಿಸುವೆ**[೩೮]

ಎನ್ನುತ್ತಾನೆ. ಅದಕ್ಕೆ ಕೋಪಗೊಂಡ ದ್ರೌಪದಿಯು ಪ್ರತ್ಯುತ್ತರವಾಗಿ

**ರಕ್ಕಸ ನಿನಗೆ ದಕ್ಕುವಳೇ ನಾನು**
**ಮುಕ್ಕಣ್ಣನಾದರೂ ಲೆಕ್ಕಿಸದಾ ಪತಿ**
**ಫಕ್ಕನೆ ಬಂದರೆ ತಿಕ್ಕಿ ನಿನ್ನ ಕಾಯ**
**ದಿಕ್ಕು ದಿಕ್ಕಿಗೆ ಬಲಿಯಿಕ್ಕುವರೋ**[೩೯]

ಎಂದು ಬೆದರಿಸುತ್ತಾಳೆ. ಯಾವುದಕ್ಕೂ ಜಗ್ಗದ ಕಿಚಕ ಅವಳನ್ನು ಪದೇ ಪದೇ ಪೀಡಿಸುತ್ತಾನೆ.

ಕಡೆಗೆ ಕೀಚಕನ ಕಾಟವನ್ನು ತಾಳಲಾರದೆ ದ್ರೌಪದಿಯು ಒಂದು ಉಪಾಯ ಹೂಡುತ್ತಾಳೆ. ಅವನಿಗೆ ಒಲಿದಂತೆ ನಟಿಸಿ, ಕಾಳಗದ ಮನೆಗೆ ಆಹ್ವಾನ ನೀಡುತ್ತಾಳೆ. ಭೀಮನಿಗೆ ಎಲ್ಲಾ ವಿಷಯವನ್ನೂ ಮನದಟ್ಟು ಮಾಡಿ, ಅವನನ್ನು ಭಾಮಿನಿಯಂತೆ ಸಿಂಗರಿಸುತ್ತಾಳೆ. ಆ ದೃಶ್ಯವನ್ನು ವಾದಿರಾಜರು ಮನೋಜ್ಞವಾಗಿ ಚಿತ್ರಿಸಿದ್ದಾರೆ.

**ಮುತ್ತಿನ ಮೂಗುತಿ ಕೆತ್ತಿದ ವಾಲೆಯು**
**ಇತ್ತೆರ ಬುಗುಡಿಯು ನೆತ್ತಿಅರಳೆಲೇಗ**
**ಚಿತ್ರದ ಬೆತ್ತದ ರಾಕಟೆ ಉತ್ತಮ ಕ್ಯಾದಿಗೆ**
**ಒತ್ತಿಲಿ ಶ್ಯಾವಂತಿಗ್ಹೂವು ಗೊಂಡ್ಯ**
**ಹಸ್ತಕಡಗವು ಮತ್ತೆ ಚೊಡ್ಯ ವಂಕಿ**
**ಮುತ್ತಿನ ಹಾರವು ರತ್ನದ ಪದಕವು**
**ಅರ್ಥಿಲಿ ನಾರಿಯು ಕುತ್ತಿಗ್ಯೆ ಹಾಕಲು**
**ಹಸ್ತಿನಿಯೋ ಈಕೆ ಚಿತ್ತಿನಿಯೋ॥**

ಹೀಗೆ ಹಲವು ರೀತಿಯಲ್ಲಿ ಭೀಮಸೇನನನ್ನು ಸಿಂಗರಿಸಿ ಕಾಳಗದ ಮನೆಗೆ ಕರೆದುಕೊಂಡು ಬಂದು ಬಿಡುತ್ತಾಳೆ. ಕಾಳಗದ ಮನೆಯಲ್ಲಿ ಸ್ತ್ರೀ ವೇಷದಲ್ಲಿ ಮಲಗಿದ್ದ ಭೀಮನನ್ನೇ ಭಾಮಿನಿಯೆಂದು ಭಾವಿಸಿದ ಕೀಚಕ ಮೋಹಿಸಲು ಬರುತ್ತಾನೆ. ಆಗ ಭೀಮನು ಕೀಚಕನನ್ನು ವಧಿಸುತ್ತಾನೆ. ತಮ್ಮನನ್ನು ಕೊಂದ ಕಾರಣದಿಂದ ಸುದೇಷ್ಣೆ ದ್ರೌಪದಿಯನ್ನು ಮತ್ತೆ ಅರಮನೆಗೆ ಸೇರಿಸದಿದ್ದ ಪಕ್ಷದಲ್ಲಿ, ತಾನು ಅಜ್ಞಾತವಾಸದಲ್ಲಿರುವ ವೇಷ ಕಳಚುವುದಾಗಿ ಭರವಸೆ ನೀಡುತ್ತಾನೆ.

'ಪುರಾಣ ಪ್ರಸಂಗವನ್ನು ಕಥನ ಕಲೆಗೆ ಒಗ್ಗಿಸುವುದರಲ್ಲಿ ಸಿದ್ಧ ಹಸ್ತರಾದ ವಾದಿರಾಜರು, 'ಕೀಚಕ ವಧೆ'ಯ ಪ್ರಸಂಗವನ್ನು ಸೊಗಸಾಗಿ ಚಿತ್ರಿಸಿದ್ದಾರೆ. ಸರಳ ಕನ್ನಡದ ನೈಜ ಭಾಷೆಯ ಸೊಬಗಿನಿಂದ ಕೂಡಿರುವ ಈ ಕೃತಿಯಲ್ಲಿ ಬಳಸಿರುವ ಪ್ರಾಸಗಳು, ಅನುಕರಣಾವ್ಯಯಗಳೂ ಚಿತ್ತಾಕರ್ಷಕವಾಗಿದೆ. ದ್ರೌಪದಿಯು ಭೀಮನನ್ನು ಸಿಂಗರಿಸುವ ಸಂದರ್ಭ, ಕೀಚಕನು ಭೀಮನನ್ನು ಭಾಮಿನಿ ಎಂದು ಭಾವಿಸಿ ಮೋಹಿಸುವ ಸಂದರ್ಭದ ಕಲ್ಪನೆಗಳಂತೂ ವಾದಿರಾಜರ ಸೂಕ್ಷ್ಮ ನಿರೀಕ್ಷಣಾ ಶಕ್ತಿಗೆ ಉತ್ತಮ ನಿದರ್ಶನವಾಗಿದೆ.

### ೭.೧೦ ಹರಿಸರ್ವೋತ್ತಮ ಸಾರ

ಹರಿಸರ್ವೋತ್ತಮ ಸಾರವು ಕೇವಲ ೧೭ ನುಡಿಗಳಿರುವ ಖಂಡಕಾವ್ಯದಂತಹ ಒಂದು ಕಿರುಕಾವ್ಯ ವಾದಿರಾಜರ ಎಲ್ಲಾ ಕೃತಿಗಳಂತೆ ಇದೂ ಸಹ ಮಾಧ್ವತತ್ವದ ಹಿನ್ನೆಲೆಯಲ್ಲಿ ರಚಿತವಾದ ಕೃತಿ. ಶಿವನಿಗಿಂತಲೂ ವಿಷ್ಣುವೇ ಉತ್ತಮನೆಂದು ಹರಿಸರ್ವೋತ್ತಮತ್ವವನ್ನು ಎತ್ತಿ ಹಿಡಿಯುತ್ತದೆ. ಶ್ರೀ ಹರಿಯೇ ತ್ರಿವಿಕ್ರಮಾವತಾರ ಸಂದರ್ಭದಲ್ಲಿ ಅವನ ಪಾದ ಸ್ಪರ್ಶದಿಂದ ಆಕಾಶದಿಂದ ಉದ್ಭವಿಸಿದ ಬ್ರಹ್ಮ ಹರಿಯ ಪಾದ ತೊಳೆದ. ಅದೇ ಪಾದ ತೊಳೆದ ಗಂಗೆಯನ್ನು ಶಿವ ಧರಿಸಿದ.

ಸೃಷ್ಟಿ, ಸ್ಥಿತಿ, ಲಯ ಕಾರ್ಯಗಳನ್ನು ಬ್ರಹ್ಮ, ವಿಷ್ಣು, ಮಹೇಶ್ವರರಾದ ಬೇರೆ ಬೇರೆ ದೇವತೆಗಳ ಕಾರ್ಯವಾದರೂ ಎಲ್ಲಾ ದೇವತೆಗಳು ಶ್ರೀಹರಿಗೆ ಅಧೀನರಾಗಿದ್ದಾರೆ. "ಮೂಲರೂಪೀ ಶ್ರೀ ನಾರಾಯಣನ ಪ್ರಥಮಾವತಾರವಾದ ವಾಸುದೇವನ ರೂಪಗಳು ಸ್ವಯಂ ಸೃಷ್ಟಿ, ಲಯಗಳನ್ನು ಮಾಡದೆ, ಆ ಕಾರ್ಯಗಳನ್ನು ಆಪರಾತ್ಪರ ವಸ್ತು ಬ್ರಹ್ಮ ಮತ್ತು ಈಶ್ವರರ ದ್ವಾರಾ ಅವರಲ್ಲಿ ಪ್ರವಿಷ್ಟವಾಗಿ ಅವರಿಂದ ಮಾಡಿಸುತ್ತದೆ"೩೬. ಶ್ರೀಹರಿಯು ಸರ್ವೋತ್ತಮತ್ವವನ್ನು ಅರಿತ ಮಹಾಲಕ್ಷ್ಮಿಯು ಸಂಶಯ ಮಾಡದೆ ವಿಷ್ಣುವಿಗೆ ಮಾಲೆಯನ್ನು ಹಾಕುತ್ತಾಳೆ. ಕೃತಿಯ ಪ್ರಾರಂಭವೇ ಹರಿಸರ್ವೋತ್ತಮತ್ವವನ್ನು ಕುರಿತ ವಿವರಗಳಿಂದ ಪ್ರಾರಂಭವಾಗುತ್ತದೆ.

**ಕಾಲು ತೊಳೆದವನೊಬ್ಬ ತೊಳೆಸಿಕೊಂಡವನೊಬ್ಬ**
**ಮೌಳಿ ಮೇಲಾ ಜಲವ ಧರಿಸಿದವನೊಬ್ಬ**
**ಪಾಲಿಸುವ ಪ್ರಭುವೊಬ್ಬ ಕೊಲುವ ತಳವಾರನೊಬ್ಬ**
**ಮೂರ್ಲೋಕವರಿಯೆ ಪುಟ್ಟಿಸಿದ ಪಿತನೊಬ್ಬ**
**ಆಲೋಚನೆಯ ಬಲ್ಲವಗೆ ಸಂಶಯ ಸಲ್ಲ**
**ಮಾಲೆಯನು ಮಹಾಲಕ್ಷ್ಮಿ ಹಯವದನಗಿತ್ತಳಾಗಿ**೩೦

ಹೀಗೆ ಪುರಾಣದ ಅನೇಕ ಪ್ರಸಂಗಗಳನ್ನು, ದೃಷ್ಟಾಂತಗಳನ್ನು ಬಳಸಿಕೊಂಡು ಮಾಧ್ವತತ್ವಗಳ ಹಿನ್ನೆಲೆಯಲ್ಲಿ ಹರಿಸರ್ವೋತ್ತಮತ್ವವನ್ನು ಉದ್ದಕ್ಕೂ ಸಾಧಿಸಿರುವುದೇ ಈ ಕೃತಿಯ ವೈಶಿಷ್ಟ್ಯ.

**೭.೧೧ ಭ್ರಮರ ಗೀತೆ :**

ಭಾಗವತದ ದಶಮಸ್ಕಂದದ 'ಭ್ರಮರ ಗೀತೆ' ಯಲ್ಲಿ ಬರುವ ಶ್ರೀ ಕೃಷ್ಣನ ಲೀಲೆಯಿಂದ ಪ್ರಭಾವಿತರಾದ ಶ್ರೀಪಾದರಾಜರು ಕನ್ನಡದಲ್ಲಿ ಒಂಬತ್ತು ನುಡಿಗಳುಳ್ಳ ನಿಡಿದಾದ ಖಂಡಕಾವ್ಯದಂತೆ 'ಭ್ರಮರಗೀತೆ' ಯನ್ನು ರಚಿಸಿದ್ದಾರೆ. ಇದು ಸಂಸ್ಕೃತದ ಯಥಾವತ್ತಾದ ಅನುವಾದವಾಗಿರದೆ, ಶ್ರೀಪಾದರಾಜರ ರಮ್ಯ ಕಲ್ಪನೆಯಿಂದಾಗಿ ವಿಶಿಷ್ಟ ಕೃತಿಯೆನಿಸಿದೆ.

ಶ್ರೀಕೃಷ್ಣನು ಮಧುರೆಗೆ ತೆರಳಿದ ಮೇಲೆ ಗೋಕುಲದಲ್ಲಿದ್ದ ಗೋಪಿಯರೆಲ್ಲಾ ಕೃಷ್ಣನ ಅಗಲಿಕೆಯಿಂದ ಪರಿತಪಿಸುತ್ತಿರುವ ಸಂದರ್ಭದಲ್ಲಿ ಒಂದು ಭೃಂಗವು ಅಲ್ಲಿಗೆ ಹಾರಿ ಬರುತ್ತದೆ. ಅದು ಕೃಷ್ಣನ ದೂತನಿರಬಹುದೆಂದು ಭಾವಿಸಿದ ಗೋಪಿಯರು ಅದರ ಮುಂದೆ ತಮ್ಮ ಅಂತರಂಗದ ಅಳಲನ್ನು ತೋಡಿಕೊಳ್ಳುತ್ತಾರೆ.

**ನಿನ್ನ ನೋಡೆ ನಮ್ಮ ಅಚ್ಯುತನ್ನ ಕಂಡಂತಾಯಿತಯ್ಯ**
**ಚೆನ್ನಿಗರರಸ ಕುಶಲೋನ್ನತಿಯಲಿಹನೇನೋ**
**ಚಿಣ್ಣತನ ಮೊದಲಾಗವನ್ನ ಕಿತವ ಬಲ್ಲೆವೊ**
**ಗನ್ನಗಾರ ಚಿತ್ತ ಚೋರನ್ನ ಶ್ರೀಹರಿಯ**
**ಮನ್ನಣೆಗೆ ಮೆಚ್ಚಿ ತನುವನೊಪ್ಪಿಸಿದ ಮುಗುದೆ**

**ವೆಣ್ಣುಗಳ ವಿರಹಾಬ್ಧಿಯನ್ನೆ ದಾಟಿಸುವನೆಂದು**
**ತನ್ನ ನೇಹವೆಂಬೋ ನಾವೆಯನ್ನೇರಿಸಿ ಮೋಸದಿ**
**ನಡುನೀರೊಳು ತೊರೆದ್ಹೋದನೆ ಹೇ ಕಿತವ** [೪೧]

ಎಂದು ಆರಂಭವಾಗುವ ಈ ಗೀತೆ ಉದ್ದಕ್ಕೂ ಈ ಗೋಪಿಯರ ಕೋಪತಾಪಗಳನ್ನೂ, ಕೃಷ್ಣನ ಜೊತೆಯಲ್ಲಿ ತಾವು ಸವಿದ ಸಂತಸವನ್ನೂ ಈಗ ಪ್ರಾಪ್ತವಾಗಿರುವ ಅಗಲಿಕೆಯ ವ್ಯಥೆಯನ್ನೂ

**ಮಧುಕುಂಜವನದಲ್ಲಿ ಮಧುವೈರಿ ಕೊಳಲನೂದಲು**
**ಮಧುರ ನಿಸ್ವನ ಕೇಳಿ ಮದಿರಾಕ್ಷಿಯರೆಲ್ಲ ಧಾ**
**ಮದ ಧ್ಯಾನಬಿಟ್ಟು ಮೃಗಮದಗಂಪ ವಿಡಿ**
**ಮದನದ್ವೈದಿಯ್ಯನ ಕಾಣುತ ಶ್ರೀಹರಿಯ**
**ಮದವೇರಿ ತಲೆವಾಗಿ ಮೇದಿನಿ ನಿಟ್ಟಿಸಲಾಗ**
**ಮೃದುವಾಕ್ಯದೆಮ್ಮನಪ್ಪಿ ಅಧರಾಮೃತ ಭೋಜನ**
**ಕೊದಗುವ ಸತತ ಸನ್ನದ್ಧ ನಮ್ಮನಗಲಿ ಕ**
**ಲ್ಲೆದೆಯಾದನೆಂತೋ ಕೃಪಾಳು ಹೇ ಕೀತವಾ**[೪೨]

ಹೀಗೆ ಆ ದುಂಬಿಯನ್ನು ಕಂಡು ಕೋಪಗೊಂಡರೂ ಮರುಕ್ಷಣದಲ್ಲಿಯೇ ಕೃಷ್ಣನೊಂದಿಗೆ ಕಳೆದ ಹಲವು ಮಧುರಕ್ಷಣದ ಆನಂದವನ್ನು ಸ್ಮರಿಸಿಕೊಳ್ಳುತ್ತಾ, ಅವನನ್ನು ಕಾಣುವ ಹಂಬಲದಲ್ಲಿ ಸೇರುವ ತವಕದಲ್ಲಿರುವರು. ಹೀಗೆ ಶ್ರೀಪಾದರಾಜರು ಗೋಪಿಯರ ಸಂತಸ, ವಿರಹ, ದುಃಖಗಳನ್ನೆಲ್ಲಾ ಮನೋಜ್ಞವಾಗಿ ಸೆರೆ ಹಿಡಿದಿದ್ದಾರೆ.

ನಂತರ ಗೋಪಿಯರು ಶ್ರೀಹರಿಯ ಉನ್ನತ ಗುಣಗಳೊಂದಿಗೆ ತಮ್ಮ ಸಾಮಾನ್ಯತೆಯನ್ನು ಹೋಲಿಸಿಕೊಳ್ಳುತ್ತಾ, ತಮ್ಮಂತವರು ಭಗವಂತನಾದ ಶ್ರೀಹರಿಯನ್ನು ಬಯಸುವುದು ಸರಿಯಲ್ಲವೆಂದೂ, ಮಧುರೆಯ ಸ್ತ್ರೀಯರು ಅವನನ್ನು ಪಡೆದಿರುವುದಕ್ಕೆ ಅವರ ಪೂರ್ವ ಜನ್ಮದ ಸುಕೃತವೇ ಕಾರಣವಿರಬೇಕೆಂದು, ತಮ್ಮನ್ನು ತಾವು ಹಳಿದುಕೊಳ್ಳುತ್ತಾರೆ. ಕಡೆಗೆ ಅವನು ತಮ್ಮ ಹೃದಯಮಂದಿರದಲ್ಲಿ ನೆಲೆಸಿದ್ದರೆ ಅಷ್ಟೇ ಸಾಕೆಂದು, ತಾವು ರಾಸಕ್ರೀಡೆಯಾಡುವ ಸಂದರ್ಭದಲ್ಲಿ ಏನಾದರೂ ತಪ್ಪು ಮಾಡಿದ್ದರೆ ತಮ್ಮನ್ನು ಕ್ಷಮಿಸಬೇಕೆಂದು ಕೇಳಿಕೊಳ್ಳುತ್ತಾ, ಶ್ರೀಹರಿಯ ಅವತಾರಗಳನ್ನು ನೆನೆದು, ಅವನ ಗುಣಗಾನ ಮಾಡುತ್ತಾ ಅವನಿಗೆ ಶರಣಾಗುವರು. "ಶ್ರೀಮದ್ಭಾಗವತದಲ್ಲಿ ಉಕ್ತವಾಗಿರುವ ಭ್ರಮರಗೀತೆಯ ಸೂಚನೆಯನ್ನು ಮಾತ್ರ ಸ್ವೀಕರಿಸಿ ಶ್ರೀಪಾದರಾಜರು ಗೋಪಿಯರ ಚಿತ್ತ ವ್ಯಾಕುಲವನ್ನು ತಮ್ಮ ಕಲ್ಪನಾ ಬಲದಿಂದ ಅತ್ಯಂತ ರಮಣೀಯವಾಗಿ ನಿರೂಪಿಸಿರುವುದನ್ನು ನಾವು ಕಾಣಬಹುದು. ಮಧುರ ಭಾವನೆಯ ಪ್ರತಿಪಾದನೆಯಲ್ಲಿ ಶ್ರೀಪಾದರಾಜರು ಅನುಸರಿಸಿರುವ ಈ ಮಾರ್ಗ ಒಂದು ರೀತಿಯಲ್ಲಿ ವಿಶಿಷ್ಟವೆನ್ನಿಸಬಹುದು"[೪೩]

ಶ್ರೀಪಾದರಾಜರಂತೆ ವಾದಿರಾಜರೂ ಸಹ ಭಾಗವತವನ್ನಾಧರಿಸಿ 'ಭ್ರಮರ ಗೀತೆ' ಯನ್ನು ರಚಿಸಿದ್ದಾರೆ. ಇಬ್ಬರೂ ಯತಿಗಳಿಗೂ ಮೂಲ ಒಂದೇ ಆದರೂ ಶ್ರೀಪಾದರಾಜರ 'ಭ್ರಮರ ಗೀತೆ' ಗೂ ವಾದಿರಾಜರ 'ಭ್ರಮರ ಗೀತೆ'ಗೂ ಸಾಕಷ್ಟು ವ್ಯತ್ಯಾಸ ಗುರುತಿಸಬಹುದು. ಶ್ರೀಪಾದರಾಜರ ರಚನೆ ಮೂಲ ಸಂಸ್ಕೃತದ ಕೃತಿಯ ಸಂಕ್ಷಿಪ್ತ ರೂಪದಲ್ಲಿದ್ದು, ಅವರ ಕಲ್ಪನಾ ಸಾಮರ್ಥ್ಯದಿಂದ ಒಂದು ಭಾವಗೀತೆಯಂತಿದೆ. ಭಾಷಿಕವಾಗಿ ಬಿಗಿಯಾಗಿದೆ. ವಾದಿರಾಜರ ಈ ಭಾಷಾಂತರ ಮೂಲ ಕೃತಿಗೆ ಹತ್ತಿರವಾಗಿರುವುದಲ್ಲದೆ, ಇನ್ನೂ ಅನೇಕ ಹೊಸ ಸಂಗತಿಗಳನ್ನು ಸೇರಿಸಿ ತಮ್ಮ ವಿಶೇಷ ಅನುಭವವನ್ನು ಪ್ರಕಟಿಸಿರುತ್ತಾರೆ. ಹರಿಯ ಅವತಾರಗಳನ್ನು, ಮಹಿಮೆಗಳನ್ನು ವೈಷ್ಣವ ತತ್ವಗಳ ಹಿನ್ನೆಲೆಯಲ್ಲಿ ನಿರೂಪಿಸುವ ನೈಪುಣ್ಯತೆಯನ್ನು ವಾದಿರಾಜರಲ್ಲಿ ಕಾಣಬಹುದು.

"ಶ್ರೀಪಾದರಾಜರ ಕೃತಿಗಿಂತ ವಾದಿರಾಜರ ಕೃತಿಯ ಶೈಲಿ ತುಂಬ ಸರಳವಾಗಿದೆ. 'ದೇವ ಹೊಟ್ಟೆ ಗಣಪ ಈಯೆಮಗೆ ಶುಭವ' ಎಂಬ ಕೃತಿಯ ಪ್ರಾರಂಭದ ಗಣಪತಿಯ ಪ್ರಾರ್ಥನೆಯೇ ಕೃತಿಯ ಸರಳತೆಗೆ ಕಲಶವಿಟ್ಟಂತಿದೆ. ಆದುದರಿಂದಲೇ ಲಲಿತವಾಗಿ ಮುಂದುವರಿಯುವ, ಸರಳವಾದ ಕನ್ನಡ ಮಾತುಗಳಿಂದ ಕೂಡಿದ ವಾದಿರಾಜರ ಈ ಕೃತಿ ಶ್ರೀಪಾದರಾಜರ ಕೃತಿಗಿಂತಲೂ ಹೆಚ್ಚು ಪರಿಣಾಮಕಾರಿಯಾಗಿದೆ. ಗದ್ಯ, ಪದ್ಯ, ಶ್ಲೋಕ, ಹಾಡುಗಳಿಂದ ಕೂಡಿದ ಈ ಸುದೀರ್ಘ ಕೃತಿ ಸೊಗಸಾದ ಗೀತನಾಟಕ ಅಥವಾ ನೃತ್ಯರೂಪಕವಾಗುವ ಯೋಗ್ಯತೆಯನ್ನು ಪಡೆದಿದೆ ಹಾಗೆ ರಂಗ್ಗದ ಮೇಲೆ ಪ್ರಯೋಗ ಮಾಡಿದಲ್ಲಿ ಹರಿದಾಸರ ಮುಖ್ಯ ಉದ್ದೇಶವಾದ ಮಧ್ವತತ್ವ ಪ್ರಸಾರದೊಂದಿಗೆ ಮತೀಯ ಚೌಕಟ್ಟನ್ನೂ ಮೀರಿದ ಕಾವ್ಯ, ನಾಟಕಗಳ ಪರಿಣಾಮವನ್ನು ಸಾಧಿಸಬಲ್ಲದು, ವಾದಿರಾಜರ ಈ ಭ್ರಮರ ಗೀತೆ"೪೪

೭.೧೨ ನೀತಿ ಸಾರ :

ವಿದ್ಯಾಪ್ರಸನ್ನ ತೀರ್ಥರು ಯತಿಗಳಾಗುವುದಕ್ಕೆ ಪೂರ್ವದಲ್ಲಿ ಸಂಸಾರದಲ್ಲಿದ್ದವರು. ಲೌಕಿಕ ಜೀವನದಲ್ಲಿ ವಕೀಲರಾಗಿ ಅಪಾರವಾದ ಲೋಕಾನುಭವ ಪಡೆದಿದ್ದರು. 'ನೀತಿಸಾರ'ವೆಂಬ ೨೦೦ ಪಾದಗಳ ದೀರ್ಘ ಕೃತಿಯಲ್ಲಿ ಅವರ ಲೋಕಾನುಭ ಮಡುಗಟ್ಟಿರುವುದನ್ನು ಕಾಣಬಹುದು. ಯತಿಗಳಾದರೂ ಸಾಮಾನ್ಯರಿಗೂ ಅರ್ಥವಾಗುವ ಸರಳಕನ್ನಡದಲ್ಲಿ ಈ ಕೃತಿ ರಚಿಸಿದ್ದಾರೆ. 'ನೀತಿಸಾರ' ಈ ಕೃತಿಯ ಶೀರ್ಷಿಕೆಯೇ ಸೂಚಿಸುವಂತೆ 'ನೀತಿಸಾರ' ನೀತಿಪಾಠವನ್ನು ಹೇಳುವುದಾಗಿದೆ. ನೀತಿಯ ಮಾತುಗಳೆಂದರೆ ಎಲ್ಲರಿಗೂ ಬೇಸರ. ಬೇಸರವಾಗದಂತೆ ನೀತಿ ಮಾತುಗಳನ್ನು ನಿರೂಪಿಸುವುದು ಒಂದು ಕಲೆ. ನೀತಿಯನ್ನು ಗಾದೆ, ನಾಣ್ಣುಡಿ, ಉಕ್ತಿಗಳ ಮೂಲಕ ಮನಸ್ಸಿಗೆ ನಾಟುವಂತೆ ಹೇಳಿದ್ದಾರೆ. ಇದು ಪ್ರಸನ್ನತೀರ್ಥರ ಉತ್ತಮ ನಿರೂಪಣಾ ಸಾಮರ್ಥ್ಯಕ್ಕೆ ಒಂದು ನಿದರ್ಶನ.

ವಿದ್ಯಾಪ್ರಸನ್ನತೀರ್ಥರು ಧರ್ಮದ ಚೌಕಟ್ಟಿನ ಆಚೆಗೂ ಮಾನವ ಸಮುದಾಯವನ್ನು ದೃಷ್ಟಿಯಲ್ಲಿಟ್ಟುಕೊಂಡು ನೀತಿಯನ್ನು ನಿರೂಪಿಸಿದ್ದಾರೆ. ಹಿರಿಯರ ಅನುಭವದ ಮಾತನ್ನು ಕಂಡು

ಉಪೇಕ್ಷಿಸುವ ಯುವಕರಿಗೆ 'ಹಳೆಯ ಜನರ ಅನುಭವಗಳ ಹಳಿಯಬೇಡಿರೊ', 'ತಾಳಿದವನು ಬಾಳುವನೆಂದರಿತು ನಡೆಯಿರೊ' ಎಂದು ಕಿವಿ ಮಾತು ಹೇಳಿದ್ದಾರೆ. ಮಕ್ಕಳನ್ನು ಸಂಸ್ಕಾರವಂತರಾಗಿ ಬೆಳೆಸುವ ಗುರುತರವಾದ ಹೊಣೆಗಾರಿಕೆ ತಂದೆ–ತಾಯಿಗಳ ಮೇಲಿರುತ್ತದೆ. ಮಕ್ಕಳು ತಪ್ಪುದಾರಿ ಹಿಡಿಯದಂತೆ ಅವರನ್ನು ತಿದ್ದಿ ಬೆಳೆಸುವುದು ಅವರ ಕರ್ತವ್ಯ ಅದನ್ನು ಕುರಿತು

**'ಹಡೆದ ಮಕ್ಕಳುಗಳ ಕಾಲದಲ್ಲಿ ತಿದ್ದೆಲೊ**
**ಗಿಡದಲಿ ಬಗ್ಗಿಸದ ಮರವು ಬಗ್ಗಲಾರದೊ'**

..................................................................

**'ನಡತೆ ಕಲಿಸದಿದ್ದರೆ ಬುಡಕೆ ತರುವರೋ'**
**'ಬೆಳೆಸಿದಂತೆ ತರುಲತೆಗಳು ಫಲವ ಕೊಡುವುವು'** ಎಂದಿದ್ದಾರೆ.

ಸುಮ್ಮನೆ ಕುಳಿತು ಕಾಲಕಳೆಯುವ ಸೋಂಬೇರಿಗಳನ್ನು ಕಂಡರೆ ಪ್ರಸನ್ನತೀರ್ಥರಿಗೆ ಬೇಸರ ಪ್ರತಿಯೊಬ್ಬರು ಕೆಲಸದಲ್ಲಿ ತೊಡಗಿ ಸಾರ್ಥಕ ಜೀವನ ಮಾಡಬೇಕೆಂಬುದು ಅವರ ಆಶಯ. ವಚನಕಾರರಂತೆ ಇವರೂ ಸಹ ಕಾಯಕಕ್ಕೆ ಮಹತ್ವಕೊಟ್ಟವರು.

**'ಕಳೆಯಬೇಡಿ ಕಾಲವನ್ನು ಕುಳಿತೆಡೆಗಳಲಿ'**
**'ಟೊಳ್ಳು ಹರಟೆಗಾರರೆದುರು ನಿಲ್ಲಬೇಡಿರಿ'**
**'ಕಾಲದಲ್ಲಿ ಕೆಲಸ ಮಾಡಿ ಮುಗಿಸಿರಿ'**
**'ನಾಳೆ ನಾಳೆ ಎಂಬ ಕೆಲಸ ಹಾಳು ಕಾಣಿರೊ'**
**'ಉಣಲು ಬದುಕಬೇಡಿ ಜಗದಲಿ ಬದುಕಲು ಉಣ್ಣಿರೊ'** ಎಂದಿದ್ದಾರೆ.

ಇಂಗ್ಲೀಷರ ಆಡಳಿತದ ಪ್ರಭಾವದಿಂದ ಮನುಷ್ಯನ ಸ್ವಭಾವದಲ್ಲಿ ಅನೇಕ ಬದಲಾವಣೆಗಳಾದವು. ಸಂಪ್ರದಾಯದಂತೆ ಶಿಖೆ ಬಿಡುತ್ತಿದ್ದ ಪುರುಷರು ಅದನ್ನು ಕತ್ತರಿಸಿ ಕ್ರಾಪು ಬಿಡಲು ಪ್ರಾರಂಭಿಸಿದರು. ಇಂಗ್ಲೀಷ್ ವಿದ್ಯಾಭ್ಯಾಸದಿಂದ ಭಾರತೀಯರ ವೇಷಭೂಷಣಗಳಲ್ಲಿ, ಜೀವನ ಕ್ರಮದಲ್ಲಿ ಅನೇಕ ಬದಲಾವಣೆಗಳಾದವು. ಇಂಗ್ಲೀಷ್ ವಿದ್ಯಾಭ್ಯಾಸ ಕಲಿತು ಕ್ರಾಪು ಬಿಟ್ಟವರಿಗೆ ಮಗಳ ಕೊಡಲು ಕನ್ಯಾಪಿತೃಗಳು ಮುಂದಾಗುತ್ತಿದ್ದರು. ಅಂತವರನ್ನು ಕಂಡು

**'ಕುಲವ ಶೋಧಿಸುತಲಿ ಕನ್ಯಾದಾನ ಮಾಡೆಲೊ**
**ತಲೆಯ ಕ್ರಾಪು ಯೋಗ್ಯತೆಗೆ ಪ್ರಮಾಣವಲ್ಲವೊ**
**ಒಲಿದು ಬಂದ ಕುಲದ ಕನ್ಯೆ ಕರವ ಪಿಡಿಯಲೊ**
**ಥಳುಕು ಬಳಕು ನೋಡಿ ಬಲೆಗೆ ಬೀಳ ಬೇಡವೋ'** ಎಂದಿದ್ದಾರೆ.

ಬಾಹ್ಯ ಸೌಂದರ್ಯಕ್ಕಿಂತಲೂ, ಅಂತರಂಗದ ಸೌಂದರ್ಯ, ರೂಪಕ್ಕಿಂತಲೂ ಗುಣ ಮುಖ್ಯ ಎಂಬುದು ಪ್ರಸನ್ನತೀರ್ಥರ ಅಭಿಪ್ರಾಯ. ಅವಕಾಶಗಳು ಬಂದಾಗ ಅದರ ಸದುಪಯೋಗ ಮಾಡಿಕೊಳ್ಳಬೇಕೆನ್ನುತ್ತಾ 'ಗಾಳಿಯು ಬಂದಾಗ ಬೇಗ ತೂರಿ ಕೊಳ್ಳಲೊ' ಎಂದಿದ್ದರೆ. ಹಾಗೆಯೇ

'ಗಾಳಿಗುದ್ದಿ ಕರಗಳನ್ನು ನೋಯಿಸದಿರೋ' ಪ್ರಯೋಜನವಿಲ್ಲದ ಕೆಲಸ ಮಾಡಿ ವ್ಯರ್ಥ ಪ್ರಯತ್ನ ಮಾಡಬಾರದೆಂದೂ ಹೇಳುತ್ತಾರೆ.

**ಗಾದೆಗಳನ್ನು ವೇದವೆಂದು ಪೇಳಲುಚಿತವು**
**ಮಾದರಿ ಅಣು ಶಕ್ತಿಯಿಂದೆ ಗಾದೆ ಗಾದೆಗು**
**ಪರಮ ಭಾಗವತರ ಚರಿತೆಯೋದಿ ನೋಡಿರಿ**
**ಅರಿಯಬಹುದು ನುಡಿದ ನೀತಿಸಾರವೆಲ್ಲವ**
**ನಾಡುನುಡಿಗಳೆಂದು ಮೆರೆಯಬೇಡವೆಂದಿಗು**
**ಪಾಡಿದರೆ ಪ್ರಸನ್ನ ಹರಿಯು ನೀಡುವ ಫಲವ**[೪೫]

ಗಾದೆಯ ಮಹತ್ವ, ಭಾಗವತ ಚರಿತೆಯ ಹಿರಿಮೆ ತಿಳಿದಿರಬೇಕು. ನಾಡುನುಡಿಯ ಬಗ್ಗೆ ಅಭಿಮಾನ ಹೊಂದಿರಬೇಕು. ಭಕ್ತಿಯಿಂದ ಭಗವಂತನನ್ನು ಪಾಡಬೇಕು ಆಗ 'ಪ್ರಸನ್ನ ಹರಿಯು ನೀಡುವ ಫಲವ' ಎನ್ನುವುದು ಅವರ ನಂಬಿಕೆ.

'ಅರುಣೋದಯಕೆ ಮುಂಚೆ ಬಲು ಕತ್ತಲಂತೆ'[೪೬] ಎಂಬ ಪಲ್ಲವಿಯಿಂದ ಪ್ರಾರಂಭವಾಗುವ ಮತ್ತೊಂದು ಕೃತಿಯಲ್ಲಿ ೨೫ ಚೌಪದಿಗಳಲ್ಲಿ ನೀತಿಯನ್ನು ನಿರೂಪಿಸಿದ್ದಾರೆ. ಸಮಾಜದಲ್ಲಾಗುತ್ತಿರುವ ಸ್ಥಿತ್ಯಂತರಗಳು, ಶಿಥಿಲವಾಗುತ್ತಿರುವ ನಂಬಿಕೆ, ಮೌಲ್ಯಗಳು, ಅಂದಿನ ರಾಜಕೀಯ ಪರಿಸ್ಥಿತಿ ಮೊದಲಾದ ಸಮಾಕಾಲೀನ ವಿಷಯಗಳು ಈ ಕೃತಿಯಲ್ಲಿ ಅಡಗಿದೆ. ಇಲ್ಲಿ ಬಳಸಿರುವ ಎಲ್ಲಾ ಚೌಪದಿಗಳು ಬಿಡಿ ಮುಕ್ತಕಗಳಾಗಿಯೂ ನಿಲ್ಲುತ್ತದೆ. 'ನಾರಿಯರಲಿ ಮಾದರಿಯೆಂದೆನಿಸಿರಮ್ಮ'[೪೭] ಎಂದು ಪ್ರಾರಂಭವಾಗುವ ಮತ್ತೊಂದು ಕೃತಿಯಲ್ಲಿ ನೂರು ಪಾದಗಳಿವೆ. ಇದರಲ್ಲಿ ಆದರ್ಶನಾರಿಯು ಸಮಾಜದಲ್ಲಿ ಹೇಗೆ ಮಾದರಿಯಾಗಿ ಬದುಕಬೇಕೆಂದು ಸೊಗಸಾಗಿ ಚಿತ್ರಿಸಿದ್ದಾರೆ. ಯತಿಗಳಾದರೂ ವಿದ್ಯಾಪ್ರಸನ್ನತೀರ್ಥರು ಸಮಕಾಲೀನ ಸಮಾಜ ಪರಿಸ್ಥಿತಿಗೆ ನೇರವಾಗಿ ಸ್ಪಂದಿಸಿ ಪ್ರತಿಕ್ರಿಯಿಸಿದ್ದಾರೆ.

# ಅಧ್ಯಾಯ ೭ ಅಡಿಟಿಪ್ಪಣೆಗಳು

೧. 'ಶ್ರೀಪಾದರಾಜರ ಮತ್ತು ವ್ಯಾಸರಾಯರ ಕೃತಿಗಳು', ಸಮಗ್ರ ದಾಸ ಸಾಹಿತ್ಯ, ಸಂಪುಟ ೧, ಪು–೯೩

೨. 'ಕರ್ನಾಟಕದ ಹರಿದಾಸರು', ಪು–೫೧೭

೩. 'ಶ್ರೀಪಾದರಾಜರ ಮತ್ತು ಶ್ರೀ ವ್ಯಾಸರಾಯರ ಕೃತಿಗಳು, ಸಮಗ್ರ ದಾಸ ಸಾಹಿತ್ಯ, ಸಂಪುಟ ೧, ಪು–೯೩

೪. ಅದೇ, ಪು–೯೬

೫. ಅದೇ, ಪು–೯೭

೬. ಡಾ. ವರದರಾಜರಾವ್, 'ಹರಿದಾಸ ಸಾಹಿತ್ಯ ಸಾರ', ಪು–೧೬೭

೭. 'ಶ್ರೀಪಾದರಾಜರ ಮತ್ತು ವ್ಯಾಸರಾಯರ ಕೃತಿಗಳು', ಸಮಗ್ರ ದಾಸ ಸಾಹಿತ್ಯ, ಸಂಪುಟ ೧, ಪು–೧೦೩

೮. ಅದೇ, ಪು–೧೧೬

೯. ಡಾ. ವರದರಾಜರಾವ್, 'ಹರಿದಾಸ ಸಾಹಿತ್ಯ ಸಾರ', ಪು–೨೮೫

೧೦. ಡಾ. ಟಿ.ಎನ್. ನಾಗರತ್ನ, 'ಶ್ರೀಪಾದರಾಜರ ಜೀವನ ಮತ್ತು ಕೃತಿಗಳು' , ಪು–೩೫

೧೧. ಡಾ. ಅನಂತಪದ್ಮನಾಭರಾವ್, 'ಹತ್ತೊಂಬತ್ತನೇ ಶತಮಾನದ ಹರಿದಾಸ ಸಾಹಿತ್ಯ', ಪು–೧೪೧

೧೨. ಡಾ. ಟಿ.ಎನ್. ನಾಗರತ್ನ, 'ಶ್ರೀವಾದಿರಾಜರ ಕೀರ್ತನೆಗಳು', ಪು–೪೧೯

೧೩. ಅದೇ, ಪು–೪೨೫, ೪೨೬

೧೪. ಅದೇ, ಪು–೪೩೦, ೪೩೧

೧೫. ಅದೇ, ಪು–೪೫೨

೧೬. ಅದೇ, ಪು–೪೬೯

೧೭. ಅದೇ, ಪು–೪೮೮

೧೮. ಅದೇ, ಪು–೫೭೦, ೫೭೧

೧೯. ಅದೇ, ಪು–೫೭೫

೨೦. ಅದೇ, ಪು–೫೮೧, ೫೮೨

೨೧. ಡಾ. ಟಿ.ಎನ್. ನಾಗರತ್ನ, 'ಶ್ರೀವಾದಿರಾಜರ ಕೀರ್ತನೆಗಳು', ಪು–೫೮೯

೨೨. ಅದೇ, ಪು–೫೨

೨೩. ಅದೇ, ಪು–೫೫

೨೪. ಅದೇ, ಪು–೩೮೯

೨೫. ಅದೇ, ಪು–೩೯೦

೨೬. ಅದೇ, ಪು–೩೯೨

೨೭. ಅದೇ, ಪು–೩೯೩

೨೮. ಅದೇ, ಪು–೩೯೭

೨೯. ಅದೇ, ಪು–೪೦೦

೩೦. ಅದೇ, ಪು–೪೯೧

೩೧. ಅದೇ, ಪು–೪೯೨

೩೨. ಅದೇ, ಪು–೪೯೩

೩೩. ಅದೇ, ಪು–೪೯೪

೩೪. ಅದೇ, ಪು–೫೨

೩೫. ಅದೇ, ಪು–೫೧೨

೩೬. ಡಾ. ವೇದವ್ಯಾಸಾಚಾರ್, 'ಕರ್ಣಾಟಕದ ಹರಿದಾಸರು', ಪು–೬೩೧

೩೭. ಡಾ. ಟಿ.ಎನ್. ನಾಗರತ್ನ, 'ಶ್ರೀವಾದಿರಾಜರ ಕೀರ್ತನೆಗಳು', ಪು–೧೩೦

೩೮. ಅದೇ, ಪು–೧೩೪

೩೯. ಅದೇ, ಪು–೫೨

೪೦. ಅದೇ, ಪು–೨೬೭

೪೧. 'ಶ್ರೀಪಾದರಾಜರ ಮತ್ತು ಶ್ರೀವ್ಯಾಸರಾಯರ ಕೃತಿಗಳು', ಸಮಗ್ರ ದಾಸಸಾಹಿತ್ಯ ಸಂಪುಟ ೧, ಪು–೮೯

೪೨. ಅದೇ, ಪು–೯೦

೪೩. ಡಾ. ವರದರಾಜರಾವ್, 'ಭಕ್ತವಾಣಿ', ಪು–೧೧೨

೪೪. ಡಾ. ಟಿ.ಎನ್. ನಾಗರತ್ನ, 'ಶ್ರೀವಾದಿರಾಜರ ಧೀರ್ಘಕೃತಿಗಳು', ಪು–XII

೪೫. 'ಶ್ರೀವಿದ್ಯಾಪ್ರಸನ್ನ ತೀರ್ಥರು ಹಾಗೂ ಇತರ ಯತಿಗಳು ಕೀರ್ತನೆಗಳು, ಸಮಗ್ರ ದಾಸಸಾಹಿತ್ಯ, ಸಂಪುಟ ೨೮, ಪು-೩೨೪

೪೬. ಅದೇ, ಪು-೨೭೯

೪೭. ಅದೇ, ಪು-೨೯೬

ಅಧ್ಯಾಯ – ೮

# ಸಾಹಿತ್ಯ ವಿಶ್ಲೇಷಣೆ

ಹರಿದಾಸ ಸಾಹಿತ್ಯವಾಗಲಿ, ವಚನ ಸಾಹಿತ್ಯವಾಗಲಿ, ಇತರ ಕಾವ್ಯಗಳಂತೆ ಉದ್ದೇಶಪೂರ್ವಕವಾಗಿ ರಚನೆಯಾದದ್ದಲ್ಲ. ಇಂಥದ್ದೇ ವಿಷಯವಿರಬೇಕು, ಇಂತಹ ಛಂದಸ್ಸು ಬಳಕೆಯಾಗಬೇಕೆಂದು ಪೂರ್ವನಿಯೋಜಿತವಾಗಿ ತೀರ್ಮಾನಿಸಿದ್ದಲ್ಲ. ಆ ಕ್ಷಣದ ಅನುಭವಕ್ಕೆ ಸ್ಪಂದಿಸಿದ ಆಶುಕವಿತೆಗಳು. ಹರಿದಾಸರು ಪಾರಮಾರ್ಥಿಕ ತಳಹದಿಯ ಮೇಲೆ ತತ್ವಪ್ರಚಾರಕ್ಕೆಂದು ತನ್ಮಯರಾಗಿ, ತಮ್ಮ ಅಂತರಂಗದ ಅನುಭವಗಳನ್ನು ಜನಸಾಮಾನ್ಯರ ಆಡು ನುಡಿಗಳಲ್ಲಿ ವ್ಯಕ್ತಪಡಿಸಿದರು. ತತ್ವಪ್ರಚಾರ ಅವರ ಉದ್ದೇಶವಾದರೂ, ಅವರ ಕೃತಿಗಳಲ್ಲಿ ಅನೇಕ ಸಾಹಿತ್ಯಕ ಅಂಶಗಳಿರುವುದರಿಂದ ಅದನ್ನು ಕನ್ನಡ ಸಾಹಿತ್ಯದ ಒಂದು ಪ್ರಕಾರವಾಗಿ ಪರಿಗಣಿಸಲಾಗಿದೆ.

ಹರಿದಾಸರು ಯಾರೂ ಕವಿಗಳಾಗಬೇಕೆಂದು ಬಯಸಿದವರಲ್ಲ. ಬದುಕಿನಲ್ಲಿ ತಮಗಾದ ಅನುಭವಗಳನ್ನು ಸಹಜವಾಗಿ ಅಭಿವ್ಯಕ್ತಿಸಿದರು. ತಮ್ಮ ತಪ್ಪುಗಳನ್ನು ಭಗವಂತನಲ್ಲಿ ಆತ್ಮೀಯವಾಗಿ ನಿವೇದಿಸಿಕೊಳ್ಳುವುದರ ಮೂಲಕ ಆತ್ಮ ಶೋಧನೆ ಮಾಡಿಕೊಂಡರು. ನವವಿಧ, ಪಂಚಭಾವ ಭಕ್ತಿಗಳಿಂದ ಭಗವಂತನ ಲೀಲಾ–ವಿನೋದಗಳನ್ನು ಆರಾಧಿಸಿದರು. ಹೀಗೆ ಬೇರೆ ಬೇರೆ ಸಂದರ್ಭಗಳಲ್ಲಿ ಉಂಟಾದ ಅವರ ಭಾವ ವೈವಿಧ್ಯದ ಭಾಷೆಯ ಸೊಬಗು, ಸೌಂದರ್ಯಗಳೂ ಅವರ ರಚನೆಗೆ ಸಾಹಿತ್ಯದ ಶೋಭೆಯನ್ನು ತಂದುಕೊಟ್ಟಿದೆ. ಗಂಭೀರವಾದ ತತ್ವವಿಚಾರಗಳನ್ನು ಕನ್ನಡದಲ್ಲಿ ಸರಳವಾಗಿ ನಿರೂಪಿಸಿ ಸಾಮಾನ್ಯರಿಗೆ ತಲುಪಿಸಿದ ಕೀರ್ತಿ ಇವರದು. ಆದರೆ ಹರಿದಾಸರು ಅಷ್ಟಕ್ಕೆ ತೃಪ್ತರಾಗದೆ ಸಮಾಜವನ್ನು ಚಿಕಿತ್ಸಕ ದೃಷ್ಟಿಯಿಂದ ನೋಡುತ್ತಾ, ಅದರ ಅಂಕು–ಡೊಂಕುಗಳನ್ನು ವಿಮರ್ಶಿಸಿದರು. ಅಲ್ಲದೆ ಜೀವನದಲ್ಲಿ ಪ್ರತಿಯೊಬ್ಬ ವ್ಯಕ್ತಿಯೂ ಹೇಗೆ ಸದಾಚಾರಿಯಾಗಿ ಸನ್ಮಾರ್ಗದಲ್ಲಿ ನಡೆಯಬೇಕೆಂದು ಸಂದೇಶ ನೀಡಿದರು.

ಮಧ್ವಾಚಾರ್ಯರು ಕನ್ನಡಿಗರಾದರೂ ವಿದ್ವತ್‌ವಲಯವನ್ನು, ಪಂಡಿತರನ್ನು ದೃಷ್ಟಿಯಲ್ಲಿಟ್ಟುಕೊಂಡು ಸಂಸ್ಕೃತದಲ್ಲಿ ದ್ವೈತ ತತ್ವವನ್ನು ಪ್ರತಿಪಾದಿಸಿದರು. ಸಂಸ್ಕೃತ ಭಾಷೆಯ

ತೊಡಕಿನಿಂದಾಗಿ ದ್ವೈತ ಸಿದ್ಧಾಂತ ಸಾಮಾನ್ಯರಿಂದ ದೂರ ಉಳಿಯಬೇಕಾಯಿತು. ಸಂಸ್ಕೃತವನ್ನೇ ನಂಬಿ ಕುಳಿತರೆ ವೈಷ್ಣವ ಸಮಾಜ ದ್ವೈತ ಸಿದ್ಧಾಂತದಿಂದ ದೂರ ಉಳಿದುಬಿಡುತ್ತದೆ ಎಂಬುದನ್ನು ಅರಿತ ಶ್ರೀಪಾದರಾಜರು ಕನ್ನಡದಲ್ಲಿ ತತ್ವಗಳನ್ನು ಹೇಳುವ ಮೂಲಕ ಪ್ರಾಂತೀಯ ಭಾಷೆಗೆ ಮನ್ನಣೆ ನೀಡಿದರು. ಕೀರ್ತನೆ ಉಗಾಭೋಗ, ಸುಳಾದಿ, ವೃತ್ತನಾಮ, ದಂಡಕಗಳನ್ನು ಮೊತ್ತ ಮೊದಲು ಕನ್ನಡಕ್ಕೆ ಪರಿಚಯಿಸಿದರು. ಈ ಎಲ್ಲಾ ಪ್ರಕಾರಗಳನ್ನು ಒಟ್ಟಿಗೆ ಸೇರಿಸಿ 'ಕೀರ್ತನೆ'ಗಳು ಎಂದೇ ಕರೆಯಲಾಗಿದೆ.

ಕನ್ನಡದಲ್ಲಿ ಕೀರ್ತನೆ ಅಥವಾ ಪದ ಎಂಬುದೇನೂ ಹೊಸದಲ್ಲ. ವೈದಿಕ ಪರಂಪರೆಯಿಂದ ಅದು ಬಂದದ್ದೆಂಬುದು ದೂರದ ಮಾತು. ಕನ್ನಡದ ಮಟ್ಟಿಗೆ ಪಾಡು, ಮೇಲ್ವಾಡು, ಬಾಜನೆಗಬ್ಬಗಳಿದ್ದುವು. ಆಮೇಲೆ ಶರಣರಲ್ಲಿ ಕೆಲವರು ಪದಗಳನ್ನು ಹಾಡಿದರು. "ಅದೇ ಹರಿದಾಸರ ಬಾಯಲ್ಲಿ 'ಕೀರ್ತನೆ' ಅಂದರೆ ಹರಿಸ್ತುತಿಪರವಾದ ಹಾಡಾಯಿತು. ಸಂಗೀತದಲ್ಲಿ ಪ್ರಮಾಣ ಸ್ವರೂಪ ಪಡೆಯಿತು".೧ ಡಿ.ಎಸ್. ಕರ್ಕಿಯವರು ಕೀರ್ತನೆಯ ಸಾಮಾನ್ಯ ಲಕ್ಷಣವನ್ನು ಹೀಗೆ ಗುರುತಿಸಿದ್ದಾರೆ. ಮೊದಲು ಪಲ್ಲವಿ, ಪಲ್ಲವಿಯೊಡನೆ ಅನುಪಲ್ಲವಿಯೂ ಬರಬಹುದು. ಬಳಿಕ ನಾಲ್ಕು ಚರಣಗಳ ಪದ್ಯಗಳು. ಕೊನೆಯಲ್ಲಿ ಕವಿಯ ಅಧಿದೈವವನ್ನು ಸೂಚಿಸುವ ಅಂಕಿತ, ಸಾಮಾನ್ಯವಾಗಿ ಹರಿದಾಸರಿಗೆ ಈ ಅಂಕಿತ ಗುರುಮುಖೇನ ದೊರೆಯುವಂಥದ್ದು. ಆದರೆ ಹರಿದಾಸ ಯತಿಗಳು ತಮ್ಮ ಇಷ್ಟದೈವದ ಹೆಸರನ್ನೇ ಅಂಕಿತವಾಗಿ ಬಳಸಿದ್ದಾರೆ.

ಶ್ರೀಪಾದರಾಜರ ಕಾವೇರಿ ರಂಗನ ಕುರಿತ ಒಂದು ಪ್ರಸಿದ್ಧ ಕೀರ್ತನೆ.

"ಕಂಗಳಿದ್ಯಾತಕೋ ಕಾವೇರಿ ರಂಗನ ನೋಡದ    ಪ

ಜಗಂಗಳೊಳಗೆ ಮಂಗಳ ಮೂರುತಿ
ರಂಗನ ಶ್ರೀಪಾದಂಗಳ ನೋಡದ    ಅ.ಪ.

ಎಂದಿಗಾದರೊಮ್ಮೆ ಜನರು
ಬಂದು ಭೂಮಿಯಲ್ಲಿ ನಿಂದು
ಚಂದ್ರ ಪುಷ್ಕರಣಿ ಸ್ನಾನವ ಮಾಡಿ ಆ
ನಂದದಿಂದಲಿ ರಂಗನ ನೋಡದ

ಹರಿಪಾದೋದಕ ಸಮ ಕಾವೇರಿ

ವಿರಜಾನದಿಯ ಸ್ನಾನವ ಮಾಡಿ
ಪರಮ ವೈಕುಂಠ ರಂಗಮಂದಿರ
ಪರವಾಸುದೇವನ ನೋಡದ

ಹಾರ ಹೀರ ವೈಜಯಂತಿ
ತೋರ ಮುತ್ತಿನ ಹಾರವ ಧರಿಸಿ
ತೇರನೇರಿ ಬೀದಿಲಿ
ಮೆರೆವ ರಂಗವಿಠಲನ್ನ ನೋಡದ,

ಜೀವನದಲ್ಲಿ ಒಮ್ಮೆಯಾದರು ವೈಕುಂಠಕ್ಕೆ ಸಮನಾದ ಶ್ರೀರಂಗಕ್ಕೆ ತೆರಳಿ, ಗಂಗೆಗೆ ಸಮನಾದ ಅಲ್ಲಿಯ ವಿರಜಾನದಿಯಲ್ಲಿ ಸ್ನಾನವ ಮಾಡಿ, ಸರ್ವಾಭರಣದಿಂದ ಅಲಂಕೃತನಾದ ಪರಮ ವೈಕುಂಠದ ಪರವಾಸುದೇವನಾದ ಆ ಶ್ರೀರಂಗನಾಥನನ್ನು ಹಾಗೂ ಅವನ ರಥೋತ್ಸವದ ವೈಭವವನ್ನು ನೋಡದ ಕಂಗಳಿದ್ದು ಪ್ರಯೋಜನವೇನು ಎಂದಿದ್ದಾರೆ. ಹೀಗೆ ಶ್ರೀರಂಗ ಸನ್ನಿಧಿಯ ಪಾವಿತ್ರ್ಯವನ್ನು, ಶ್ರೀರಂಗನಾಥನ ಮಹಿಮೆಯನ್ನು ಕಣ್ಣಿಗೆ ಕಟ್ಟುವಂತೆ ಸುಂದರವಾಗಿ ಚಿತ್ರಿಸಿದ್ದಾರೆ.

<u>ಸುಳಾದಿ</u> : ಸುಳಾದಿಯೂ ಹರಿದಾಸರು ಬಳಸಿರುವ ಇನ್ನೊಂದು ಗೇಯ ಪ್ರಕಾರ. ಇಲ್ಲಿ ತಾಳವು ಪ್ರಧಾನವಾಗಿದ್ದು, ಪ್ರತಿಯೊಂದು ನುಡಿಯೂ ಒಂದೊಂದು ತಾಳದಲ್ಲಿದ್ದು ಅಂತಹ ಐದು ಅಥವಾ ಏಳು ನುಡಿಗಳಿರುತ್ತದೆ. ಧ್ರುವ, ಮಠ್ಯ, ರೂಪಕ, ಝುಂಪೆ, ತ್ರಿಪುಟ, ಅಟ್ಟ ಮತ್ತು ಏಕ ಇವುಗಳನ್ನು ಸುಳಾದಿಯ ಸಪ್ತತಾಳಗಳೆಂದೇ ಕರೆಯುತ್ತಾರೆ. ಈ ಏಳುತಾಳದ ಜೊತೆಗೆ ಒಮ್ಮೊಮ್ಮೆ ಆದಿತಾಳವೂ ಬರುವುದು. ಹಾಗಾಗಿ ಎಂಟು ನುಡಿಗಳಿರುವುದೂ ಉಂಟು, ಇಂತಿಷ್ಟು ಪಾದಗಳಿರಬೇಕೆಂಬ ನಿಯಮವೇನಿಲ್ಲ. ಆಯಾ ಕೃತಿಕಾರರ 'ಅಂಕಿತ' ಇರುತ್ತದೆ. ಸುಳಾದಿಯ ಕಡೆಯಲ್ಲಿ ಎರಡು ಸಾಲುಗಳ ಒಂದು 'ಜತೆ' ಇದ್ದು ಜತೆಯಲ್ಲೂ ರಚನಕಾರರ ಅಂಕಿತವಿರುತ್ತದೆ. ಕೀರ್ತನೆಯ ಆಶಯ ಪಲ್ಲವಿಯಲ್ಲಿರುವಂತೆ ಸುಳಾದಿ ಆಶಯ 'ಜತೆ'ಯಲ್ಲಿರುತ್ತದೆ. "ಕನ್ನಡ ದಾಸ ಸಾಹಿತ್ಯದ ವಿನಾ ಈ ಜಾತಿ ಬೇರೆಲ್ಲಿಯೂ ಕಂಡುಬರುವುದಿಲ್ಲವೆಂಬ ಮಾತಿದೆ. ಅಂತೆಯೇ ಸದ್ಯಕ್ಕೆ ನಮಗೆ ತಿಳಿದಂತೆ ಶ್ರೀಪಾದರಾಜರೇ ಅಧಿಕೃತವಾಗಿ ಮೊದಲ ಸುಳಾದಿ ರಚನಕಾರರು"[೩]

ಅವರು ರಚಿಸಿರುವ ಸುಳಾದಿಯ ಒಂದು ನುಡಿ ಇಂತಿದೆ.

**ಈ ವನದೆಡೆಗಳು ಈ ವನಲತೆಗಳು**
**ಈ ನದಿಪುಳಿನಗಳೀ ಶಶಿಶಿಲೆಗಳು**
**ಈ ಸುರತರು ನೆಳಲು ಶುಕಪಿಕರವ**
**ಯಾಕೆ ಮಾಧವನ ಮರೆಯಲೀಯದಿವೆ ಕೆಳದಿ**
**ಆ ಮುಗುಳುನಗೆಯ ಸೊಬಗ**
**ಈ ಸುರತರು ನೆಳಲೀ ರತಿಯ**
**ಈ ಸುರತವನರಿದ ಬಾಲೆಯರೆಂತೊ**
**ಈ ಸುಗುಣಮಯ ರಂಗವಿಠಲನೆ ಕೆಳದಿ**,

ಬಿಲ್ಲ ಹಬ್ಬಕ್ಕೆಂದು ಮಧುರೆಗೆ ಹೋದ ಶ್ರೀಕೃಷ್ಣನ ಅಗಲಿಕೆಯಿಂದ ಗೋಪಿಯರು ವಿರಹದಿಂದ ಪರಿತಪಿಸುವ ದೃಶ್ಯ ಮನಕರಗುವಂತಿದೆ. ಬೃಂದಾವನದ ಪ್ರತಿಯೊಂದು ವಸ್ತುವಿನಲ್ಲೂ, ಶ್ರೀಕೃಷ್ಣನನ್ನೇ ಕಾಣುತ್ತಾ ಅವನ ನೆನಪಿನಲ್ಲೇ ನೊಂದು ಬೆಂದಿದ್ದಾರೆ. ತಮ್ಮನ್ನು ತೊರೆದು ಹೋದ ಅವನು ಮಧುರೆಯಲ್ಲಿ ರತಿವಿದಗ್ದರಾದ ಹೆಂಗಸರಿಗೆ ಮಾರುಹೋಗಿದ್ದಾನೆಂಬುದು ಅವರ ಎಣಿಕೆ. ಒಟ್ಟಿನಲ್ಲಿ ಶ್ರೀಕೃಷ್ಣನನ್ನು ಬಿಟ್ಟು ಬದುಕುವ ಶಕ್ತಿ ಅವರಿಗಿಲ್ಲ. ಕಡೆಯಲಿ ಬರುವ ಜತೆಯಲ್ಲಿ ಇಡೀ ಸುಳಾದಿಯ ಸಾರವನ್ನು ಸೊಗಸಾಗಿ ಹಿಡಿದಿಟ್ಟಿದ್ದಾರೆ. 'ಅವನ ಹಂಬಲವೆಮಗೆ ಜೀವನವವ್ವಾ, ಭುವನ ಮೋಹನ ರಂಗವಿಠಲನು ಕರುಣಿಯೆ' ಎಂದಿದ್ದಾರೆ.

ಹೀಗೆ ಸಂಗೀತ, ಸಾಹಿತ್ಯದ ಸಮನ್ವಯ ಹಾಗೂ ಆಧ್ಯಾತ್ಮಿಕ ತಳಹದಿಯೊಂದಿಗೆ ಕನ್ನಡದಲ್ಲಿ ವೈಷ್ಣವ ತತ್ವಗಳನ್ನು ಪ್ರಚಾರ ಮಾಡುವ ಈ ಸುಳಾದಿಗಳು ಸಾಹಿತ್ಯ, ಧರ್ಮ ಹಾಗೂ ಸಂಗೀತ ಕ್ಷೇತ್ರಗಳಿಗೆ ಹರಿದಾಸರು ನೀಡಿದ ವಿಶಿಷ್ಟ ಕೊಡುಗೆಯಾಗಿದೆ.

<u>ಉಗಾಭೋಗ :</u> ಉಗಾಭೋಗವೂ ದಾಸರ ಮತ್ತೊಂದು ಕೊಡುಗೆ, ಇದೂ ಸಹ ಗೇಯ ಪ್ರಕಾರದ ರಚನೆ ಯಾವುದೇ ರಾಗ–ತಾಳದ ಚೌಕಟ್ಟಿಗೆ ಒಳಪಡದೆ, ಯಾವ ರಾಗ ಬೇಕಾದರೂ ಅಳವಡಿಸಬಹುದಾದ ಸರಳ ರಚನೆಯಿದು. ಇಂತಿಷ್ಟೇ ಪಾದಗಳಿರಬೇಕೆಂಬ ನಿಯಮವಿಲ್ಲ ಕೊನೆಯಲ್ಲಿ ದಾಸರ ಅಂಕಿತವಿರುತ್ತದೆ. ಇವು ತೋರಿಕೆಗೆ ವಚನಗಳಂತೆ ಕಾಣುತ್ತವೆಯಾದರೂ, ಇವು ಸಂಗೀತ ಪ್ರಧಾನವಾದ ರಚನೆಗಳು. ಎಲ್ಲಿಯೂ ನುಡಿಗಳ ತಡೆಯಿಲ್ಲ. "ರಾಗ–ತಾಳ ಪ್ರಧಾನ ಕೀರ್ತನೆ ಹಾಗೂ ತಾಳ ಪ್ರಧಾನ ರಚನೆಯಾದ ಸುಳಾದಿಗಿಂತ ಲಘುವಾದ ರಚನೆ. ಘನೀಭೂತವಾದ ಭಾವನೆಗಳ ಅಭಿವ್ಯಕ್ತಿಯನ್ನಿಲ್ಲಿ ಕಾಣುತ್ತೇವೆ".[೫]

ಶ್ರೀಪಾದರಾಜರ ಒಂದು ಉಗಾಭೋಗ

ಮನೆಯಿಂದ ಸಂತೋಷ ಕೆಲವರಿಗೆ ಲೋಕದಲ್ಲಿ
ಧನದಿಂದ ಸಂತೋಷ ಕೆಲವರಿಗೆ ಲೋಕದಲ್ಲಿ
ವನಿತೆಯಿಂ ಸಂತೋಷ ಕೆಲವರಿಗೆ ಲೋಕದಲ್ಲಿ
ತನಯರಿಂ ಸಂತೋಷ ಕೆಲವರಿಗೆ ಲೋಕದಲ್ಲಿ
ಇನಿತು ಸಂತೋಷ ಅವರಿವರಿಗಾಗಲಿ ನಿನ್ನ
ನೆನೆವೋ ಸಂತೋಷ ಎನಗಾಗಲಿ ನಮ್ಮ ರಂಗವಿಠಲ

ಹೀಗೆ ಹರಿದಾಸರು ಭಕ್ತಿ, ತತ್ವ, ಆತ್ಮ ನಿವೇದನೆ, ಬದುಕಿನ ಅನೇಕ ಲೋಕಾನುಭವಗಳನ್ನು ಉಗಾಭೋಗದಲ್ಲಿ ವ್ಯಕ್ತಪಡಿಸಿದ್ದಾರೆ.

ವೃತ್ತನಾಮ : ವೃತ್ತನಾಮವು ಪಲ್ಲವಿ, ಅನುಪಲ್ಲವಿ ನಂತರ ಪದ – ಶ್ಲೋಕ – ಪದ – ಶ್ಲೋಕ ಹೀಗೆ ಸಾಗುವ ಒಂದು ಮಿಶ್ರ ಪ್ರಯೋಗ, ಶ್ರೀಪಾದರಾಜರಿಂದ ಬಳಕೆಗೆ ಬಂದ ಈ ಪ್ರಯೋಗ ದಾಸಸಾಹಿತ್ಯದಲ್ಲಿ ವಿರಳವಾಗಿ ಬಳಕೆಯಾಗಿದೆ.

ಶ್ರೀಪಾದರಾಜರ ಒಂದು ವೃತ್ತನಾಮ ಇಂತಿದೆ.

ಮಾನನಿಧಿ ಶ್ರೀಕೃಷ್ಣ ಮಧುರೆಗೈದುವನಂತೆ
ಏನು ಪಥವಮ್ಮ ನಮಗೆ ಪ

ಮಾನವೇನಿನ್ನಿದಕೆ ಮಾನಿನಿಯರೆಲ್ಲರು
ಆಣೆಯನು ಕಟ್ಟವನಿಗಡ್ಡ ನಿಲ್ಲುವ ಬನ್ನಿ ಅ.ಪ

ಕಳ್ಳತನವೇ ನಮ್ಮ ವಲ್ಲಭರು ಈ ಸುಳುವು
ಎಲ್ಲವನು ಬಲ್ಲರಮ್ಮ
ಬಲ್ಲದಲೆ ನಮ್ಮ ಬಿಟ್ಟರೆ ಒಳಿತು ವನಜಾಕ್ಷ
ಎಲ್ಲಿಗೈದಿದರೆ ನಾವಲ್ಲಿಗೈದುವ ಬನ್ನಿ

ಇಂದುದಯದಿ ಮೊದಲು ಇಂದೀವರಾಕ್ಷಿಯರು
ಗೋವಿಂದನ ಬಳಿಗೈದುವ
ಒಂದು ಕಡೆಯಲ್ಲಿ ಕುಳಿತು (ವನಜಾಕ್ಷಿಯೋರ್ವ ಕೈ
ಯಂದ ಲಲ್ಲಿಗೆ ಕಳುಹಿ) ಕೇಳ್ವೆನೇನು ಪೇಳುವನೋ

ಹರಿಣಾಕವದನೆಯರು ನೆರೆದು ಬರುತಿರೆ ಕಂಡು
ಪರಮ ಹರುಷದಲಿ ಬಂದು

**ಸರಿ ರಾತ್ರಿಯೊಳು ಹೀಗೆ ಬರುವುದೇನೆಂದೆನಲು**
**ಎರಗಿ ಬಿನ್ನೈಸಿದರು ಅಂಬುಜದಳಾಕ್ಷನಿಗ್ನೆ**

**ಶ್ಲೋಕ**
**ಹಲವು ಕಾಲವು ನಿನ್ನ ಸ್ನೇಹ ಸುಖವ ಹಾರೈಸಿಕೊಂಡಿರುತಿಹ**
**ಲಲನಾವ್ಯೂಹವ ಬಿಟ್ಟು ಅಕ್ರೂರನೊಡನೆ ನೀ ಮಥುರೆಗೆ ಪೋದರೆ**
**ಕಳೆಯಲಾಪವೇ ಕಾಂತ ಕೇಳು ದಿನವ ಈ ಕಂತುವಿನ ಬಾಧೆಗೆ**
**ಘಳಿಗೊಂದು ಯುಗವಾಗಿ ತೋರುತಿಹುದೋ ಜಲಜಾಕ್ಷ ನೀನಿಲ್ಲದೆ**

**ಪದ**

**ಬ್ಯಾಡ ಮಥುರೆಗೆ ಪೋಗಬ್ಯಾಡೆಲವೋ ಶ್ರೀಕೃಷ್ಣ**
**ಬೇಡಿಕೊಂಬೆವೋ ದೈನ್ಯದಿ**
**ನೋಡು ನಮ್ಯಾಲೆ ದಯಮಾಡು ಮದನಂಗೀಡು**
**ಮಾಡುವುದೇನುಚಿತವೆಲೋ ಮಾಧವ ಕೃಪಾಕರನ್ನೆ**

ಹೀಗೆ ಹನ್ನೆರಡು ನುಡಿಗಳಿರುವ ಈ ವೃತ್ತನಾಮಕ್ಕೆ 'ಶೃಂಗಾರ ಪಾರಿಜಾತ' ಎಂಬ ಹೆಸರೂ ಇದೆ. ಬಿಲ್ಲ ಹಬ್ಬಕ್ಕೆಂದು ಗೋಕುಲದಿಂದ ಮಥುರೆಗೆ ಹೊರಟಿರುವ ವಿಚಾರವನ್ನು ತಿಳಿದ ಗೋಪಿಯರು, ಅವನ ಅಗಲಿಕೆಯನ್ನು ಸಹಿಸಲಾರದೆ, ಅವನನ್ನು ಅಡ್ಡಗಟ್ಟಿ ತಡೆಯುವುದೇ ಇಲ್ಲಿನ ಕಥಾವಸ್ತು. ಕೃಷ್ಣ ಮತ್ತು ಗೋಪಿಯರ ಸಂಭಾಷಣಾ ಸಂವಿಧಾನ ವಿನೂತನವಾಗಿದೆ. ಅವರ ನಡುವೆ ನಡೆಯುವ ಮಾತಿನ ಘರ್ಷಣೆ ಹಾಗೂ ಅವರ ನಡುವೆ ಇರುವ ನಿರ್ಮಲ ಪ್ರೇಮವು ಸಹಜವಾಗಿ ಆಕರ್ಷಿಸುತ್ತದೆ.

<u>ದಂಡಕ :</u> "ಸಂಸ್ಕೃತದಲ್ಲಿ ಇಪ್ಪತ್ತಾರು ಅಕ್ಷರಗಳನ್ನು ಮೀರಿ ನಿಯಮಿತವಾದ ಗಣನಿಯಮಕ್ಕೆ ಒಳಪಟ್ಟು ರಚಿತವಾಗಿರುವ ವರ್ಣವೃತ್ತಗಳಿಗೆ ದಂಡಕಗಳೆಂದು ಹೆಸರು. ಇವುಗಳಲ್ಲಿ ಹಲವಾರು ಬಗೆಗಳಿಗೆ".[೮] ಶ್ರೀಪಾದರಾಜರು ರಚಿಸಿರುವ 'ಶ್ರೀಲಕ್ಷ್ಮಿನೃಸಿಂಹ ಪ್ರಾದುರ್ಭಾವ ದಂಡಕಂ' ಬಹಳ ವಿಶಿಷ್ಟವಾದ ಮತ್ತು ನಿಡಿದಾದ ಕೃತಿ. ಕೃತಿಯ ಹೆಸರೇ ಹೇಳುವಂತೆ ಶ್ರೀಹರಿಯು ನರಸಿಂಹಾವತಾರದಲ್ಲಿ ಬಂದು ದುಷ್ಟನಾದ ಹಿರಣ್ಯಕಶಿಪುವನ್ನು ಸಂಹರಿಸಿ ಭಕ್ತನಾದ ಪ್ರಹ್ಲಾದನಿಗೆ ಅನುಗ್ರಹ ಮಾಡಿದ ಕತೆ. ಭಾಗವತದ ಸಪ್ತಮ ಸ್ಕಂಧದ ಅಷ್ಟಮೋಧ್ಯಾಯದ ಕಥೆಯ ಬಹುಭಾಗವನ್ನು ಇಲ್ಲಿ ಅನುವಾದಿಸಿದ್ದಾರೆ. ಈ ದಂಡಕದಲ್ಲಿ ಪ್ರತಿಪಾದದಲ್ಲೂ ಐದು ಮಾತ್ರೆಯ ನಾಲ್ಕು ಗಣಗಳಿದ್ದು ರಗಳೆಯಂತೆ ನಿರರ್ಗಳ ಓಟವಿರುವ ಇದು ಸರಳ ರಗಳೆಯನ್ನು

ಹೋಲುತ್ತದೆ.

ಆಮೇಲೆ ಆ ಬಾಲೆ ಸಾ
ಕ್ಷಾಜ್ಜಗನ್ಮೋಹಿನೀ ಲೀಲೆಗಳ್ ಮಿಂಚುತಾ
ಪೊಂಚುತಾ ಬಂದು ಸಿಂಹಾಸನಸ್ಥಾನದಲ್
ಉಗ್ರನಂತಿಪ್ಪ ನೃಸಿಂಹ ಮೂರ್ತ್ಯುಗ್ರವಂ
ಕಂಡತಿವ್ಯಗ್ರಳಂತಾಗಿ ಆ ತಾಯಿ ಹಿಂ
ದಕ್ಕೆ ತಾ ಬಂದಳಮ್ಮಮ್ಮ ಏಂ ಗುಮ್ಮನಂ
ತಪ್ಪನೇ ಸ್ವಾಮಿ ಮುನ್ನಿಂತು ಆಶ್ಚರ್ಯವಂ
ಈಸು ವಿಕ್ರಮ್ಯವಂ ಎಂದಿಗಾನೆಲ್ಲಿ ಕಂ
ಡಿಲ್ಲವಲ್ಲಾ ಕಿವಿಲ್ಯಾದರುಂ ಕೇಳಲೇ
ಇಲ್ಲವಲ್ಲಾ ಇದೇನೋ ವಿಚಿತ್ರಾಕೃತೀ
ಯಂತೆ ತೋರೂವನೆಂದಂಜಿಕೇಗೊಂಡ ರೀ
ತಿಂದ ತಾ ಹೆಜ್ಜೆ ಕಾಲ್ಗೆಜ್ಜೆಗಳ್ ಸಪ್ಪುಳಂ
ಮಾಡದೇ ಮೆಲ್ಲನೇ ಪಾರ್ಶ್ವದಲ್ ನಿಂತಳು,

ಈ ದಂಡಕದಲ್ಲಿ ಬಳಕೆಯಾಗಿರುವ ಭಾಷೆ ಶ್ರೀಪಾದರಾಜರ ಇತರ ಕೃತಿಗಳಿಗಿಂತ ವಿಶಿಷ್ಟವಾದದು. ಶ್ರೀಪಾದರಾಜರಿಗೆ ಕನ್ನಡ ಮತ್ತು ಸಂಸ್ಕೃತ ಭಾಷೆಗಳಲ್ಲಿ ಇರುವ ಅಭಿರುಚಿ, ಭಾಗವತ ಪ್ರಜ್ಞೆ ಹಾಗೂ ಅವರ ವರ್ಣನಾ ಸಾಮರ್ಥ್ಯವನ್ನು ಗಮನಿಸಬಹುದು. ನರಸಿಂಹನ ಉಗ್ರ ಸ್ವರೂಪದ ವೀರಾವೇಷವನ್ನು ಚಿತ್ರಿಸುವಲ್ಲಿ ಸಂದರ್ಭಕ್ಕೆ ತಕ್ಕಂತೆ ಬಳಸಿರುವ ಬಿಗಿಯಾದ ಭಾಷೆ, ಅನುಕರಣಾವ್ಯಯಗಳೂ, ಪ್ರಾಸಗಳು ಕೃತಿಗೆ ಸೊಬಗನ್ನು ನೀಡಿದೆ. ಸಂಭಾಷಣಾ ತಂತ್ರದಿಂದ ನಾಟಕೀಯವಾಗಿರುವ ದೃಶ್ಯಗಳು, ಹಲವಾರು ರಸಮಯ ವೃತ್ತಾಂತಗಳಿಂದ ಕೂಡಿರುವ ಈ ದೀರ್ಘಕೃತಿ ಒಂದು ಕಿರು ಕಾವ್ಯದಂತಿದೆ. ಪ್ರತಿಪಾದದಲ್ಲೂ ಓದುಗರ ಆಸಕ್ತಿಯನ್ನು ಕುತೂಹಲವನ್ನು ಕೆರಳಿಸುತ್ತಾ ಸಾಗುತ್ತದೆ.

ಪರಮಾತ್ಮನ ಕೃಪೆಯಿಂದಲೇ ಮನುಷ್ಯನ ಇಡೀ ಬದುಕು ನಿಂತಿದೆ ಎಂಬ ಅರಿವು ಶ್ರೀಪಾದರಾಜರದು. ಭಗವಂತ ಸೂತ್ರಧಾರ ನಾವೆಲ್ಲ ಪಾತ್ರಧಾರಿಗಳು ಅವನು ಆಡಿಸಿದಂತೆ ಆಡುವುದಷ್ಟೇ ನಮ್ಮ ಕೆಲಸ ಎಂಬುದು ಶ್ರೀಪಾದರಾಜರ ಸಿದ್ಧಾಂತ.

ಇಟ್ಹ್ಯಾಂಗೆ ಇರುವೆನೋ ಹರಿಯೇ ಎನ್ನ ದೊರೆಯೇ ಪ

ಸೃಷ್ಟಿವಂದಿತ ಪಾದ ಪದುಮ ಶ್ರೀಹರಿಯೇ ಅ.ಪ

ಸಣ್ಣ ಶಾಲ್ಯೋದನ ಬೆಣ್ಣೆ ಕಾಸಿದ ತುಪ್ಪ
ಚಿನ್ನ ಹರಿವಾಣದಲಿ ಭೋಜನ
ಘನ್ನ ಮಹಿಮ ನಿನ್ನ ಕರುಣ ತಪ್ಪಿದ ಮ್ಯಾಲೆ ಕ
ದನ್ನ ಕಾಣದೆ ಬಾಯ್ಬಿಡಿಸುವೆಯೋ ಹರಿಯೇ

ಕೆಂಪಿಲಿ ಪೊಳೆವ ಪೀತಾಂಬರ ಉಡಿಸುವಿ
ಸೊಂಪಿನಂಚಿನ ಶಾಲು ಹೊದಿಸುವಿಯೋ
ಕಪಿಲಹರೇ ನಿನ್ನ ಕೃಪೆಯು ತಪ್ಪಿದ ಮ್ಯಾಲೆ
ಕಪರ್ದಕ ಕೌಪೀನವು ದೊರೆಯದೋ ಹರಿಯೇ

..............................................................॥

ಭಗವಂತನಲ್ಲದೆ ತಮ್ಮನ್ನು ಉದ್ಧರಿಸಲು ಬೇರಾರಿಂದಲೂ ಸಾಧ್ಯವಿಲ್ಲವೆಂಬುದು ಅವರ ಅಚಲವಾದ ನಂಬಿಕೆ. ಆ ನಂಬಿಕೆ ಉನ್ನತ ನೆಲೆಗೆ ತಲುಪಿ ಭಾವಪರವಶರಾದಾಗ

ಉರಿಯೊಳಗೆ ಬಿದ್ದು ಶರೀರವನು ಕಳೆಯಲೊ
ಪರುವತವನೇರ್‍ಯುರುಳಲೋ ಕೃಷ್ಣ
ಗರಳಮಡುವನೆ ಧುಮುಕಿ ಉರಗ ಫಣಿ ತುಳಿಯಲೊ
ಎರಡೊಂದು ಶೂಲಕ್ಹಾಯಲೋ ಕೃಷ್ಣ
ಕೊರಳಿಗ್ಹಗ್ಗವ ಹಾಕಿ ಮರವೇರಿ ಕರಬಿಡಲೋ
ಗರಗಸದಿ ಶಿರಗೊಯ್ಯಲೋ ಕೃಷ್ಣ
ಕರುಣಾವಾರಿಧಿ ಎನ್ನ ಕರಪಿಡಿದು ಸಲಹದಿರೆ
ಧರೆಯೊಳುದ್ಧರಿಪರ್‍ಯಾರೋ ಕೃಷ್ಣ ॥

ಅವರ ಈ ಚಿತ್ತವಿಹ್ವಲತೆಯು ಅತಿಶಯವೆನಿಸಿದರೂ ಸಹಜವಾದುದಾಗಿದೆ.

'ಶ್ರೀರಂಗವಿಠಲನ ಶ್ರೀಮುಕುಟಕೆ ಶರಣು' ಎಂಬ ಕೀರ್ತನೆಯಲ್ಲಿ ಅವರ ಇಷ್ಟದೈವ ರಂಗವಿಠಲನನ್ನು ಶಿರದಿಂದ ಪಾದದವರೆಗೆ ಅವನ ಸರ್ವಾಂಗಗಳನ್ನು ಉಪಮಾನಗಳನ್ನು ಬಳಸಿ ಮನೋಹರವಾಗಿ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ.

ಕುಂದಕುಟ್ಮಲ ಪೋಲ್ವ ದಂತ ಪಂಕ್ತಿಗೆ ಶರಣು
ಅಂದವಾಗಿರುವ ಬಿಂಬೋಷ್ಠಕೆ ಶರಣು
ಚಂದ್ರಿಕಾನಿಭ ಮುದ್ದು ಮಂದಹಾಸಕೆ ಶರಣು
ನಂದಗೋಪನ ಮುದ್ದು ಕಂದನಿಗೆ ಶರಣು ॥

ತಾ ತಾ ತಾ ತಾ ತಾ ರಂಗ ನಿನ್ನ ಪಾದ

**ಥೈ ಥೈ ಥೈ ಥೈ ಥೈ ಯೆಂದು ಕುಣಿಯುತ**[೧೩]

ಶ್ರೀ ವಿಷ್ಣುವಿನ ದಶಾವತಾರವನ್ನು ಸಂಗ್ರಹವಾಗಿ ಹೇಳಿರುವ ಈ ಪುಟ್ಟ ಕೀರ್ತನೆಯು ನೃತ್ಯ ಸಂಯೋಜನೆಗೆ ಹೊಂದುವಂತಿದೆ. ಇಲ್ಲಿ ಬಳಸಿರುವ ಅನುಕರಣಾವ್ಯಯ ಗಮನಾರ್ಹವಾಗಿದೆ.

'ಬೆಲೆಗೆ ಹೋಗದ ಸರಕು ಸಡಿಲದಯ್ಯಾ ಹರಿಯೆ ಕೊಂಬುವರಿಲ್ಲ ಬೆಲೆಗೆ ಹೋಗದು ಸರಕು'[೧೪] ಎಂದು ಡಾಂಭಿಕ ಜಪ, ತಪಗಳ ಜಳ್ಳುತನವನ್ನು ಲೌಕಿಕ ವಸ್ತುಗಳೊಂದಿಗೆ ಅನ್ವಯಿಸಿ ಹೇಳಿರುವ ಅವರ ಅನುಭವ ಸಹಜವಾಗಿ ಹೊರಹೊಮ್ಮಿದೆ. ಸರ್ವವನ್ನೂ ಭಗವಂತನಿಗೆ ಒಪ್ಪಿಸಿದ ಮೇಲೆ ತಮ್ಮಲ್ಲಿ ಏನೂ ಉಳಿದಿಲ್ಲವೆಂಬ ಭಾವವನ್ನು 'ಸರಕು ಒಪ್ಪಿಸಿದ ಮೇಲೆ ಸುಂಕವುಂಟೆ ದೇವ'[೧೫] ಎಂಬ ಗಾದೆಯ ಮಾತಿನ ಮೂಲಕ ಸಮರ್ಥವಾಗಿ ವ್ಯಕ್ತಪಡಿಸಿದ್ದಾರೆ. ಹೀಗೆ ಶ್ರೀಪಾದರಾಜರು ತಮ್ಮ ಕೃತಿಗಳಲ್ಲಿ ಕನ್ನಡ ಭಾಷೆಯ ಗಾದೆ, ನಾಣ್ಣುಡಿ, ಉಕ್ತಿಗಳನ್ನು ಸಮರ್ಥವಾಗಿ ದುಡಿಸಿಕೊಂಡು ವಿಚಾರಗಳನ್ನು ಮನಮುಟ್ಟುವಂತೆ ನಿರೂಪಿಸಿದ್ದಾರೆ.

**'ಮಾರಿ ಕೋಣನಂತೆ ಘೋರ ಭಾಗ್ಯವ ಕೊಟ್ಟು**
**ನರಕಕ್ಕೆ ಇಡುವನೋ ದುರ್ಜನರುಗಳನು'**[೧೬].
**'ಕ್ಷೀರವ ಕರೆದಿಟ್ಟ ಮಾತ್ರದಿ ಸಂಸ್ಕಾರವಿಲ್ಲದೆ ಘೃತವಾಗದಂತೆ',**[೧೭]
**'ಗಾಳಿಗಿಕ್ಕಿದ ದೀಪದಂತೆ ನಾಳೆ ನಾಡಿದ್ದು ಎನಲಿ ಬೇಡ'**[೧೮]
**'ಕಂಬಳಿಯ ಬುತ್ತಿಯಲಿ ಕಸವನಾರಿಸುವರುಂಟೆ,**[೧೯]
**'ಕಲ್ಲು ಗೋವಿನ ಹಾಲು ಕರು ಬಯಸಿದಂತೆ',**[೨೦]

ಶ್ರೀಪಾದರಾಜರು ಸಂಸ್ಕೃತದಲ್ಲಿ ಪಂಡಿತರಾದರೂ ಕನ್ನಡ ಭಾಷೆಯ ಸೊಗಡಿನ ಆಡುಮತುಗಳನ್ನು ಧಾರಾಳವಾಗಿ ತಮ್ಮ ಕೃತಿಗಳಲ್ಲಿ ಬಳಸಿದ್ದಾರೆ. ಮ್ಯಾಲುಳ್ಳ, ಕಂಡ್ಯ, ತೊಳಲಾಡಿ, ಒಡ್ಯಾಣ, ಗ್ರಾಸ, ಭಯವ್ಯಾತಕೆ, ಇಂಟ್ಹಾಂಗೆ, ಬ್ಯಾಡ, ಕಂಡ್ಯ, ಇಕ್ಕದ್ಯಾತಕೆ, ಎಲ್ಲಾಡಿ, ಬೀದಿ ಮೆಟ್ಟ ಬ್ಯಾಡವೋ ಮೊದಲಾದವು.

ಶ್ರೀಕೃಷ್ಣನ ಪತ್ನಿಯರಾದ ರುಕ್ಮಿಣಿ, ಸತ್ಯಭಾಮೆಯರ ಸಂವಾದವನ್ನು ಶ್ರೀಪಾದರಾಜರು ಸೊಗಸಾಗಿ ಚಿತ್ರಿಸಿದ್ದಾರೆ. ಸವತಿಯರ ಅಸೂಯೆಗೆ ಪ್ರತಿನಿಧಿಗಳಂತಿರುವ ಈ ಇಬ್ಬರು ಹೇಗೆ ವಿನಾ ಕಾರಣ ಕಲಹ ಮಾಡುವರೆಂಬುದಕ್ಕೆ ಈ ಕೀರ್ತನೆ ಸಾಕ್ಷಿಯಾಗಿದೆ. ಅವರ ಕೋಪದ ಮಾತುಗಳು ಆರಂಭವಾಗುವ ಪರಿಯೇ ಸೊಗಸು.

ಧರೆಯ ಮೇಲೆ ಹಿರಿಯಳು ನಾ
ನಿರಲು ಲಜ್ಜೆ ತೊರೆದು ನೀನು
ಸರಸವಾಡೋದೆ ಮುರಹರನ
ಕರೆದು ಭಾಮಿನಿ ಸುಗುಣೆ ಕಾಮಿನಿ॥

ಎಂದು ಹಿರಿಯ ಸತಿಯಾದ ರುಕ್ಮಿಣಿಯು ಸತ್ಯಭಾಮೆಯನ್ನು ಹಿಯಾಳಿಸಿದರೆ, ಅವಳು ಅಷ್ಟೇ ಧೈರ್ಯದಿಂದ ಅದೇ ರೀತಿಯಲ್ಲಿ

ಪತಿಯ ಪ್ರೀತಿ ಎನ್ನ ಮೇಲೆ
ಅತಿಶಯ ಇರಲು ಜೇಷ್ಠ
ಸರಿಯಳೇನೆ ನೀನು ನೋಡು
ಮತಿಯ ರುಕ್ಮಿಣಿ–ಸುಪದ್ಮಗಂಧಿನಿ

ಒಂದು ಕಾಲದಲಿ ದಾಸಿ
ಯಿಂದ ಪತಿಯು ಸರಸವಾಡಲು
ಬಂದಳೇನೆ ಅರಸಿ ಸಮ
ಳೆಂದು ಭಾಮಿನಿ ಸುಗುಣೆ ಕಾಮಿನಿ

ದಾಸಿ ಸಮಳು ನಾನಲ್ಲ
ದೋಷ ಮಾತನಾಡಬೇಡ
ಶ್ರೀಶನ ದಯರಾಶಿ ಇರಲು
ದಾಸಿಯೆ ರುಕ್ಮಿಣಿ ಸುಪದ್ಮಗಂಧಿನಿ॥

ಎಂದು ತನ್ನ ಸವತಿಯನ್ನು ತೆಗಳುವಳು, ಹೀಗೆ ಅವರ ವಾದ ವಿವಾದಗಳು ತಾರಕಕ್ಕೆ ಹೋಗುವುದು ಅದೇ ಸಮಯಕ್ಕೆ ಶ್ರೀಕೃಷ್ಣನೇ ಅಲ್ಲಿಗೆ ಬಂದು 'ರುಕ್ಮಿಣಿ ಭಾಮೆಯರನ್ನು ವೀರ ಕರೆದನು – ತಾ ಸೇರಿ ಮೆರೆದನು'. ಆಗ ಪತ್ನಿಯರ ಕೋಪ ಕರಗಿ ಶ್ರೀಕೃಷ್ಣನ ಪ್ರೀತಿ ಅಧಿಕವಾಯಿತು. ಇಂಥ ಅನೇಕ ರಮ್ಯ ಕಥಾನಕಗಳನ್ನು ಶ್ರೀಪಾದರಾಜರು ಮನೋಹರವಾಗಿ ಚಿತ್ರಿಸಿದ್ದಾರೆ.

ಶ್ರೀಪಾದರಾಜರು ತಮ್ಮ ಕೃತಿಗಳಲ್ಲಿ ಭಾಗವತ ಪುರಾಣದಿಂದ ಅನೇಕ ಕತೆಗಳನ್ನು ಅಸಂಖ್ಯ ಪಾತ್ರಗಳನ್ನು ಧಾರಾಳವಾಗಿ ತಮ್ಮ ಕೀರ್ತನೆಗಳಲ್ಲಿ ತಂದಿದ್ದಾರೆ. ಭೃಗು ಮಹರ್ಷಿಗಳು ಹರಿ, ಹರ ಬ್ರಹ್ಮಾದಿಗಳನ್ನು ಪರೀಕ್ಷಿಸುವ ಕತೆ, ಹರಿಯು ಮೋಹಿನಿ ರೂಪ ತಾಳಿ ಭಸ್ಮಾಸುರನನ್ನು ಕೊಂದು ಈಶ್ವರನನ್ನು ರಕ್ಷಿಸಿದ ಕತೆ, ಅಹಲ್ಯೆಯ ಶಾಪವಿಮೋಚನೆ, ಕಾಳಿಂಗ ಮರ್ದನ,

ಗೋವರ್ಧನ ಗಿರಿಯನ್ನು ಉದ್ಧಾರ ಮಾಡಿದ ಕತೆ, ಪಾರಿಜಾತಾಪಹರಣ ಇನ್ನೂ ಮುಂತಾದುವು. ಶ್ರೀಹರಿಯು ದುರ್ಯೋಧನ, ಕೀಚಕ, ಪೂತನಿ ಶಕಟಾಸುರ ಮೊದಲಾದ ದುಷ್ಟರನ್ನು ಶಿಕ್ಷಿಸಿ ಧ್ರುವ, ಪ್ರಹ್ಲಾದ, ವಿಭೀಷಣರಂತಹ ಶಿಷ್ಟರನ್ನು ರಕ್ಷಿಸುತ್ತಾನೆ. ಪುರಾಣ ಪಾತ್ರಗಳ ದೃಷ್ಟಾಂತದ ಮೂಲಕ ಸನ್ನಿವೇಶವನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತಾರೆ. ಹೀಗೆ ಶ್ರೀಪಾದರಾಜರು ದೇವರ ಪೂಜಾ ಕಾಲದಲ್ಲಿ ಭಜನೆಗಾಗಿ ಕೈಗೊಂಡ ಈ ಕೀರ್ತನ ಸಂಪ್ರದಾಯ ಮುಂದಿನ ಪ್ರತಿಭಾಶಾಲಿಗಳಾದ ದಾಸರಿಗೆ ಪ್ರೇರಣೆಯಾಯಿತು. ಮುಂದೆ ಇವರ ಶಿಷ್ಯರಾದ ವ್ಯಾಸರಾಯರು, ವಾದಿರಾಜರು, ಪುರಂದರದಾಸರು, ಕನಕದಾಸರು ಶ್ರೀಪಾದರಾಜರ ಕೃತಿಗಳಿಂದ ಪ್ರೇರಣೆಹೊಂದಿ ಕಾವ್ಯ ರಚಿಸಿದರು.

ವ್ಯಾಸರಾಯರೂ ಸಹ ತಮ್ಮ ಗುರುಗಳಾದ ಶ್ರೀಪಾದರಾಜರ ಹಾದಿಯಲ್ಲೇ ನಡೆದು, ವೈಷ್ಣವ ಭಕ್ತಿ ಪರಂಪರೆಯನ್ನು ವೈವಿಧ್ಯಮಯವಾಗಿ ಮತ್ತು ವ್ಯಾಪಕವಾಗಿ ಬೆಳೆಸಿದವರಲ್ಲಿ ಪ್ರಮುಖರಾದವರು. ಸಂಸ್ಕೃತದಲ್ಲಿ ಪಂಡಿತರಾಗಿದ್ದ ಇವರು ತರ್ಕತಾಂಡವ, ಚಂದ್ರಿಕ, ನ್ಯಾಯಾಮೃತ ಮೊದಲಾದ ಗ್ರಂಥಗಳನ್ನು ಸಂಸ್ಕೃತದಲ್ಲಿ ರಚಿಸಿದ್ದಾರೆ. ಮಾಧ್ವ ಪಂಥದ ಬೋಧನೆ ಚಿಂತನೆಗಳೆಲ್ಲಾ ಸಂಸ್ಕೃತ ಭಾಷೆಯಲ್ಲಿ ಅಭಿವ್ಯಕ್ತವಾಗುತ್ತಿದ್ದ ಸಂದರ್ಭದಲ್ಲಿ ಕನ್ನಡದಲ್ಲಿ ಕೀರ್ತನೆ, ಸುಳಾದಿ ಮತ್ತು ಉಗಾಭೋಗಗಳನ್ನು ರಚಿಸಿ, ಹರಿದಾಸ ಸಾಹಿತ್ಯಕ್ಕೆ ಮನ್ನಣೆ ದೊರಕಿಸಿಕೊಟ್ಟರು.

ಕೊಳಲನೂದುವ ಶ್ರೀಕೃಷ್ಣನ ಚಿತ್ರವನ್ನು ವ್ಯಾಸರಾಯರು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ. ಶ್ರೀ ಕೃಷ್ಣನ ಸೊಬಗನ್ನು, ಅಂದ-ಚಂದವನ್ನು ಎಷ್ಟು ವರ್ಣಿಸಿದರೂ ವ್ಯಾಸರಾಯರಿಗೆ ತೃಪ್ತಿಯಾಗದು. 'ಕಣ್ಣಿಗೆ ಕಟ್ಟಿದಂತಿದೆ, ಬಣ್ಣದ ಕೊಳಲು ಭಾವಿಸಿ ನೋಡಬಾರದೆ' ಎಂದು ಮೊದಲಾಗುವ ಕೀರ್ತನೆಯಲ್ಲಿ ಶ್ರೀ ಕೃಷ್ಣನು ತನ್ಮಯನಾಗಿ ಕೊಳಲನೂದುತ್ತಿರುವುದನ್ನು ಚಿತ್ರಿಸುತ್ತಾ ಅವನ ಅಂಗಾಂಗದ ಚೆಲುವು, ಅವನು ತೊಟ್ಟಿರುವ ಆಭರಣದ ಸೊಬಗನ್ನು ಮನೋಜ್ಞವಾಗಿ ಚಿತ್ರಿಸಿದ್ದಾರೆ.

**ಕೂಡಿಹ ಸೋಗೆಗರಿಯ ಕಡುಸೊಂಪು**
**ಸೊಗಸುವಡೆದ ಸುಳಿಗುರುಳಿನ ಗುಂಪು**
**ಆಡುವ ಮುರುಹು ಮಾಗಾಯ್ಗಳ ಪೆಂಪು**

**ಕೂಡಿ ಕುಣಿವ ಕುಡಿಹುಬ್ಬಿನಲಂಪು**

**..............................................................**

**ಮುಳಿದು ಯಶೋದೆ ಕಟ್ಟಿದ ಪೊಡೆದಾರ**
**ಮುದ್ದುಪೊಳೆಯೆ ನೇವಳದುಡಿದಾರ**
**ಬಳಸಿದ್ದವಳ ಸರದ ಶೃಂಗಾರ**
**ಬಣ್ಣದುಡಿಯ ಬಿಗಿದಿಟ್ಟ ವೈಯಾರ**[೨]

ಒಟ್ಟಾರೆ ಈ ಕೀರ್ತನೆಯಲ್ಲಿ ವ್ಯಾಸರಾಯರ ಕಲ್ಪನೆಯ ಸೂಕ್ಷ್ಮನಿರೀಕ್ಷಣಾ ಶಕ್ತಿ, ಇಲ್ಲಿ ಶ್ರೀ ಕೃಷ್ಣನ ಒಂದು ಸಣ್ಣ ಅಂಶವನ್ನು ಗುರುತಿಸದೆ ಬಿಟ್ಟಿಲ್ಲ.

**ನಿನ್ನ ಮಗನೇನೆ ಗೋಪಿ**
**ಚೆನ್ನಾರಿ ಚೆಲುವ ಉಡುಪಿಯ ಕೃಷ್ಣರಾಯಾ**

**..............................................................**

**ಕಟವಾಯಿ ಬೆಣ್ಣೆ ಕಾಡಿಗೆಗಣ್ಣು ಕಟಿಸೂತ್ರ**
**ಪಟವಾಳಿ ಕೌಪೀನ ಕೊರಳಲ್ಲಿ ಪದಕ**
**ಸಟೆಯಿಲ್ಲ ಬ್ರಹ್ಮಾಂಡ ಉದರದಲಿಂಬಿಟ್ಟು**
**ಮಿಟಮಿಟನೆ ನೋಡುವ ನೀ ಮುದ್ದುಬಾಲ**

**ಹರಿವ ಹಾವನು ಕಂಡು ಹೆಡೆ ಹಿಡಿದಾಡುವ**
**ಕರುವಾಗಿ ಆಕಳ ಮೊಲೆಯುಂಬುವ**
**ಹಿರಿದಾಗಿ ನೋಡಲು ಅಂತರಂಗದ ಸ್ವಾಮಿ**
**ಧರೆಯೊಳಂಬುಧಿ ತೀರ ಉಡುಪಿನ ಕೃಷ್ಣ**[೩]

ಎಂದು ಬಾಲಕೃಷ್ಣನ ಸೌಂದರ್ಯವನ್ನು ಅವನ ಬಾಲಲೀಲೆಗಳನ್ನು ಸುಂದರವಾಗಿ ಸೆರೆಹಿಡಿದಿದ್ದಾರೆ.

'ಕಡೆಗೋಲ ತಾರೆನ್ನ ಚಿನ್ನವೆ – ಮೊಸರೊಡೆದರೆ ಬೆಣ್ಣೆ ಬಾರದು' ಎಂದು ಮೊದಲಾಗುವ ಮತ್ತೊಂದು ಕೀರ್ತನೆಯಲ್ಲಿ ಕಡೆಗೋಲು ತೆಗೆದುಕೊಂಡು ಓಡುತ್ತಿರುವ ಕೃಷ್ಣನನ್ನು ಜಾಣ್ಮೆಯಿಂದ ಒಲಿಸಿಕೊಳ್ಳುವ ಪರಿ ಅನನ್ಯವಾಗಿದೆ. 'ತಾರೆನ್ನ ಚಿನ್ನವೆ ಎಂದು ತಾಯಿ ಸಹಜವಾಗಿ ಮಾತನಾಡಿಸುವ ರೀತಿ, ಆ ಮಗುವಿಗೆ ಈ ಬೆಣ್ಣೆಯ ಮುದ್ದೆ ಬಣ್ಣದ ಸರವನ್ನು ಕೊಡುತ್ತೇನೆಂದು ಹೇಳುವ ಮೂಲಕ ಅದರ ಮನಸ್ಸನ್ನು ಬೇರೆಡೆ ಸೆಳೆಯುವ ನೈಪುಣ್ಯತೆ ತಾಯಿಗಲ್ಲದೆ ಬೇರಾರಿಗೂ ಸಾಧ್ಯವಿಲ್ಲ.

ಪುಟ್ಟ ಬಟ್ಟಿಯ ತಂದು ನಿನ್ನಯ ಚಿನ್ನದ
ತೊಟ್ಟಿಲ ಕಾಲಿಗೆ ಕಟ್ಟಿಸುವೆ
ಬಟ್ಟಲು ತುಂಬಿದ ಸಕ್ಕರೆ ನಿನಗೀವೆ
ಕಟ್ಟಾಣಿ ಮುತ್ತಿನ ಸರವನೀವೆ೧೪

ಎಂದು ಹೇಳುತ್ತಾ ಬಡವರ ಭಾಗ್ಯದ ನಿಧಿಯೆ, ಮಾಣಿಕ್ಯದ ಹರಳೆ ಎಂದು ಸುಂದರ ಉಪಮಾನಗಳ ಮೂಲಕ ಮಗುವಿನ ಮನಸ್ಸನ್ನು ಸಹಜವಾಗಿ ಒಲಿಸಿಕೊಳ್ಳುವ ಬಗೆ ಚಿತ್ತಾಕರ್ಷಕವಾಗಿದೆ.

'ತಣ್ಣನೆ ಹೊತ್ತಲಿ ನಾವು ಬೆಣ್ಣೆ ತೆಗೆಯುವ ಸಮಯದಿ ಚಿಣ್ಣ ಬಂದು ಕಣ್ಣು ಮುಚ್ಚಿ ಬೆಣ್ಣೆ ಸವಿದು ಪೋದನೆ'೧೫ ಎಂಬ ಕೀರ್ತನೆಯಲ್ಲೂ ಬಾಲಕೃಷ್ಣನ ತುಂಟಾಟಗಳನ್ನು ಸುಂದರವಾಗಿ ಚಿತ್ರಿಸಿದ್ದಾರೆ. ಹೀಗೆ ಹಲವು ಕೀರ್ತನೆಗಳಲ್ಲಿ ವ್ಯಾಸರಾಯರು ಮುದ್ದುಕೃಷ್ಣನ ಶರೀರವನ್ನು ಅವನು ಧರಿಸಿರುವ ಆಭರಣಗಳನ್ನು ಅವನ ತುಂಟಾಟ, ಚೇಷ್ಟೆ, ಲೀಲಾವಿನೋದಗಳನ್ನು ಸಹಜವಾದ ಭಾಷೆಯಲ್ಲಿ ಸುಂದರವಾಗಿ ಚಿತ್ರಿಸಿದ್ದಾರೆ.

'ಕಾಳಿಂಗನಾ ಮೆಟ್ಟಿ ನಾಟ್ಯವಾಡಿದ ಕಂಜನಾಭ ಕೃಷ್ಣನು' ಎಂದು ಮೊದಲಾಗುವ ಕೀರ್ತನೆಯಲ್ಲಿ ಬಾಲಕೃಷ್ಣನು ಕಾಳಿಂಗನ ಹೆಡೆಯ ಮೇಲೆ ನಾಟ್ಯವಾಡಿದ ದೃಶ್ಯವನ್ನು ನೃತ್ಯಕ್ಕೆ ಹೊಂದುವ ರೀತಿಯಲ್ಲಿ ಮನೋಹರವಾಗಿ ಚಿತ್ರಿಸಿದ್ದಾರೆ. ಇಲ್ಲಿ ಬಳಸಿರುವ ಅನುಕರಣಾವ್ಯಯಗಳು, ದ್ವಿರುಕ್ತಿಗಳು ಕೀರ್ತನೆಗೆ ಸೊಬಗನ್ನು ನೀಡಿದೆ. ಮತ್ತೊಂದು ಮುಖ್ಯ ಅಂಶವೆಂದರೆ ಭಾಷಿಕವಾಗಿ ಬಯಲಾಟದ ಹಾಗೂ ಯಕ್ಷಗಾನದ ಪ್ರಭಾವವನ್ನು ಕಾಣಬಹುದು.

ಕಾಲಲಿ ಗೆಜ್ಜೆ ಘಲು ಘಲುಕೆನ್ನೆ
ಫಾಲದಿ ತಿಲಕವು ಹೊಳೆ ಹೊಳೆ ಹೊಳೆಯುತ್ತ
ಜ್ವಲಿತ ಮಣಿಮಯ ಲಲಿತ ಪದಕಹಾರ
ಜ್ವಲಿತ ಕಾಂತಿ ಬೆಳಗುತಾ ದಿಕ್ಕುಗಳಲ್ಲಿ

ಸುರರು ದುಂದುಭಿಯ ಢಣಢಣಢಣರೆಂದು
ಮೊರೆಯೆ ತಾಳಗಳು ಝಣಝಣ ಝಣಾರೆಂದು
ಹರಬ್ರಹ್ಮ ಸುರರು ತಥ್ಥೈ ತಥ್ಥೈಯೆನ್ನಲು
ನಾರದ ತುಂಬುರ ಸಿದ್ಧರು ವಿದ್ಯಾ
ಧರರು ಅಂಬರದಲ್ಲಿ ಆಡುತ್ತಾ ಪಾಡಲು
.......................................................೧೬

ವ್ಯಾಸರಾಯರ ಕೃತಿಗಳು ವರ್ಣನಾ ಪ್ರಧಾನವಾಗಿದ್ದು ನಾದಮಾಧುರ್ಯದಿಂದ ಕೂಡಿದೆ. ಶ್ರೀ ಕೃಷ್ಣನ ಆಗಮನದಿಂದ ಇಡೀ ಗೋಕುಲವೇ ಸ್ವರ್ಗವಾಗಿ ಪರಿವರ್ತಿತವಾಗುವ ದೃಶ್ಯವನ್ನು ರಮ್ಯವಾಗಿ ಕಲ್ಪಿಸಿ ಚಿತ್ರಿಸಿದ್ದಾರೆ.

**ಇತ್ತಗೋವಳರಾಟಕೆ ತಲೆದೂಗುತ**
**ಅತ್ತ ದೇವತೆಗಳ ಸ್ತುತಿ ಕೇಳುತ್ತ**
**ಇತ್ತ ಗೋವಳೆಯರ ನಗಿಸುತ್ತ ನಗುತ್ತ**
**ಅತ್ತಿತ್ತ ಮುನಿಗಳ ಸ್ತುತಿ ಕೇಳುತ್ತ.** [೨೭]

ಹೀಗೆ ಗೋಪಿಯರ ಸಂತೋಷವನ್ನು ಒಂದೆಡೆ ಚಿತ್ರಿಸಿದರೆ, ಮತ್ತೊಂದೆಡೆ ಕೃಷ್ಣನು ಮಧುರೆಗೆ ತೆರಳಿದ ಮೇಲೆ ಅವನ ಅಗಲಿಕೆಯಿಂದ ಗೋಪಿಯರ ವಿರಹ ಯಾತನೆ ಮನಕಲಕುವಂತದ್ದು.

**ಕಾಣದೆ ನಿಲ್ಲಲಾರೆ, ಕಮನೀಯ ಮೂರುತಿಯ**
**ಪ್ರಾಣೇಶನ ತೋರೆ ಗಿಣಿಯೆ.** **ಪ**

**ಮಾಣಿಕ್ಯ ಪದವ ಮನ್ನಿಸಿ ನಿನಗೀವೆ**
**ಜಾಣೆ ಕೃಷ್ಣನ ತೋರೆ ಗಿಣಿಯೆ** **ಅ.ಪ.**

**ಮಕರಕುಂಡಲಧರನ ಮಕರಧ್ವಜನ ಪಿತನ**
**ಮಕುಟ ಭೂಷಣನ ತೋರೆ ಗಿಣಿಯೆ**
**ಮಕರಾಕ್ಷ ಸಂಹರನ ಮಕರಾರಿ ರಕ್ಷಕನ**
**ಮಕರ ಶಿಕ್ಷಕನ ತೋರೆ ಗಿಣಿಯೆ** [೨೮]

ಎಂದು ಗೋಪಿಯೊಬ್ಬಳು ತನ್ನ ಪ್ರೀತಿಯ ಗಿಣಿಯೊಂದಿಗೆ, ಕೃಷ್ಣನನ್ನು ಕರೆತಾರೆಂದು ಬೇಡುವ ಬಗೆಯನ್ನು ವ್ಯಾಸರಾಯರು ಮನೋಜ್ಞವಾಗಿ ಚಿತ್ರಿಸಿದ್ದಾರೆ. ಕಾಳಿದಾಸನ ಮೇಘದೂತ ಕಲ್ಪನೆಯನ್ನು ಇದು ನೆನಪಿಗೆ ತರುತ್ತದೆ.

'ಭವರೋಗ ಹರವಾದೊಂದೌಷಧಿ ತ್ರೈಭುವನ ವಿಖ್ಯಾತವಾಗಿದೆ ಬುದ್ಧಿವಂತರಿಗೆ' [೨೯] ಭವರೋಗ ನಿವಾರಣೆಗೆ ಔಷಧವೆಂದರೆ ಭಗವಂತನ ಧ್ಯಾನ, ಎಂದು ಲೌಕಿಕ ಔಷಧಿಯ ಹೋಲಿಕೆ ನೀಡುತ್ತಾ, ಯಾರು ಬೇಕಾದರೂ ನಿತ್ಯವೂ ಸೇವಿಸಬಹುದು ಎಂದು ಭಗವನ್ನಾಮಸ್ಮರಣೆಯ ಮಹತ್ವವನ್ನು ಹೇಳಿದ್ದಾರೆ.

**ಬಲ್ಲವಗಿಲ್ಲಿದೆ ವೈಕುಂಠ** **ಪ**

**ಬಲ್ಲವಗೆಲ್ಲೊ ಶ್ರೀಹರಿ ಪೂಜೆ**
**ಶರೀರ ಹರಿಯ ಪಟ್ಟಣ ಹೃದಯ**
**ಸರೋಜವಾತನ ಅರಮನೆ**
**ಸೂರ್ಯಾದಿ ದೇವರು ಚಕ್ಷುರಾದಿಗಳಲ್ಲಿ**
**ದ್ವಾರಪಾಲಕರಾಗಿ ಇಪ್ಪರೆಂದು**

..................................................

**ಹರಿ ಚರಾಚರ ಸರ್ವ ಜಗದ್ಭರಿತ**
**ಮುರಹರನಿದ್ದುದೆ ವೈಕುಂಠ**
**ನರಹರಿಯಲಿ ನವವಿಧ ಭಕುತಿಗೆ**
**ಸರಿಸಮವೆಂದಿಗಿಲ್ಲವೆಂದು**[೩೦]

ಈ ಕೀರ್ತನೆಯಲ್ಲಿ ಶ್ರೀಹರಿಯು ಸರ್ವವ್ಯಾಪ್ತನೆಂಬುದನ್ನು ದ್ವೈತ ತತ್ವದ ಹಿನ್ನೆಲೆಯಲ್ಲಿ ವಿವರಿಸುತ್ತಾ ಇಹದ ಲೌಕಿಕ ಬದುಕಿಗೆ ಪ್ರಾಮುಖ್ಯತೆ ನೀಡಿದ್ದಾರೆ. ಅರಿತು ನಡೆಯುವ ಭಕ್ತರ ಜ್ಞಾನಿಗಳ ಪಾಲಿಗೆ ಈ ಲೋಕ ವೈಕುಂಠವಾಗಿದೆ ಎಂದಿದ್ದಾರೆ. 'ರಂಗಯ್ಯ ಮನೆಗೆ ಬಂದರೆ ಅಂತರಂಗದಿ ಗುಡಿಕಟ್ಟಿ ಕುಣಿವೆನಾ' ಎಂದು ಮೊದಲಾಗುವ ಕೀರ್ತನೆಯಲ್ಲಿ ಭಗವಂತ ತಮ್ಮ ಮನೆಗೆ ಬಂದರೆ ತಮಗಾಗುವ ಅನುಭವವನ್ನು ಸುಂದರವಾದ ಉಪಮಾನಗಳೊಂದಿಗೆ ಮನೋಜ್ಞವಾಗಿ ಚಿತ್ರಿಸಿದ್ದಾರೆ.

**ಬಿಸಿಲು ಬೆಳದಿಂಗಳಾಯಿತು ತಾ**
**ಮಸ ಹೋಗಿ ಜ್ಞಾನೋದಯವಾಯಿತು**
**ಕುಸುಮನಾಭನು ತಾ ಬಂದರೆ ಅಲ್ಲಿ**
**ವಿಷ ಹೋಗಿ ಅಮೃತವಾಯಿತು ನೋಡ ಎಂದಿದ್ದಾರೆ.**

**ಹಾವು ನ್ಯಾವಳವಾಯಿತು, ಅಲ್ಲಿ**
**ದಾವಾನಳ ತಂಪಾಯಿತು**
**ಬೇವು ಸಕ್ಕರೆ ಆಯಿತು ನಮ್ಮ**
**ದೇವಕಿಸುತ ಬಂದರೆ ನೋಡ**[೩೧]

ಇನ್ನೊಂದು ಕೀರ್ತನೆಯಲ್ಲಿ 'ಎಂಥಾದ್ದೊ ಹರಿಯ ಕರುಣ'[೩೨] ಎಂದು ಉದ್ಗಾರ ತೆಗೆದು ಹರಿಯ ಕರುಣೆಯನ್ನು ಪ್ರಸ್ತಾಪಿಸಿದರೆ ಮತ್ತೊಂದು ಕೀರ್ತನೆಯಲ್ಲಿ 'ಅಂತರಂಗದಲಿ ಹರಿಯ ಕಾಣದವನ ಹುಟ್ಟುಕುರುಡನೋ'[೩೩] ಎಂದಿದ್ದಾರೆ. ಶ್ರೀಹರಿಯನ್ನು ಸ್ತುತಿಸಿರುವ ಇನ್ನೊಂದು ಕೀರ್ತನೆ.

ಮನ್ನಿಪೆನ್ನ ಮನ್ಮಥ ಜನಕ – ಮಧು ಸೂ
ದನ್ನ ಮಂದರೋದ್ಧಾರ ಪ

ನಿನ್ನ ನಂಬಿದೆ ನಿರಂತರದಿ ನೀನಿಹಪರದಲ್ಲಿ ಕಾಯಯ್ಯ ಅ. ಪ

ಶ್ರೀರಂಗ ಖಗತುರಂಗ ಜಗದಂತರಂಗ
ವಿಧಿ ಕುರಂಗಧರ ನಮಿತ ಸಾರಂಗ
ಪರಿಪಾಲ ಸುಗುಣಜಾಲ ಲಕುಮಿಲೋಲ
ಕೃಪಾರಸತರಂಗಿತಾಪಾಂಗ ದುರಿತಭಂಗ
ಧೃತರ ಥಾಂಗ ಶುಭಾಂಗ ............. ೬೪

ಈ ಕೀರ್ತನೆಯಲ್ಲಿ ಮೊದಲಿನಿಂದ ಕಡೆಯವರೆಗೂ ಸಂಸ್ಕೃತ ಮತ್ತು ಕನ್ನಡ ಭಾಷೆಯ ಹದವಾದ ಮಿಶ್ರಣ, ಅರ್ಥಪೂರ್ಣವಾದ ವಿಶೇಷಣಗಳು, ಪ್ರಾಸಾನು ಪ್ರಾಸ ಹಾಗೂ ಶಬ್ದ ಸೌಂದರ್ಯ ಗಮನಾರ್ಹವಾಗಿದೆ.

'ವ್ಯಾಸರಾಯರು ಗುರುಗಳಾದ ಶ್ರೀಪಾದರಾಜರ ಹಾದಿಯಲ್ಲೇ ನಡೆದು ಅನೇಕ ಸುಳಾದಿಗಳನ್ನು ರಚಿಸಿದ್ದಾರೆ. ತಾಯಿ, ತಂದೆ, ಸಹೋದರ ಇನ್ನೂ ಮುಂತಾದ ಯಾವ ಸಂಬಂಧೀಕರು ಸಮಯಕ್ಕೆ ಆಗುವುದಿಲ್ಲ ಎಂದು ಲೌಕಿಕ ಸಂಬಂಧಗಳನ್ನು ಆಕ್ಷೇಪಿಸುತ್ತಾ, ಭಕ್ತ ಮತ್ತು ಭಗವಂತನ ಸಂಬಂಧವು ಮಾತ್ರ ಈ ಎಲ್ಲಾ ಲೌಕಿಕ ಸಂಬಂಧಗಳಿಗೆ ಮೀರಿದುದು ಎಂಬುದನ್ನು ಒಂದು ಸುಳಾದಿಯಲ್ಲಿ ಸುಂದರವಾಗಿ ಚಿತ್ರಿಸಿದ್ದಾರೆ.

ತಾಯಿಯೆಂಬೆನೆ ನಿನ್ನ – ಧ್ರುವನ್ನ ತಾಯಿಯು ನಿನ್ನಂತೆ ಕಾಯಿದಳೆ
ತಂದೆಯೆಂಬೆನೆ ನಿನ್ನ – ಪ್ರಹ್ಲಾದನ ತಂದೆ ನಿನ್ನಂತೆ ಕಾಯಿದನೆ
ಭ್ರಾತೃ ಎಂಬೆನ್ನೆ ನಿನ್ನ – ವಿಭೀಷಣನ್ನ ಭ್ರಾತೃ ನಿನ್ನಂತೆ ಕಾಯಿದನೆ
ಪತಿಯೆಂಬೆನೆ ನಿನ್ನ – ಪಾಂಚಾಲಿಯ ಪತಿಗಳು ನಿನ್ನಂತೆ ಕಾಯಿದರೆ
ಪುತ್ರನೆಂಬೆನೆ ನಿನ್ನ ಉಗ್ರಸೇನನ ಪುತ್ರ ನಿನ್ನಂತೆ ಕಾಯಿದನೆ
ಮಿತ್ರನೆಂಬೆನೆ ನಿನ್ನ ಗಜೇಂದ್ರನ ಮಿತ್ರರು ನಿನ್ನಂತೆ ಕಾಯಿದರೆ
ಆವ ಅನಿಮಿತ್ತ ಬಂಧೂವೋ ನೀನಾವ ಕರುಣಾಸಿಂಧುವೋ
ದೇವ ಕೃಷ್ಣ ನಿನಗೆ ಬಂಟರಲ್ಲಿ ನೆಂಟತನ ಹೊಸ ಪರಿಯಯ್ಯ೬೫

ಎಂದು ಅವನ ಜೊತೆಗಿನ ಮಧುರ ಬಾಂಧವ್ಯವನ್ನು ಯಾವ ಸಂಬಂಧದ ಮಿತಿಗೂ ಒಳಪಡಿಸಲಾಗದೆ ಬೆರಗಾಗಿದ್ದಾರೆ.

ಜನ್ಮಾಂತರವೆಂಬ ಅಡವಿಯಲ್ಲಿ ಸಿಕ್ಕಿ ಬಳಲುವ ಮನುಷ್ಯನ ತೊಳಲಾಟವನ್ನು ಒಂದು

ಸುಳಾದಿಯ ಪ್ರತಿಯೊಂದು ನುಡಿಯಲ್ಲೂ ಸುಂದರ ಉಪಮಾನಗಳಿಂದ ಚಿತ್ರಿಸಿದ್ದಾರೆ.

**ತಾಪತ್ರಯವೆಂಬ ದಾವಾನಲದಿಂದ**
**ಪಾಪರ ಸಂಗವೆಂಬ ವಿಷವೃಕ್ಷದಿಂದ**
**ಕಾಪಥವೆಂಬ ಬಹು ತಪ್ಪುಗಳಿಂದ**
**ಕೋಪವೆಂಬಟ್ಟುವ ಕಾಳೋಗರದಿಂದ**

**ಈ ಪರಿಯಲಿ ನೊಂದೆ ಭವಾಟವಿಯಲಿ**
**ನೀ ಪಾಲಿಸಬೇಕೆನ್ನನು ಸಿರಿ ಕೃಷ್ಣ..**

ಆಯುಷ್ಯ ಕಳೆದು ವಯಸ್ಸಾದರೂ ಮನುಷ್ಯನ ಲೌಕಿಕ ವ್ಯಾಮೋಹ ಮಾತ್ರ ಕಡಿಮೆಯಾಗುವುದಿಲ್ಲ. ದೇಹದ ಪಾಪಕೋಟಿಗಳನ್ನು ಮನ್ನಿಸಬೇಕು ಮುಂದಿನ ದಾರಿ ತೋರಿಸಬೇಕು ನೀ ಕೃಷ್ಣ ಎಂದು ಬೇಡುತ್ತಾ

**ಹರಿನಾಮ ಹರಿಪಾದ ತೀರಥವಿರಲು**
**ಹರಿದಿನ ಹರಿದಾಸರ ಪಾದ ರಜವಿರಲು**
**ದುರಿತದ ಭಯವ್ಯಾಕೆ ನರಕದ ಭೀತ್ಯಾಕೆ**
**ದುರಿತದ ಭಯವೆ ಕೇಸರಿಯ ಇಕ್ಕೆಯೊಳಿದ್ದವಗೆ**
**ಕರಿಯ ಭಯವುಂಟೆ ಶ್ರೀ ಕೃಷ್ಣನ ದಾಸರ ಸಂಗವಿರಲು**
**ದುರಿತ ತಿಮಿರಕ್ಕೆ ತರಣಿ ತಾನಲ್ಲವೆ..**

ಎಂದು ಈ ಸುಳಾದಿಯಲ್ಲಿ ಹರಿ ಮತ್ತು ಹರಿದಾಸರ ಸಹವಾಸದಲ್ಲಿರುವವನಿಗೆ ಭಯದ ಪ್ರಶ್ನೆಯೇ ಇಲ್ಲ ಎಂದು ಅಭಯ ನೀಡಿದ್ದಾರೆ. ಹಾಗೆಯೇ ಹರಿಯ ನಾಮಸ್ಮರಣೆ ಮಾಡದ ಮನುಷ್ಯರು ಎಷ್ಟು ತಿರಸ್ಕಾರಕ್ಕೆ ಒಳಗಾಗುತ್ತಾರೆಂಬುದನ್ನು ಒಂದು ಉಗಾಭೋಗದಲ್ಲಿ ಸೂಕ್ತವಾದ ನಿದರ್ಶನಗಳಿಂದ ನಿರೂಪಿಸುತ್ತಾರೆ.

**ನೀರಿಲ್ಲದ ಭಾವಿ, ಊರಿಲ್ಲದ ಮಠವು**
**ನೆಳಲಿಲ್ಲದ ಮರ, ಫಲವಿಲ್ಲದ ಲತೆ**
**ದನವಿಲ್ಲದ ದಾತ, ದಯವಿಲ್ಲದ ನಾಥ**
**ಮನಸಿಲ್ಲದ ಶಕುತಿ, ಭಯವಿಲ್ಲದ ಭಕುತಿ**
**ನರಹರಿ, ಮುಕುಂದ, ಶ್ರೀ ಕೃಷ್ಣ ಎನ್ನದ**
**ನರರಿದ್ದು ಫಲವೇನು, ಇಲ್ಲದಿದ್ದರೆ ಏನು..** ಎಂದಿದ್ದಾರೆ

ಇಲ್ಲೆಲ್ಲಾ ಯತಿಗಳಾಗಿಯೂ ಅವರ ಲೋಕಾನುಭವ ಮತ್ತು ಸಾಹಿತ್ಯಕಗುಣ ಮೆಚ್ಚುವಂತದು.

ವ್ಯಾಸರಾಯರ ಕೃತಿಗಳಲ್ಲಿ ಆಡುಮಾತಿನ ಸೊಬಗು, ಸರಳ ನುಡಿಗಳಲ್ಲಿ ಸಹಜ ನಿರೂಪಣೆಗಳನ್ನು ಕಾಣಬಹುದು. ‘ನಂಬಿ ಕೆಟ್ಟವರಿಲ್ಲವೋ ರಂಗಯ್ಯನ ನಂಬದೆ ಕೆಟ್ಟರೆ ಕೆಡಲಿ’[೩೯] ‘ಬಿಗಿಯದಿರು ಬಿಗಿಯದಿರು ಎಲೆ ಮಾನವ, ಧಿಗಿ ಧಿಗಿಯೆನುತ, ನಿನಗೇಕೆ ಗರ್ವ’[೪೦] ‘ನಿನಗಾರು ಸರಿಯಿಲ್ಲ – ಎನಗನ್ಯ ಗತಿಯಿಲ್ಲ’[೪೧] ‘ಉಕ್ಕುವ ತುಪ್ಪಕ್ಕೆ ಕೈಯ್ಯಿಕ್ಕುವೆ ನಾನು’[೪೨] ‘ಛೀ ಛೀ ಮನವೆ ನಾಚದ ತನುವೆ’[೪೩] ಇಲ್ಲಿ ಉದಾಹರಿಸಿದ ಎಲ್ಲಾ ಕೀರ್ತನೆಗಳ ಸಾಲುಗಳಲ್ಲೂ ವ್ಯಾಸರಾಯರ ಆಡುಮಾತಿನ ಸಹಜ ಸೊಗಡನ್ನು ಗಮನಿಸಬಹುದು  ಅಲ್ಲದೆ ವ್ಯಾಸರಾಯರು ಗಾದೆಗಳನ್ನು ಸಹ ತಮ್ಮ ಕೀರ್ತನೆಗಳಲ್ಲಿ ಸಹಜವಾಗಿ ದುಡಿಸಿಕೊಂಡಿದ್ದಾರೆ.  ‘ಕೋಳುವೋಗದ ಮುನ್ನ ಕೋಟೆ ರಕ್ಷಿಸಬೇಕು’[೪೪] ‘ಕಣ್ತೆರೆಯದ ಹಸುಳೆ ತಾಯನರಿಯದಂತೆ’[೪೫] ‘ಕಂಡು ಕಂಡು ಪತಂಗ ಕಿಚ್ಚಿನೊಳ್ ಬೀಳ್ವಂತೆ’[೪೬] ‘ನಡೆವೋರಿಲ್ಲದೆ ದಾರಿ ಹಸಗೆಟ್ಟಿತು’[೪೭] ‘ವಾತಗುದ್ದಿ ಕೈಗಳೆರಡು ನೋಯಿಸಲೇಕೆ’[೪೮] ‘ಜೇನಿನೊಳಗೆ ಬಿದ್ದ ನೊಣದಂತೆ’[೪೯] ‘ಇಲಿಗಳಿಗೆ ಬೆಕ್ಕು ಸಾಧಿಪ ಪರಿಯಂತೆ’[೫೦] ನಿಧಿಯ ಮೇಲಿದ್ದೂ ನಿಧಿಯನರಿಯದಂತೆ’[೫೧] ‘ಕರದಲೊಪ್ಪುವ ಮುತ್ತಿಗೆ ಕನ್ನಡಿಯ ನೋಡಲೇಕೆ’[೫೨] ಇನ್ನೂ ಮುಂತಾದ ಗಾದೆಗಳನ್ನು ಸಂದರ್ಭಕ್ಕೆ ತಕ್ಕಂತೆ ಸಶಕ್ತವಾಗಿ ಬಳಸಿದ್ದಾರೆ.

“ವ್ಯಾಸರಾಯರ ಕೃತಿಗಳೆಲ್ಲವನ್ನೂ ಒಟ್ಟಾಗಿ ಪರಿಭಾವಿಸಿದಾಗ ಅವರು ಮಧ್ವಮತ ತತ್ವಗಳಿಗೆ ಪ್ರಾಶಸ್ತ್ಯ ಕೊಟ್ಟಿರುವುದು ನಿಜವಾದರೂ, ಆ ಸಾಹಿತ್ಯ ಒಳಗೊಂಡಿರುವ ಜೀವನಾನುಭವಗಳಿಂದ, ಉಪದೇಶಿಸಿರುವ ಸಾರ್ವತ್ರಿಕ ಮೌಲ್ಯಗಳಿಂದ ಕನ್ನಡ ಜನತೆಗೆ ‘ಅಮೂಲ್ಯ ನಿಧಿ’ಯಾಗಿ ಪರಿಣಮಿಸಿದೆ.  ಲಕ್ಷಗೀತೆಗಳ ಮೂಲಕ ಕರ್ನಾಟಕ ಶಾಸ್ತ್ರೀಯ ಸಂಗೀತಕ್ಕೂ, ಮಧ್ವದರ್ಶನ ಪ್ರತಿಪಾದನೆಯ ಮೂಲಕ ಭಾರತೀಯ ತತ್ತ್ವಶಾಸ್ತ್ರಕ್ಕೂ ಅವರ ಕೊಡುಗೆ ಅಪಾರ.  ವಿಮರ್ಶಕರ ಪ್ರಕಾರ ವ್ಯಾಸರಾಯರ ತರ್ಕ, ಕುಶಲತೆ, ಆಳವಾದ ಆಲೋಚನಾ ಸರಣಿಗಳು ಭಾರತೀಯ ತತ್ವಮೀಮಾಂಸೆಯಲ್ಲಿಯೇ ಅದ್ವಿತೀಯವಾಗಿ ನಿಲ್ಲುವಂಥವು’[೫೩] ಹೀಗೆ ವ್ಯಾಸರಾಯರು ಶ್ರೀಪಾದರಾಜರು ಪ್ರಾರಂಭಿಸಿದ ಕೀರ್ತನ ಕೈಂಕರ್ಯಕ್ಕೆ ಒಂದು ಸುವ್ಯವಸ್ಥೆಯನ್ನು ಕಲ್ಪಿಸಿ ದಾಸಕೂಟದ ಮೇಲ್ವಿಚಾರಕರಾದರು.  ಹರಿದಾಸ ಸಾಹಿತ್ಯದ ಪ್ರಮುಖರಾದ ಪುರಂದರದಾಸರು, ಕನಕದಾಸರು, ವಾದಿರಾಜರು ಮುಂತಾದ ಉತ್ತಮ ಶಿಷ್ಯರನ್ನು ಕನ್ನಡಿಗರಿಗಿತ್ತಿದ್ದಾರೆ.

ಹರಿದಾಸ ವಾಙ್ಞಯಕ್ಕೆ ಶ್ರೇಷ್ಠವಾದ ಕೃತಿಗಳನ್ನು ಸಲ್ಲಿಸಿದ ಯತಿತ್ರಯರಲ್ಲಿ ಶ್ರೀವಾದಿರಾಜರು

ಮೂರನೆಯವರು. ಶ್ರೀಪಾದರಾಜರು ಮತ್ತು ವ್ಯಾಸರಾಜರ ಹಾದಿಯನ್ನೇ ಅನುಸರಿಸಿ, ಕನ್ನಡ, ಸಂಸ್ಕೃತ ಎರಡೂ ಭಾಷೆಗಳಲ್ಲಿ ಕೃತಿರಚನೆ ಮಾಡಿದರು. ಸಂಸ್ಕೃತ ಕೃತಿಗಳಲ್ಲಿ ವ್ಯಾಖ್ಯಾನ ರೂಪವಾದ, ಟಿಪ್ಪಣಿ ರೂಪವಾದ ಶಾಸ್ತ್ರಗ್ರಂಥಗಳು, ಸಾಹಿತ್ಯ ಕೃತಿಗಳು ಮತ್ತು ಸ್ತೋತ್ರಗಳು ಪ್ರಸಿದ್ಧವಾಗಿವೆ. ಯುಕ್ತಿಮಲ್ಲಿಕಾ, ಲಕ್ಷಾಭರಣ, ರುಕ್ಮಿಣೀಶವಿಜಯ, ತೀರ್ಥಪ್ರಬಂಧ – ಇವೆಲ್ಲಾ ಸಂಸ್ಕೃತ ಪ್ರೌಢಗ್ರಂಥಗಳು. ಶ್ರೀಪಾದರಾಜರು ವ್ಯಾಸರಾಯರಂತೆ ಕೀರ್ತನೆ, ಸುಳಾದಿ, ಉಗಾಭೋಗಗಳನ್ನು ರಚಿಸಿರುವ ವಾದಿರಾಜರು ಇನ್ನೂ ಒಂದು ಹೆಜ್ಜೆ ಮುಂದುವರೆದು ಸರಳವಾದ ತ್ರಿಪದಿ ಇಲ್ಲವೇ ಸಾಂಗತ್ಯಗಳ ಮೂಲಕ ಮಧ್ವಾಚಾರ್ಯರ ಸಿದ್ಧಾಂತಗಳನ್ನು ಪ್ರತಿಪಾದಿಸಿದರು. ಅಲ್ಲದೇ ವೈಕುಂಠವರ್ಣನೆ, ಹರಿಸರ್ವೋತ್ತಮಸಾರ, ಸ್ವಪ್ನಪದ, ಗುಂಡಕ್ರಿಯೆ, ಲಕ್ಷ್ಮಿ ಶೋಭಾನೆ, ನಾರದ ಕೊರವಂಜಿ, ತತ್ವ ಸುವ್ವಾಲಿ, ಬಿರುಗಿನ ಸುವ್ವಾಲಿ ಮೊದಲಾದ ದೀರ್ಘ ಕೃತಿಗಳನ್ನು ರಚಿಸಿದರು. ಹೀಗೆ ಹರಿದಾಸ ಸಾಹಿತ್ಯ ಆನಂದವನ್ನು ಹೊಂದುವುದಕ್ಕೆ ಮಾತ್ರವಲ್ಲ, ಶಾಸ್ತ್ರ ನಿರೂಪಣೆಯೂ ಸಾಧ್ಯ ಎಂಬುದನ್ನು ಮೊದಲಿಗೆ ವಾದಿರಾಜರು ತೋರಿಸಿಕೊಟ್ಟರು. ಅವರ ಈ ಹೊಸ ಪ್ರಯತ್ನಗಳಿಂದ ಪ್ರೇರಣೆ ಹೊಂದಿದ ವಿಜಯದಾಸರು ಸುಳಾದಿಗಳಲ್ಲಿ ತತ್ವಗಳನ್ನು ನಿರೂಪಿಸಿದರೆ ಅವರ ಪ್ರಶಿಷ್ಯರಾದ ಜಗನ್ನಾಥದಾಸರು 'ಹರಿಕಥಾಮೃತ ಸಾರ'ದಲ್ಲಿ ಸಂಪೂರ್ಣ ಮಧ್ವ ಸಿದ್ಧಾಂತವನ್ನೇ ನಿರೂಪಿಸಿದ್ದಾರೆ.

ವಾದಿರಾಜರ ಬಿಡಿ ಕೀರ್ತನೆಯು ಸುಮಾರು ಮುನ್ನೂರಕ್ಕೂ ಹೆಚ್ಚು ದೊರೆಯುತ್ತದೆ. ಹಲವು ಆಕರಗಳನ್ನು ಶೋಧಿಸಿ ಡಾ. ಟಿ. ಎನ್. ನಾಗರತ್ನ ಅವರು ವಾದಿರಾಜರ ಕೃತಿಗಳನ್ನು ಪ್ರಕಟಿಸಿದ್ದಾರೆ.

ಎಂಟನೆಯ ವಯಸ್ಸಿನಲ್ಲೇ ಯತ್ಯಾಶ್ರಮವನ್ನು ಸ್ವೀಕರಿಸಿ, ಧಾರ್ಮಿಕ, ಪಾರಮಾರ್ಥಿಕ ವಾತಾವರಣದಲ್ಲಿಯೇ ಬೆಳೆದ ವಾದಿರಾಜರು ಲೌಕಿಕ ಆಸೆ ಆಕಾಂಕ್ಷೆಗಳನ್ನು ಮೀರಿ ಬೆಳೆದಿದ್ದರು.

**ಹೀನಸಂಗವೆಲ್ಲ ಹಯಮುಖದೇ**
**ವನೇ ವರ್ಜಿಸುವಂತೆ ಮಾಡೊ**
**ಜ್ಞಾನಿಗಳರಸನೆ ದಯವಿಟ್ಟು ನಿನ್ನನು**
**ಧ್ಯಾನಿಸುವಂತೆ ಮಾಡೊ ಹಯವದನ „ – ಎಂಬುದು ಅವರ ಪ್ರಾರ್ಥನೆ.**

**ನಿನ್ನ ಧ್ಯಾನದ ಶಕ್ತಿಯ ಕೊಡೊ**
**ಅನ್ಯರಲಿ ವಿರಕ್ತಿಯ ಕೊಡೋ**

ನಿನ್ನ ನೋಡುವ ಯುಕ್ತಿಯ ಕೊಡೊ
ನಿನ್ನ ಪಾಡುವ ಭಕ್ತಿಯ ಕೊಡೊ
ನ್ನತ್ತೆ ಬರುವ ಸಂಪತ್ತಿಯ ಕೊಡೊ
ಚಿತ್ತದಿ ತತ್ವದ ಕೃತ್ಯವ ತೋರೊ
ಮತ್ತೆ ತುದಿಯಲಿ ಎನಗೆ ಮುಕ್ತಿಯ ಕೊಡೊ
ಅತ್ತತ್ತ ಮಾಡೊ ಭವಕತ್ತಲೆಯೆನಗೆಯೆ
ಮುತ್ತಿದೆ ಹಯವದನ

ಈ ಉಗಾಭೋಗದಲ್ಲಿ ವಾದಿರಾಜರ ವ್ಯಕ್ತಿತ್ವ ಮತ್ತು ಧ್ಯೇಯಗಳನ್ನು ಗುರುತಿಸಬಹುದು. ಧ್ಯಾನದ ಶಕ್ತಿ, ಅನ್ಯವಿಷಯಗಳಲ್ಲಿ ವಿರಕ್ತಿ, ಅಪರೋಕ್ಷಾನುಭವದ ಯುಕ್ತಿ, ಕೀರ್ತನ ಭಕ್ತಿ, ಭಗವತ್ ಸಾಮೀಪ್ಯ, ತತ್ವ ಚಿಂತನೆ, ಮುಕ್ತಿ ಬಯಕೆ, ಜ್ಞಾನಾಪೇಕ್ಷೆ–ಈ ಅಷ್ಟ ಅಪೇಕ್ಷೆಗಳ ಪ್ರಭಾವ ವಾದಿರಾಜರ ಕೀರ್ತನೆಗಳಲ್ಲಿ ಹರಡಿದೆ.

'ನಿನ್ನ ನೋಡುವ ಯುಕ್ತಿಯು ಕೊಡೊ' 'ನಿನ್ನತ್ತ ಬರುವ ಸಂಪತ್ತಿಯ ಕೊಡೊ' ಎಂಬ ಆತ್ಮಾನುಸಂಧಾನದಲ್ಲಿ ನಿರತರಾದ ವಾದಿರಾಜರಿಗೆ ಅವರ ಆರಾಧ್ಯದೈವ ಸಾಕ್ಷಾತ್ಕಾರವಾದ ಸಂದರ್ಭವನ್ನು 'ಕುದುರೆ ಬಂದಿದೆ ಚೆಲುವ ಕುದುರೆ ಬಂದಿದೆ' ಎಂಬ ಕೀರ್ತನೆಯಲ್ಲಿ ನಿರೂಪಿಸಿದ್ದಾರೆ. ಇದು ಅಪೂರ್ವ ಲಕ್ಷಣಗಳಿಂದ ಕೂಡಿದ ಕುದುರೆ, ಹಿಂಗಾಲಿಂದ ರಕ್ಕಸರ ಒದ್ದು ಮುಂಗಾಲು ಕೆದರಿ, ಬಾಲವಬೀಸಿ, ತಲೆತಗ್ಗಿಸಿ, ಅಡಿಗಡಿಗೆ ಜಿಗಿದು ಹಾರಿ ಹೂಂಕರಿಸುವ ದಿವ್ಯಾಶ್ವ, ತನ್ನ ವಕ್ಷದಲ್ಲಿ ಶ್ರೀವತ್ಸ, ಕೌಸ್ತುಭಗಳನ್ನು ಧರಿಸಿದೆ ಈ ಅಸಾಮಾನ್ಯ ಅಶ್ವಕ್ಕೆ ಹಲ್ಲಣ ಕಡಿವಾಣ ಹಾಕಲು ಸಾಧ್ಯವಿಲ್ಲ. ಇದು ಹುಲ್ಲು, ಹುರಳಿ ತಿಂದು ಜೀವಿಸುವ ಕುದುರೆಯಲ್ಲ. ಬೆಲ್ಲ ಕಡಳೆಗಳ ಹೂರಣವನ್ನು ಮೆಲ್ಲುವ ಕುದುರೆ. ಚೆಲುವ ಹಯವದನನ್ನು ವಾದಿರಾಜರು ಕಂಡ ರೀತಿ ಇದು.

ತಿರುಪತಿಯ ಶ್ರೀನಿವಾಸ, ಉಡುಪಿಯ ಶ್ರೀಕೃಷ್ಣ, ಸೋದೆಯ ತ್ರಿವಿಕ್ರಮ, ಬೇಲೂರು ಚೆನ್ನಕೇಶವ, ಶ್ರೀರಂಗದ ರಂಗನಾಥ ಹೀಗೆ ಹಲವಾರು ತೀರ್ಥಕ್ಷೇತ್ರ ಸ್ತುತಿಗಳು ವಾದಿರಾಜರ ಕೃತಿಗಳಲ್ಲಿವೆ. ಇವುಗಳ ಮಾಧುರ್ಯ ಮತ್ತು ಲಾಲಿತ್ಯ ಹಿತವಾಗಿದೆ.

ನೆನೆವೆನನುದಿನ ನೀಲ ನೀರದವರ್ಣನ ಗುಣರನ್ನನ
ಮುನಿಜನಪ್ರಿಯ ಮುದ್ದು ಉಡುಪಿನ ರಂಗನ ದಯಾಪಾಂಗನ ಪ

ದೇವಕೀ ಜಠರೋದಯಾಂಬುಧಿಚಂದ್ರನ ಸುಖಸಾಂದ್ರನ
ಗೋವ್ರಜಕೆ ಘನ ಯಮುನೆಯನು ದಾಟಿ ಬಂದನ ಅಲ್ಲಿ ನಿಂದನ
ಮಾವ ಕಳುಹಿದ ಮಾಯಶಕಟವಿಯ ಕೊಂದನ ಚಿದಾನಂದನ
ದೇವರಿಪು ದೈತ್ಯೇಂದ್ರ ಶಕಟನ ಒದ್ದನ ಶ್ರುತಿಸಿದ್ಧನ

ವಾದಿರಾಜರ ಕೃತಿಗಳಲ್ಲಿ ಬಾಲಗೋಪಾಲನ ಲೀಲೆಗಳು, ಯಶೋದೆಯ ಮಾತೃವಾತ್ಸಲ್ಯ, ಸ್ತ್ರೀಯರ ಹೃದಯದ ಮೊರೆ, ಇವುಗಳನ್ನು ಚಿತ್ರಿಸುವ ಅನೇಕ ಕೀರ್ತನೆಗಳಿವೆ. ಮಧುರ ಭಕ್ತಿ ಮತ್ತು ವಾತ್ಸಲ್ಯ ಭಕ್ತಿಗಳನ್ನು ಇಲ್ಲಿ ಗುರುತಿಸಬಹುದು. ಹೀಗೆಯೆ ದಶಾವತಾರಗಳನ್ನು ವಿವಿಧ ರೀತಿಯಲ್ಲಿ ಸಂಯೋಜಿಸಿರುವುದು ಅವರ ನಿರೂಪಣಾ ವೈವಿಧ್ಯಕ್ಕೆ ಸಾಕ್ಷಿಯಾಗಿದೆ. ನೇರವಾದ ಸ್ತುತಿಗಳಲ್ಲಿ, ಕೃಷ್ಣಲೀಲೆ ವಿವರಿಸುವಲ್ಲಿ, ಹಸೆಗೆ ಕರೆಯುವ ಹಾಡುಗಳಲ್ಲಿ, ಸಂಭಾಷಣಾ ರೂಪದಲ್ಲಿ, ಜೋಗುಳ ಪದಗಳಲ್ಲಿ, ದಶಾವತಾರ ಸ್ತುತಿಗಳಿವೆ. ದಶಾವತಾರಗಳನ್ನು ಕೆಲವು ಕಡೆ ಒಂದೊಂದು ಅವತಾರಕ್ಕೂ ಒಂದೋ ಅಥವಾ ಎರಡೋ ನುಡಿಗಳನ್ನು ಬಳಸಿರಬಹುದು. ಸಂಭಾಷಣೆಗಳ ನಿಂದಾಸ್ತುತಿ ರೂಪದಲ್ಲಿಯೂ ದಶಾವತಾರಸ್ತುತಿಗಳಿವೆ. ಕೀಚಕ ವಧೆ, ಮೋಹಿನಿ ವರ್ಣನೆಯ ಕೀರ್ತನೆಗಳಲ್ಲಿ ವಾದಿರಾಜರ ನಿರೂಪಣಾ ನೈಪುಣ್ಯತೆಯನ್ನು ಗುರುತಿಸಬಹುದು.

ವಾದಿರಾಜರು ತಮ್ಮ ನೂರಿಪ್ಪತ್ತು ವರ್ಷಗಳ ಜೀವನದಲ್ಲಿ ನೂರ ಹನ್ನೆರಡು ವರ್ಷಗಳನ್ನು ಪಾರಮಾರ್ಥಿಕ ಚಿಂತನೆಯಲ್ಲೇ ಕಳೆದವರು. ಈ ದೀರ್ಘಾವಧಿಯಲ್ಲಿ ಅವರು ಸಂಪಾದಿಸಿದ ಲೋಕಾನುಭವ ಅಪಾರವಾದದ್ದು ಈ ಲೋಕಾನುಭವದ ಸಾರ್ವತ್ರಿಕ ಸಂದೇಶ 'ತಾಳುವಿಕೆಗಿಂತ ತಪವು ಇಲ್ಲ' ಎಂಬ ಕೃತಿಯಲ್ಲಿ ಮಡುಗಟ್ಟಿದೆ. ತಾಳುವಿಕೆಗಿಂತ ತಪವು ಇಲ್ಲ ಎಂದು ತಾಳ್ಮೆಯ ಹಿರಿಮೆಯನ್ನು ನಿರೂಪಿಸಿದ್ದಾರೆ.

**ದುಷ್ಟ ಮನುಜರು ಪೇಳ್ವ ನಿಷ್ಠುರದ ನುಡಿ ತಾಳು**
**ಕಷ್ಟ ಬಂದರೆ ತಾಳು ಕಂಗೆಡದೆ ತಾಳು**
**ನೆಟ್ಟುಸಸಿ ಫಲ ಬರುವತನಕ ಶಾಂತಿಯ ತಾಳು**
**ಕಟ್ಟುಬುತ್ತಿಯು ಮುಂದೆ ಉಣಲುಂಟು ತಾಳು**[೫೮]

ಇಲ್ಲಿ ಒಂದೊಂದು ಹೇಳಿಕೆಯೂ ಬದುಕಿನ ಆಳದಿಂದ ಬಂದ ಅನುಭವಾಮೃತವಾಗಿದೆ. ಇದೇ ರೀತಿಯಲ್ಲಿ ಪ್ರಾಸಂಗಿಕವಾಗಿ ಪ್ರಯೋಗವಾದ ಅನೇಕ ಸೂಕ್ತಿಸದೃಶ ವಾಕ್ಯಗಳನ್ನು ಗಮನಿಸಬಹುದು.

೧. ಕಂಬಳಿಯ ಬುತ್ತಿಯಂತೀ ದೇಹದೊಳಗೆ ಸುಖವೆಂಬುದಿಲ್ಲವು ದುಃಖಭರಿತ[೫೯]
೨. ನಾಯಿಯ ಬಾಲಕೆ ನಾರಾಯಣ ತೈಲ
ಏಸು ಬಾರಿ ತೀಡಿದರೆ ನೀಟಾಗುವುದೋ[೬೦]
೩. ದಿಲ್ಲಿರಾಯನ ಕಂಡು ಪುಲ್ಲಿಗೆಯ ಬೇಡುವರೆ[೬೧]
೪. ತಾಯಮಾರಿ ತೊತ್ತುಕೊಂಬ ಪಾಮರನಂತೆ[೬೨]
೫. ಮಾರಿ ಹಬ್ಬದ ಕುರಿಯು ತೋರಣವ ಮೆಲುವಂತೆ[೬೩]
೬. ಉಂಡು ಸುಳಿ ಅಲ್ಲ; ಉಟ್ಟು ತೊಟ್ಟು ಪರಿಣಾಮ ಇಲ್ಲ[೬೪]
೭. ತಾಳುವಿಕೆಗಿಂತ ತಪವು ಇಲ್ಲ[೬೫]

೮. ನಕ್ಕು ನುಡಿವರ ಮುಂದೆ ಮುಕ್ಕರಿಸದೆ ತಾಳು[೬೬]
೯. ಉಣಹೋಗಿ ಬಾಯ ಮರೆತಂತಾಯಿತಲ್ಲ[೬೭]
೧೦. ಗರುಡ ಸರ್ಪನ ಸ್ನೇಹದಂತಾಯಿತಲ್ಲ[೬೮]

ವಾದಿರಾಜರು ತ್ರಿಪದಿ, ಷಟ್ಪದಿ, ಸಾಂಗತ್ಯ, ಏಳೆ ಮೊದಲಾದ ಜಾನಪದ ಲಯಗಳ ಮೂಲಕ ಹಾಡನ್ನು ಜನರ ಹತ್ತಿರ ತರಲು ಪ್ರಯತ್ನಿಸಿದರು. ಹಾಡು ಬರಿಯ ರಂಜನೆಯಾಗದೆ ಬೋಧಪ್ರದವೂ ಆಗಲೆಂದು ಹಾಡಿನ ಲಯದಲ್ಲಿ ತತ್ವವನ್ನು ಬೆರೆಸಿದರು. ಕಥನ ಕಲೆಯನ್ನು ಪರಿಚಯಿಸಿದರು. ಶ್ರೀಪಾದರಾಜರು, ವ್ಯಾಸರಾಜರ ಕೃತಿಗಳಂತೆಯೇ ವಾದಿರಾಜರ ಕೃತಿಗಳು ಪ್ರೌಢ, ಅರ್ಥಗರ್ಭಿತ ಮತ್ತು ಶಾಸ್ತ್ರಸಂಪನ್ನವಾದವು. ಆತ್ಮಶೋಧನೆ, ಪಶ್ಚಾತ್ತಾಪ, ನವವಿಧ ಭಕ್ತಿಗಳ ಪ್ರತಿಪಾದನೆ, ದಾಸ್ಯ, ಸಖ್ಯ, ಮಧುರ, ವಾತ್ಸಲ್ಯ, ಶಾಂತಭಾವಗಳು, ಹರಿನಾಮದ ಹಿರಿಮೆ, ಹರಿದಾಸರ ಹಿರಿಮೆ, ಅವತಾರತ್ರಯಗಳಲ್ಲಿ ನಂಬಿಕೆ, ದಶಾವತಾರಸ್ತುತಿ, ತೀರ್ಥಕ್ಷೇತ್ರಸ್ತುತಿ, ವೈರಾಗ್ಯ, ದರ್ಶನ, ಲೋಕನೀತಿ – ಹೀಗೆ ವಾದಿರಾಜರ ಕೃತಿಗಳು ವಿಶಾಲ ಹರಹನ್ನು ಪಡೆದಿವೆ.

ವಿಜಯೀಂದ್ರತೀರ್ಥರು ತಮ್ಮ ಗುರುಗಳಾದ ವ್ಯಾಸರಾಜರಂತೆ ಕನ್ನಡ ಮತ್ತು ಸಂಸ್ಕೃತ ಎರಡೂ ಭಾಷೆಗಳಲ್ಲಿ ಪಾಂಡಿತ್ಯವನ್ನು ಹೊಂದಿದ್ದರು. ಇವರು ರಚಿಸಿರುವ ಎರಡು ಕೀರ್ತನೆ, ಎರಡು ಸುಳಾದಿ ಒಂದು ಉಗಾಭೋಗ ಮಾತ್ರ ದೊರತಿದೆ. 'ಯೋಗಿ ವ್ಯಾಸರಾಯರೆಂಬ ವಿಚಿತ್ರ ಮೇಘ' ಎಂಬ ಕೀರ್ತನೆಯಲ್ಲಿ ತಮ್ಮ ಗುರುಗಳಾದ ವ್ಯಾಸರಾಯರನ್ನು ವಿಚಿತ್ರ ಮೇಘಕ್ಕೆ ಹೋಲಿಸಿರುವಲ್ಲಿ ಅವರ ಚಿತ್ರಕ ಶಕ್ತಿಯನ್ನು ಕಾಣಬಹುದು. ವ್ಯಾಸರಾಜರೆಂಬ ವಿಚಿತ್ರ ಮೇಘದ ಆಗಮನದಿಂದ ಆದ ಲೋಕೋಪಕಾರವನ್ನು ಇಲ್ಲಿ ಸ್ಮರಿಸಿದ್ದಾರೆ. "ಹರಿದಾಸ ಪಂಥವನ್ನು ಪೋಷಿಸಿದ ಮಠಾಧಿಪತಿಗಳಲ್ಲಿ ವಿಜಯೀಂದ್ರರೂ ಒಬ್ಬರು. ಅವರಿಂದ ರಚಿತವಾಗಿರಬಹುದಾದ ಕನ್ನಡ ಕೃತಿಗಳ ಶೋಧನೆಯಾದರೆ ಹರಿದಾಸ ಸಾಹಿತ್ಯಕ್ಕೆ ಇವರು ನೀಡಿದ ಕೊಡುಗೆಯನ್ನು ವಿಶ್ಲೇಷಿಸಬಹುದು".[೬೯]

ಐಜಿ ಆಚಾರ್ಯರೆಂದೇ ಪ್ರಸಿದ್ಧರಾಗಿದ್ದ ವ್ಯಾಸತತ್ವಜ್ಞರು ಯತ್ಯಾಶ್ರಮ ಸ್ವೀಕರಿಸಿದ್ದು ಅವರ ಎಪ್ಪತ್ತೆಂಟನೆಯ ವಯಸ್ಸಿನಲ್ಲಿ ಆ ವೇಳೆಗೆ ಅವರು 'ಏಳಲಾರೆನು ವೃದ್ಧ ಏಳಲಾರೆ' ಎಂಬ ಪರಿಸ್ಥಿತಿಯನ್ನು ತಲುಪಿದ್ದರು. ಯತ್ಯಾಶ್ರಮಕ್ಕೆ ಪೂರ್ವದಲ್ಲಿಯೇ ಹರಿದಾಸರಾಗಿದ್ದ ಇವರು ಸುಮಾರು ತೊಂಭತ್ತು ಕೀರ್ತನೆ, ಸುಳಾದಿ ಮತ್ತು ಉಗಾಭೋಗಗಳನ್ನು ರಚಿಸಿದ್ದಾರೆ. ಎಲ್ಲಾ ಹರಿದಾಸರಂತೆ ಇವರ ಕೃತಿಗಳಲ್ಲೂ ಆತ್ಮನಿವೇದನೆಯನ್ನು ಕಾಣಬಹುದು.

ಅನಂತಾನಂತ ಪಾಪ ಮಾಡುವೆ ನಾನು          ಪ

ಅನಂತದಯಾನಿಧೆ ನೀನೋ ಹಯವದನ[೭೦]          ಅ.ಪ

**ಅಪರಾಧ ಎನ್ನದಯ್ಯ ಅಪರಿಮಿತವೆ ಸರಿ** **ಪ**

**ಕೃಪಣ ವತ್ಸಲ ಕೃಷ್ಣ ಕೃಪೆಯ ಮಾಡುವುದಿಲ್ಲವ್ಕೆ** **ಅ.ಪ**

**ಹುಡುಗರು ಮಾಡುವ ತಪ್ಪಿಗೆ ಜನನಿ ತಾ**
**ಬಿಡುವಳೇ ಅದರಿಂದ ದಯವ ಮಾಡದಲೆ**
**ನಡೆವ ಕುದುರಿ ತಾನು ಮಲಗಿದಡೆ ಇನ್ನು**
**ಕಡೆಗೆ ಕಟ್ಟುವರೇನೊ ತಿರುಗಿ ನೋಡದಲೆ**

**ಎನ್ನ ಅಪರಾಧಂಗಳೆಣಿಸೆಂದರೆ ಅದರ**
**ಕೊನೆಯಿಲ್ಲ ಮೊದಲಿಲ್ಲ ಹುರುಳಿಲ್ಲವೋ**

ಹೀಗೆ ಜೀವನದಲ್ಲಿ ತಿಳಿಯದೆ ಮಾಡುವ ಅನೇಕ ತಪ್ಪುಗಳನ್ನು ನಿಸ್ಸಂಕೋಚವಾಗಿ ಒಪ್ಪಿಕೊಳ್ಳುವ ಉದಾರ ಮನೋಭಾವ ಹರಿದಾಸರದು. ತಮ್ಮಿಂದ ಏನೇ ತಪ್ಪುಗಳಾದರೂ ಅದನ್ನು ತಿದ್ದಿ ಸನ್ಮಾರ್ಗದಲ್ಲಿ ನಡೆಸುವವನು ಅನಂತದಯಾನಿಧಿಯಾದ ಭಗವಂತನೊಬ್ಬನೇ ಎಂಬುದು ಅವರ ಅಚಲವಾದ ನಿಲುವು. ಭಗವಂತನ ಒಲುಮೆಗಾಗಿ ಒಂದು ಸುಳಾದಿಯಲ್ಲಿ ಅವರು ಮೊರೆಹೋಗಿರುವ ರೀತಿ ಅನನ್ಯವಾದುದು.

**ತನ್ನ ಶಿಶುವನ್ನು ತಪ್ಪು ಹೆಜ್ಜೆಗಳಿಡೆ**
**ಜನರು ನಗುವರೊ ಕೈಗಳ ಹೊಡೆದು**
**ಜನನಿಯು ತಾ ಕಂಡು ಚಿನ್ನರು ಹೋ ಎಂದು**
**ಬಣ್ಣಿಸಿ ತನಯನ ಉಣ್ಣಿಸಿ ನಡಿಸುವಳೋ**
**ಘನ್ನ ವಾಸುದೇವವಿಟ್ಠಲರೇಯ**
**ಎನ್ನ ಮನದ ನಡತಿಯನು ನೀನೆ ತಿದ್ದಲಿ ಬೇಕು**

ಕೆಲವೊಮ್ಮೆ ಜೀವನದಲ್ಲಿ ಕಹಿ ಅನುಭವಗಳನುಂಡು ದಾರಿಕಾಣದೆ ಆತಂಕ ಉಂಟಾದಾಗ ಭಕ್ತ ಹತಾಶ ಸ್ಥಿತಿಯನ್ನು ತಲುಪುತ್ತಾನೆ. ಅಂತಹ ಸಂದರ್ಭದಲ್ಲಿ ಪಾರು ಮಾಡಬಲ್ಲವನು ವಾಸುದೇವವಿಠಲನೊಬ್ಬನೇ ಎಂಬ ಅವರ ದೃಢವಾದ ನಿಲುವನ್ನು ಒಂದು ಸುಳಾದಿಯಲ್ಲಿ ಈ ರೀತಿ ಚಿತ್ರಿಸಿದ್ದಾರೆ.

**ಆರಿಗೆ ಉಸುರಲಿ ಆರಿಗೆ ಮೊರೆಯಿಡಲಿ**
**ಆರೆನ್ನ ಮನದಳಲು ನಿವಾರಿಸುವವರ ಕಾಣೆ**

**ಮೇರೆ ಇಲ್ಲದೆ ಪೋದ ವಿಷಯ ಶೆಳವುತಿದೆ**
**ಬಾರೊಮ್ಮೆ ಮುಂದಣಶಾ ತೋರಿ ಎಳವುತಿದೆ**
**ತೋರಿ ನೀ ತೋರಿಸು ತೋರದೆ ಪೋದರೆ ಎನ್ನ ಎದೆ ಮನ**
**ಹಾರಿ ಬೀಳುತಲಿದೆ ಗತಿ ಏನೋ ಎಲೊ ಕೃಷ್ಣ**

**ಸಾರಿ ಸಾರಿಗೆ ಇದನೆ ಬೇಡುವೆನೇ ಅನ್ಯನ್ನ**
**ದಾರಿ ತಪ್ಪಿಸಿ ನಿನ್ನ ದಾರಿಯ ಪಿಡಿಸೆನ್ನ**
**ಕಾರುಣಿಕ ರಂಗ ಮೊರೆಯೊಕ್ಕ ಭಕತನ್ನ**
**ಮಾರಿಗೆ ಒಪ್ಪಿಸದೆ ಸಾರೆ ಗರಿಯೋ ದೇವ**
**ವಾರಿಜಾಕ್ಷ ವಾಸುದೇವ ವಿಠಲರೇಯ**

ಹೀಗೆ ಸರ್ವಾಪರಾಧಗಳಿಗೂ ಶರಣಾಗುವುದೊಂದೇ ಸರಿಯಾದ ದಾರಿಯೆಂದು ಅಹಂಕಾರವನ್ನು ಬಿಟ್ಟು, ಕ್ಷಮೆಯಾಚಿಸಿ, ನಿರ್ಮಲವಾದ ಮನಸ್ಸಿನಿಂದ ಭಗವಂತನಲ್ಲಿ ಮೊರೆ ಹೋಗುತ್ತಾರೆ. ನಮ್ಮನ್ನು ಪೊರೆಯುವ ದೈವ ವಾಸುದೇವ ವಿಠಲನೊಬ್ಬನೇ ಎಂಬುದು ಅವರ ದೃಢವಾದ ನಿಲುವು. ಹಾಗಾಗಿ ಅವರು ಬಯಸುವುದು 'ವಾಸುದೇವ ವಿಠಲನ ಒಲಮೆ'ಯೊಂದನ್ನು ಮಾತ್ರ

**ನಿನ್ನ ಮರಹೆ ಮೃತ್ಯು ನೆನಹೆ ಜೀವ**
**ಧನ್ಯರಿಗೆ ಇದೆ ತತ್ವ ವಾಸುದೇವ ವಿಠಲ**[೭೨]

ಎಂಬುದು ಅವರ ಆಧ್ಯಾತ್ಮಿಕ ನಿಲುವು.

"ವಿಜಯದಾಸರು, ಗೋಪಾಲದಾಸರು ಮತ್ತು ಜಗನ್ನಾಥದಾಸರ ಕೃತಿಗಳಲ್ಲಿ ಅಪರೂಪಕ್ಕೂ ಸಿಗದ ಮಧುರ ಭಕ್ತಿಯ ಕೃತಿಗಳು ವಾಸುದೇವವಿಠಲರ ಕೃತಿಗಳಲ್ಲಿ ದೊರೆಯುವುದು ಒಂದು ವೈಶಿಷ್ಟ್ಯ."[೭೩] ಶ್ರೀಪಾದರಾಜರ ವೇಣುಗೀತೆ, ಭ್ರಮರಗೀತೆಗಳಿಂದ ಪ್ರಭಾವಿತರಾದ ಇವರು ಗೋಪಿಕಾ ಸ್ತ್ರೀಯರ ಮತ್ತು ಶ್ರೀಕೃಷ್ಣನ ಮಧುರ ಬಾಂಧವ್ಯವನ್ನು ಕನ್ನಡದಲ್ಲಿ ನಿರೂಪಿಸಿದ್ದಾರೆ. ತಮ್ಮನ್ನೇ ಒಬ್ಬ ಗೋಪಿಯಾಗಿ ಕಲ್ಪಿಸಿಕೊಂಡು, ಶ್ರೀಕೃಷ್ಣನ ಅಗಲಿಕೆಯಿಂದ ಅನುಭವಿಸುವ ವಿರಹವೇದನೆ ಹಾಗೂ ಅವನ ದರ್ಶನಕ್ಕಾಗಿ ಹಂಬಲಿಸುವುದನ್ನು ಮನೋಜ್ಞವಾಗಿ ಚಿತ್ರಿಸಿದ್ದಾರೆ.

**ಬಾರೋ ಬಾರೋ ಬಾರೋ ಹರಿ**
**ತೋರೋ ತೋರೋ ಮುಖವ ದೊರಿ** ಪ

**ಧೀರನೆ ಬಹುಗಂಭೀರನೆ ಗೋರಸ**
**ಚೋರನೆ ಗೋಪಿ ಜಾರನೆ ಬ್ಯಾಗನೆ**
**ವೀರಾಧಿವೀರನೆ ಎನ್ನ ವಾರೆ ನೋಟ ನೋಡುವರೆ**
**ಗಾರು ಮಾಡದಲೆ ಮನ ಸೇರಿ ಸುಖಬಡಿಸಲು** ಅಪ
**ಭೃಂಗಗಳ್ಯಾತಕೆ ಕೂಗದವೊ ಅಂಗಜ ಶರಗಳು ಸೇರಿದವೊ**
**ರಂಗನೆ ಗರುಡ ತುರಂಗನೆ ವಿಧೃತ ರಥಾಂಗನೆ ಸಜ್ಜನ ಸಂಗನೆ ಬ್ಯಾಗನೆ**
**..................................................................................**[೭೪]

ಕೃಷ್ಣನ ಆತ್ಮೀಯ ಗೆಳೆಯನಾದ ಉದ್ಧವ ಮಧುರೆಯಿಂದ ಮರಳಿ ಬಂದಾಗ ಅವನನ್ನು ಕಂಡ

ಗೋಪಿಯೊಬ್ಬಳಿಗೆ ಕೃಷ್ಣನನ್ನೇ ನೋಡಿದ ಅನುಭವವಾಯಿತಂತೆ ಅದನ್ನು ಒಂದು ಸುಳಾದಿಯಲ್ಲಿ ಸುಂದರವಾಗಿ ನಿರೂಪಿಸಿದ್ದಾರೆ.

ಎನ್ನಯ ನಾಯಕಿಯ ಸ್ವಾಮಿಯ ಕಂಡಂತೆ
ನಿನ್ನ ನೋಡಲಾಯಿತೊ ಪ್ರಾಣಪ್ರಿಯ ದೂತನೆ
ಚನ್ನಾಗಿ ನೋಡೋ ಇವಳ ಪರಿಯನ್ನು
ಬಿನ್ನಪ ಮಾಡುವೆ ಅಪರಾಧಗಳ
ನಿನ್ನಂತ ಘಟಕರ ಇನ್ನೊಬ್ಬರ ಕಾಣೆ
ಮನವಿಟ್ಟು ನೀವೆನೆ ವಾಸುದೇವವಿಠಲಂಗೆ
ಬಿನ್ನೈಸಿ ಕೊಡಿಸೊ ಘನ್ನ ದಯಾನಿಧೆ
..........................................................

ಧವಬಿಟ್ಟ ವಿರಹದ ಭವಣೆಯಿಂದ ಅವಳಿಗೆ
ನವಗಂಧಗಳೆ ಬಂಧ ಸುವಸ್ತ್ರವೇ ಶಸ್ತ್ರ
ಭವನವೆಂಬೊಂದೆ ಬಲು ಕುವನವಾಗಿವಳಿಗೆ
ನವಚೂತ ಪಲ್ಲವ ಸವಿಧಾವಿ ಪಲ್ಲವ
ವಿವಿಧ ತಾಪಗಳನುಭವಿಸುವ ಇವಳನ್ನು
ಭುವನೇಶ ಶ್ರೀ ವಾಸುದೇವವಿಠಲ ಪಾದ
ಸುವಿಯಲತರ ನಖಶಿಶಿ ಛವಿಯಿಂದ ಪಾಲಿಸೊ
ಪ್ರವಣ ನಾ ಮರಿಯೆನೊ ಭುವನದೊಳಗೆ ನಿನ್ನ[೭೮]

ಈ ರೀತಿ ಕೃಷ್ಣನ ಅಗಲಿಕೆಯಿಂದ ಜೀವನೋತ್ಸಾಹವನ್ನೇ 'ಕಳೆದುಕೊಂಡು ಮನಕರಗುವಂತೆ ಪರಿತಪಿಸುತ್ತಿದ್ದಾಳೆ. ಮತ್ತೊಬ್ಬ ಗೋಪಿಯು ಕೃಷ್ಣನ ಉದಾರ ಅಂತರಂಗವನ್ನು ಹೀಗೆ ವರ್ಣಿಸಿದ್ದಾಳೆ.

ಗುಣವ್ಯಾಕೆ ರೂಪವ್ಯಾಕೆ ದೋಷಗಳಿರಲ್ಯಾಕೆ
ಮನಮೆಚ್ಚಿಗೆಯೊಂದೆ ಆತಂಗೆ ಮುಖ್ಯ
ಅನುಮಾನಿಸಬೇಡ ಆತನ್ನ ಮೊರೆಹೋಗು
ಮನದಾಶೆ ನೀಡುವ ವಾಸುದೇವ–ವಿಠಲ[೭೯]

"ಈ ಮಾತುಗಳು ಹೆಣ್ಣೊಬ್ಬಳು ಮತ್ತೊಬ್ಬ ಹೆಣ್ಣಿಗೆ ಹೇಳುವ ಹಿತೋಕ್ತಿಗಳಂತೆ ಕಂಡರೂ ಅಪರೋಕ್ಷ ಜ್ಞಾನಕ್ಕಾಗಿ ಹಂಬಲಿಸುವ ಜೀವಾತ್ಮನಿಗೆ ಹೇಳಿದ ಉಪದೇಶಾತ್ಮಕ ಹಿತೋಕ್ತಿಗಳಾಗಿವೆ."[೮೦]

ವಾಸುದೇವ ವಿಠಲರ ಕೃತಿಗಳ ಒಟ್ಟು ಸಂದೇಶವೆಂದರೆ ಭಕ್ತಿ, ನೀತಿ ಮತ್ತು ವೈರಾಗ್ಯಗಳು ಸಂಸಾರದಿಂದ ದೂರವಾದದ್ದಲ್ಲ. ಸಂಸಾರದಲ್ಲಿದ್ದು ಮಾನವ ಜನ್ಮ ದೊಡ್ಡದು ಎಂಬ

ಹಿರಿಮೆಯನ್ನು ಒಪ್ಪಿಕೊಂಡು ಜ್ಞಾನ, ಭಕ್ತಿ, ವೈರಾಗ್ಯಗಳನ್ನು ಹೊಂದುವುದರೊಂದಿಗೆ ಜೀವನವನ್ನು ಹಸನುಗೊಳಿಸುವ ಬಯಕೆ ಅವರದು.

**ವ್ಯಾಳೆ ಬಂದಾಗ ಬಿಡದೆ ಸಾಧಿಸದವನಾ**
**ಬಾಳುವೆ ಬೋಳೆ ಅದು ಗೋಳಲ್ಲವೆ**
**ಗಾಳಿ ಬಂದಾ ಕೈಯಲೆ ತೂರಿಕೊಳ್ಳಿರೊ**
**ಮೇಲೆ ತನ್ನ ವಶವೇನೋ ದೇಶಕಾಲಗಳು**[೩೦]

ಹೀಗೆ ಜೀವನವನ್ನು ಎದುರಿಸಬೇಕೆನ್ನುತ್ತಾರೆ. 'ಕಲಿಯುಗ ಒದಗಿತಲ್ಲ, ವಿಷಯದಿ ಚಲಿಸಿತು ಮನವೆಲ್ಲ, ಇಳೆಯೊಳು ಹಿರಿಯರಿಲ್ಲ, ನೆರೆ ಜನ ಖಳರು ಸಜ್ಜನರಲ್ಲ'[೩೧] ಇದು ಪ್ರತಿಯೊಬ್ಬರ ಕಣ್ಣಮುಂದಿರುವ ವಾಸ್ತವ ಸತ್ಯ. ಹಾಗೆಂದು ಜೀವನೋತ್ಸಾಹ ಕಳೆದುಕೊಂಡು, ಬೇಸರಪಟ್ಟುಕೊಳ್ಳಬೇಕಿಲ್ಲ 'ಮೋಸ ಹೋಗದ ಹಾಗೆ, ಹರಿಪದ ದಾಸ್ಯವ ಬಿಡದ ಹಾಗೆ, ವಾಸುದೇವ ವಿಠಲನ ಕರುಣದಿ' ಬದುಕಬೇಕೆಂಬುದು ಇವರ ಸಂದೇಶ.

ಹೀಗೆ ವಾಸುದೇವ ವಿಠಲರು ತಮ್ಮ ಕೃತಿಗಳಲ್ಲಿ ಆತ್ಮಶೋಧನೆ, ಭಕ್ತಿ, ನೀತಿ, ತತ್ವಗಳನ್ನು ನಿರೂಪಿಸುವಲ್ಲಿ ಹರಿದಾಸರ ಹಾದಿಯಲ್ಲೇ ನಡೆದಿದ್ದಾರೆ. ಇತರ ಹರಿದಾಸರ ಕೃತಿಗಳಿಗಿಂತ ಗಾಂಭೀರ್ಯ ಮತ್ತು ಪ್ರೌಢಿಮೆಯಲ್ಲಿ ಭಿನ್ನವಾಗಿರುವ ಇವರ ಕೃತಿಗಳಲ್ಲಿ ಮಧುರ ಭಾವ ವಿಶೇಷವಾಗಿ ನಿರೂಪಿತವಾಗಿದೆ. "ಎಲ್ಲವೂ ದೈವಾಧೀನ, ಹರಿಚಿತ್ತ ಎಂದು ಭಾವಿಸಿ, ಪುರುಷ ಪ್ರಯತ್ನಕ್ಕೆ ಗೌರವ ಕೊಡದಿರುವ ಅಭಾವ ವೈರಾಗ್ಯವನ್ನು ಹೇಳದೆ ಸಾಧನೆಯ ಜೀವನ ವಿಧಾನಕ್ಕೆ ಒತ್ತು ಕೊಟ್ಟಿರುವುದು ವಾಸುದೇವವಿಠಲರ ವೈಶಿಷ್ಟ್ಯ"[೩೨]

ಹರಿದಾಸ ಸಾಹಿತ್ಯವನ್ನು ಶ್ರೀಮಂತಗೊಳಿಸಿದ ಪ್ರಮುಖ ಯತಿಗಳಲ್ಲಿ ಶ್ರೀವಿದ್ಯಾಪ್ರಸನ್ನತೀರ್ಥರೂ ಒಬ್ಬರು. ವಾದಿರಾಜರನ್ನು ಬಿಟ್ಟರೆ ಹೆಚ್ಚಿನ ಸಂಖ್ಯೆಯ ಕೀರ್ತನೆಗಳನ್ನು ರಚಿಸಿದ ಕೀರ್ತಿ ವಿದ್ಯಾಪ್ರಸನ್ನತೀರ್ಥರಿಗೆ ಸಲ್ಲುತ್ತದೆ. ವ್ಯಾಸರಾಜರ ನಂತರ ಬಂದ ಯತಿಗಳಲ್ಲಿ ಕನ್ನಡ ಪ್ರೇಮ ಕಡಿಮೆಯಾಗುತ್ತಾ ಬಂದು ಅವರ ದೃಷ್ಟಿ ಶಾಸ್ತ್ರಾಧ್ಯಯನ ಮತ್ತು ಸಂಸ್ಕೃತ ಪಾಂಡಿತ್ಯಕ್ಕೆ ಮಾತ್ರ ಮೀಸಲಾಯಿತು. "ವಿದ್ಯಾಕಾಂತ ತೀರ್ಥರು ಮತ್ತು ವಿದ್ಯಾರತ್ನಾಕರತೀರ್ಥರು ಪುನರಾರಂಭಿಸಿದ ಕನ್ನಡ ಕೀರ್ತನೆಗಳ ರಚನೆ ವಿದ್ಯಾಪ್ರಸನ್ನತೀರ್ಥರಿಂದ ವಿಶಾಲ ಹರಹನ್ನು ಪಡೆದುಕೊಂಡಿತು".[೩೩] ವಿದ್ಯಾಪ್ರಸನ್ನತೀರ್ಥರು ಸುಮಾರು ಮುನ್ನೂರು ಕೀರ್ತನೆಗಳನ್ನು ರಚಿಸಿದ್ದಾರೆ. ಅದರಲ್ಲಿ ನೂರಕ್ಕೂ ಹೆಚ್ಚಿನ ಕೀರ್ತನೆಗಳು ಕೃಷ್ಣನ ಲೀಲೆಗಳನ್ನು ಕುರಿತದ್ದು. ಇವುಗಳಲ್ಲಿ ಸಖ್ಯ, ವಾತ್ಸಲ್ಯ ಮತ್ತು ಮಧುರ ಭಾವದ ಕೃತಿಗಳನ್ನು ಮನೋಜ್ಞವಾಗಿ ಚಿತ್ರಿಸಿದ್ದಾರೆ. ಶ್ರೀಪಾದರಾಜ, ವ್ಯಾಸರಾಜ ಯತಿಗಳಂತೆ ಇವರೂ ಸಹ ನಿರಂತರ ಭಾಗವತ ಅಧ್ಯಯನದ ಪ್ರಭಾವದಿಂದ ಇವರ ಮನಸ್ಸಿನಲ್ಲಿ ಬೇರೂರಿದ್ದ ಕೃಷ್ಣಕಥೆ ಬಿಡಿ–ಬಿಡಿಯಾಗಿ ಕೀರ್ತನೆಯ ರೂಪದಲ್ಲಿ ಹೊರಹೊಮ್ಮಿದೆ. ಅಲ್ಲದೆ ಆತ್ಮಶೋಧನೆ, ತತ್ವ, ಲೋಕನೀತಿಗಳನ್ನು ಕುರಿತಂತೆ ದೀರ್ಘಕೃತಿಗಳು ಹಾಗೂ ಮುಕ್ತಕಗಳನ್ನು ರಚಿಸಿದ್ದಾರೆ.

ಅಪಾರವಾದ ಲೋಕಾನುಭವದ ಹಾಗೂ ಉನ್ನತ ನೆಲೆಯ ಚಿಂತನೆಯನ್ನು ಒಳಗೊಂಡ ಕೃತಿಗಳು ಇವು.

ವಿದ್ಯಾಪ್ರಸನ್ನ ತೀರ್ಥರು ಯತ್ಯಾಶ್ರಮವನ್ನು ಸ್ವೀಕರಿಸುವುದಕ್ಕೆ ಮೊದಲು ಲೌಕಿಕ ಜೀವನದಲ್ಲಿ ವಕೀಲ ವೃತ್ತಿಯನ್ನು ಮಾಡುತ್ತಾ ಸಂಸಾರಿಗಳಾಗಿದ್ದವರು. ಕನ್ನಡ, ಸಂಸ್ಕೃತ, ಆಂಗ್ಲ ಭಾಷೆಯ ಜ್ಞಾನವನ್ನು ಹೊಂದಿದ್ದ ಇವರು ಪ್ರಸಿದ್ಧ ವಕೀಲರಾಗಿ ಅಪಾರವಾದ ಲೋಕಾನುಭವವನ್ನು ಹೊಂದಿದ್ದರು. ಇವರು ಬಯಸಿದ್ದು ಶಾಸನ ಸಭೆಯ ಅಧಿಕಾರವನ್ನು, ಆದರೆ ಇವರಿಗೆ ದೊರೆತದ್ದು ಹರಿಶಾಸನ ಸಭೆಯ ಅಧಿಕಾರ. ಮನುಷ್ಯ ಬಯಸಿದಂತೆ ಅಧಿಕಾರಗಳು ಲಭಿಸುವುದಿಲ್ಲ. ಎಲ್ಲವೂ ಹರಿಚಿತ್ತದಂತೆಯೇ ನಡೆಯುತ್ತದೆ. 'ಅಧಿಕಾರಿಯಾಗಬೇಕು ಅದಕ್ಕಾಗಿ ದುಡಿಯಬೇಕು ಈ ಅಧಿಕಾರ ಶಾಶ್ವತವಿರಬೇಕು ಅದನೀಶ್ವರ ಕೊಡಬೇಕು ಎನ್ನುತ್ತಾರೆ'[೮೪] ಲೌಕಿಕ ಬದುಕನ್ನು ತ್ಯಜಿಸಿ ಅನಿರೀಕ್ಷಿತವಾಗಿ ಯತ್ಯಾಶ್ರಮವನ್ನು ಸ್ವೀಕರಿಸಿದ ಮೇಲೆ ಅವರ ಜೀವನದಲ್ಲಾದ ಪರಿವರ್ತನೆಯನ್ನು ಈ ರೀತಿ ನಿರೂಪಿಸಿದ್ದಾರೆ.

**ಸಿಕ್ಕಿತು ಕಾಂತಿ ಹೊಕ್ಕಿತು ಶಾಂತಿ**
**ಭಕ್ತ ಪ್ರಸನ್ನನು ಬಿಡಿಸಿದ ಭ್ರಾಂತಿ**[೮೫]

**ನಿಟ್ಟುಸಿರು ಬಿಡಿಸಿದೆಯೊ ಹೊಟ್ಟೆಯನು ಸುಡಿಸಿದೆಯೊ**
**ಕಟ್ಟಕಡೆಯಲಿ ಕರವನಿತ್ತು ಮೇಲೆತ್ತಿದೆಯೊ**
**..............................................................**
**ಕೆಸರಲಿ ಕಂಬದಂತಿದ್ದ ಎನ್ನಯ ಸ್ಥಿತಿಯು**
**ಕುಸಿಯಲಿಲ್ಲವೋ ದೇವ ಶಶಿಕುಲ ಪ್ರಸನ್ನ**[೮೬]

**ಹೊಸದಾದ ಚೈತನ್ಯವೆನಗೆ ವಿಕಸಿತವಾಯ್ತು**
**ಉಸಿರಿರುವ ತನಕ ನಾ ಮರೆವುದಿಲ್ಲವೊ ನಿನ್ನ**[೮೭]

ಮನುಷ್ಯನ ಸಾಧನೆಗಳಲ್ಲೆಲ್ಲಾ ಒಂದು ಚೌಕಟ್ಟಿಗೆ ಒಳಪಟ್ಟಿದೆ. 'ಕೆರೆಯನು ದಾಟಲು ಅರಿಯದ ಜನ ಭವ ಶರಧಿಯ ದಾಟುವರೇ ಶ್ರೀನರಹರಿ'[೮೮] ಎಂದಿರುವ ಅವರು 'ಮನವ ಶೋಧಿಸದೆಲೆ ಡಂಭದಿ ದಿನದಿನದಲಿ ಕರ್ಮಮಾಡೆ ತನುವಿಗೆ ಬಲು ಕ್ಲೇಶವಲ್ಲದೆ ಅನುಕೂಲವೇನು ಎಂದು ಪ್ರಶ್ನಿಸುತ್ತಾ[೮೯] ಸಂಸಾರದಲ್ಲಿ ಹೇಗೆ ಇದ್ದು ಇಲ್ಲದಂತಿರಬೇಕು ಎಮಬುದನ್ನು ಒಂದು ಸೂತ್ರ ರೂಪದಲ್ಲಿ ಹೇಳಿದ್ದಾರೆ. 'ತಗುಲಿ ತಗಲದೆಲೆ ಈ ಜಗದೊಳು ಜೀವಿಸೊ ಕಮಲ ಪತ್ರದಲ್ಲಿಹ ಜಲದ ಕಣಗಳಂತೆ,[೯೦] ಎಂದಿದ್ದರೆ ಮತ್ತೊಂದು ಕೀರ್ತನೆಯಲ್ಲಿ 'ತ್ಯಜಿಸದೆಲೆ ಸಂಸಾರ ಭಜಿಸಬಹುದು ಅಜಭವಾದಿಗಳೆಲ್ಲ ತ್ಯಜಿಸಿ ಭಜಿಸುವುರೆ'[೯೧] ಎಂದಿದ್ದಾರೆ. ಒಂದು ಕೀರ್ತನೆಯಲ್ಲಿ 'ಭಯವುಂಟೆ ಹರಿಯ ಭಕುತರಿಗೆ, ತತ್ವಗಳರಿಯುತ ಕೃತ್ಯವ ಮಾಡುವ ಸಾತ್ವಿಕರಾಗಿರುವ ಸುಜನಿರಗೆ,[೯೨] ಎಂದಿದ್ದರೆ ಮತ್ತೊಂದು ಕೀರ್ತನೆಯಲ್ಲಿ 'ಎಲ್ಲ ಭಯ ಎಲ್ಲ ಭಯ ಕ್ಷುಲ್ಲಕ

ಜನಗಳಿಗೆಲ್ಲ ಭಯ, ತಲ್ಲಣಿಸದೆ ಸಿರಿವಲ್ಲಭನಲಿ ಮನ ನಿಲ್ಲಿಸುವರಿಗೆಲ್ಲ ಜಯ'[೯೩] ಎಂದಿದ್ದಾರೆ. ಹಾಗೆಯೇ 'ಜಲಜನಾಭನ ಪೂಜೆ ಅತಿಸುಲಭವು'[೯೪] ಎನ್ನುತ್ತಾ ನವರತ್ನ ಮಂಟಪ, ಹವಳದಸರ, ಧವಳ ಮುತ್ತಿನ ಹಾರ ಈ ಯಾವ ಆಡಂಬರವನ್ನು ಅವನು ಬಯಸುವುದಿಲ್ಲ. ಭಕ್ತಿಯಿಂದ ಒಂದು ತುಳಸಿ ದಳವನ್ನು ಅರ್ಪಿಸಿದರೂ ಸಾಕು ಅವನು ಪ್ರಸನ್ನನಾಗುತ್ತಾನೆ. ಭಕ್ತಿ ತೋರಿಕೆಯ ಪ್ರದರ್ಶನವಾಗಬಾರದು. ಅದೊಂದು ಸರಳ ಆಚರಣೆಯಾಗಬೇಕೆಂಬುದು ಅವರ ಅಪೇಕ್ಷೆ. 'ಮನೆ ಮನೆಯೂ ಹರಿಯ ಆಲಯವಾಗಬೇಕೆಂಬುದು'[೯೫] ವಿದ್ಯಾಪ್ರಸನ್ನತೀರ್ಥರ ಆಶಯ.

'ಅರುಣೋದಯಕೆ ಮುಂಚೆ ಬಲು ಕತ್ತಲಂತೆ'[೯೬] ಎಂದು ಪ್ರಾರಂಭವಾಗುವ ಒಂದು ಹಾಡಿನಲ್ಲಿ ವಿದ್ಯಾಪ್ರಸನ್ನತೀರ್ಥರು ತಮ್ಮ ಅಪಾರವಾದ ಲೋಕಾನುಭವವನ್ನು ಅಡಗಿಸಿಟ್ಟಿದ್ದಾರೆ. ಇದರಲ್ಲಿರುವ ಇಪ್ಪತ್ತೈದು ಚೌಪದಿಗಳೂ ಒಂದೊಂದು ಬಿಡಿ ಮುಕ್ತಕಗಳಾಗಿ, ನೀತಿಯ ಮಾತನ್ನು ಸಾರುತ್ತಿದೆ. 'ನಾರಿಯರಲಿ ಮಾದರಿಯೆಂದೆನಿಸಿರಮ್ಮ ಮೂರು ಕುಲಕೆ ಕೀರುತಿಯನು ತನ್ನಿರಮ್ಮ'[೯೭] ಎಂಬ ಹಾಡಿನಲ್ಲಿ ಒಬ್ಬ ಸ್ತ್ರೀಗೆ ಇರಬೇಕಾದ ಆದರ್ಶ ಗುಣಗಳೇನು ಎಂಬುದನ್ನು ಸರ್ವಕಾಲಕ್ಕೂ ಪ್ರಸ್ತುವಾಗುವಂತೆ ಚಿತ್ರಿಸಿರುವುದನ್ನು ನೋಡಿದಾಗ ಅವರ ಲೋಕಾನುಭವ ಯಾರಿಗಾದರೂ ಅರಿವಾಗದಿರದು. 'ಲೋಭಿಯು ಬೇಡಲು ಲಾಭವೇನಿರುವುದು ನಾಭಿಯು ಒಣಗುವುದು ಎಂದು'[೯೮] ಲೋಭಿಯ ಹೀನ ಮನಸ್ಥಿತಿಯನ್ನು ಹಳಿಯುತ್ತಾ 'ಭಿಕ್ಷೆಯ ಹಾಕಿರಿ ಜೋಗಳಿಗೆ ಅಕ್ಷಯವಾಗುವುದು ನಿಮಗೆ'[೯೯] ಎಂಬುದು ಅವರ ಉಪದೇಶ.

'ಆಟವಾಡಬೇಕು ಒಳ್ಳೆ ಊಟಮಾಡಬೇಕು'[೧೦೦] ಎಂದು ಮೊದಲಾಗುವ ಕೀರ್ತನೆಯಲ್ಲಿ ಚೆಂಡಾಟ, ಕಣ್ಣಾಮುಚಾಲೆ, ಇಸ್ಪೀಟು, ಕ್ರಿಕೇಟು, ಕೊಕ್ಕೋ ಮೊದಲಾದ ಆಟಗಳಿಗೆ ಆಧ್ಯಾತ್ಮಿಕ ಅರ್ಥವನ್ನು ನೀಡಿದ್ದಾರೆ. ಪಂಡಿತರು ವಿದ್ಯೆಯನ್ನು ಕರತಲದಲ್ಲಿ ಹಿಡಿಯುವ ಚಂಡಿನಾಟ ಆಡಬೇಕು. ಹೊರಗಿನ ಇಂದ್ರಿಯ ಸುಖಗಳ ವ್ಯಾಮೋಹವನ್ನು ನಿಯಂತ್ರಿಸಿ, ಶ್ರೀಹರಿಯನ್ನು ಹಿಡಿಯುವ ಕಣ್ಣಾ–ಮುಚ್ಚಾಲೆ ಆಟವಾಡಬೇಕು. ಈಶ, ಜೀವ, ಜಡ ಈ ಮೂವರಲ್ಲಿ ಈಶನೇ ಉನ್ನತನೆಂದು ಮೂರೆಲೆ ಆಟವಾಡಬೇಕು. ದಶಮಿ, ಏಕಾದಶಿ, ದ್ವಾದಶಿ ದಿನತ್ರಯಗಳಂದು ಹರಿನಾಮಸ್ಮರಣೆ ಮಾಡುವ ಮೂರು ದಿನ ಆಟವಾಡಬೇಕು. ಜೀವನದಲ್ಲಿ ಯಾರಿಗೂ ಯಾವ ಅಧಿಕಾರವಾಗಲಿ, ಸ್ಥಾನವಾಗಲಿ ಶಾಶ್ವತವಲ್ಲ. ಒಂದಲ್ಲ ಒಂದು ದಿನ ಒಬ್ಬರಿಗೊಬ್ಬರು ಕೋಕ್ ಕೊಡುತ್ತಾರೆ ಎಂಬ ಧ್ವನಿಯನ್ನು ಕೊಕ್ಕೊ ಆಟ ಸೂಚಿಸುತ್ತದೆ. ಹೀಗೆ ಲೌಕಿಕ ಆಟಗಳ ಮೂಲಕ ತತ್ವವನ್ನು ಹೇಳುವ ನೈಪುಣ್ಯತೆಯನ್ನು ಪ್ರಸನ್ನತೀರ್ಥರಲ್ಲಿ ಕಾಣಬಹುದು.

ವಿದ್ಯಾಪ್ರಸನ್ನತೀರ್ಥರು ಆಡುಭಾಷೆಯಲ್ಲಿ ಸರಳವಾಗಿ ಕೃತಿಗಳನ್ನು ರಚಿಸಿದ್ದಾರೆ. ಅಪಾರವಾದ ಲೌಕಿಕ ಹಾಗೂ ಪಾರಮಾರ್ಥಿಕ ಅನುಭವಗಳನ್ನು ಹೊಂದಿದ್ದ ಇವರು ಕನ್ನಡ ಭಾಷೆಯ ನೂರಕ್ಕೂ ಹೆಚ್ಚು ಜನ ಭಾಷೆಯಿಂದ ಗಾದೆಗಳನ್ನು ಆರಿಸಿಕೊಂಡು ಅನುಭವದ ನುಡಿಗಳನ್ನು, ನಿತ್ಯ ಜೀವನದಲ್ಲಿ ಬಳಸುವ ಉಪಮೆಗಳನ್ನು ಪ್ರಸನ್ನತೀರ್ಥರು ತಮ್ಮ ಕೃತಿಗಳುದ್ದಕ್ಕೂ ಬಳಸಿಕೊಂಡು ವಿಷಯವನ್ನು ಮನಸ್ಸಿಗೆ ನಾಟುವಂತೆ ಚಿತ್ರಿಸಿದ್ದಾರೆ.

೧. ಕರದೊಳಿನ ಮಣಿಗೆ ಕನ್ನಡಿಯೇತಕೆ[೧೦೧]
೨. ಹೊಟ್ಟೆಗೆ ಹಿಟ್ಟಿಲ್ಲ ನಿನ್ನ ಜುಟ್ಟಿಗೆ ಮಲ್ಲಿಗೆಯು[೧೦೨]
೩. ಗಳಿಸಿದವನ ದನ ಬಳಿಸಿದವನಿಗೆ[೧೦೩]
೪. ಬೀಸಿದ ಗುಂಡಗೆ ಬುಕ್ಕಿದ್ದೇ ಲಾಭ[೧೦೪]
೫. ಸಂತೆಗೆ ಸೇರುವ ಗಂಟು ಕಳ್ಳರು[೧೦೫]
೬. ಎಲ್ಲರ ಮನೆಯ ದೋಸೆಯೂ ತೂತು[೧೦೬]
೭. ದೊಂಬ ನಾಟಕವಾಡಿ ಚೊಂಬು ಪಿಡಿದಂತೆ[೧೦೭]
೮. ಬರಿಯ ಪಾತ್ರೆಗಳು ಬಹಳ ಸದ್ದಂತೆ[೧೦೮]
೯. ಕುಳಿತ ಕೊಂಬೆಗೆ ಕೊಡಲಿ ಹಾಕೋರು[೧೦೯]
೧೦. ಕೋಳಿ ಕೂಗದೆ ಬೆಳಕು ಬಾರದು[೧೧೦]
೧೧. ಗೂಳಿಯು ಹಳ್ಳಕ್ಕೆ ಬಿದ್ದ ಕಾಲದಲಿ ಆಳಿಗೊಂದು ಕಲ್ಲೆಸೆಯುವರು[೧೧೧]
೧೨. ಅತ್ತು ಕರೆದು ಔತಣ ನೀಡಿದ ಪರಿ[೧೧೨]
೧೩. ನಗುವ ಜನರ ಮುಂದೆ ಜಂಭಕೊಚ್ಚಬೇಡವೋ[೧೧೩]
೧೪. ಉರಿವ ಒಲೆಗೆ ಉಪ್ಪುಕಾಳನೆರಚಬೇಡಯ್ಯ[೧೧೪]
೧೫. ಗಾಳಿ ಬಂದಾಗ ಬೇಗ ತೂರಿ ಕೊಳ್ಳಲೊ[೧೧೫]
೧೬. ಬಿಳಿಯ ವಸ್ತುವೆಲ್ಲ ಕ್ಷೀರವಲ್ಲ ಕಾಣಿರೊ[೧೧೬]
೧೭. ಥಳಥಳಿಸುವುದೆಲ್ಲ ರಜತವಲ್ಲ ಕಾಣಿರೊ[೧೧೭]
೧೮. ಗಿಡದಲಿ ಬಗ್ಗಿಸದ ಮರವು ಬಗ್ಗಲಾರದೊ[೧೧೮]
೧೯. ಕನ್ನಡಿಯೊಳಗಿನ ಗಂಟಿನಂತಿರುವುದು[೧೧೯]

ವಿದ್ಯಾಪ್ರಸನ್ನ ತೀರ್ಥರ ಕೃತಿಗಳು ಭಕ್ತಿ, ಆತ್ಮಶೋಧನೆ, ತತ್ವ, ಲೋಕನೀತಿ, ಸಂಪ್ರದಾಯದ ಹಾಡುಗಳು ಹೀಗೆ ವಿಶಾಲವಾದ ವ್ಯಾಪ್ತಿಪಡೆದಿದೆ. ಇವುಗಳಲ್ಲದೆ 'ಕೂಡಿಟ ಕೈ', 'ಜಿಹ್ವಾಚಾಪಲ್ಯ', ಎಂಬ ನಾಟಕಗಳನ್ನು ರಚಿಸಿದ್ದಾರೆ. ಯತಿಗಳಾಗಿ ಅವರ ಈ ಕನ್ನಡ ಪ್ರೇಮ ಮೆಚ್ಚುವಂತದ್ದು. "ಹರಿದಾಸ ಸಾಹಿತ್ಯದಲ್ಲಿ ಸ್ವತಂತ್ರ ರಚನೆಗಳು ಕಡಿಮೆಯಾಗುತ್ತಾ, ಧಾರ್ಮಿಕ ಚಿಂತನೆಗಳೂ ಮತ್ತು ಆಚರಣೆಗಳು ಸಡಿಲವಾಗುತ್ತಿದ್ದ ಕಾಲದಲ್ಲಿ ಶ್ರೀಪಾದರಾಜರ, ವ್ಯಾಸರಾಯರ ಸಂಪ್ರದಾಯವನ್ನು ಉಳಿಸಲು ಪ್ರಯತ್ನಿಸಿದವರು ವಿದ್ಯಾಪ್ರಸನ್ನತೀರ್ಥರು"[120] ಸಂಪ್ರದಾಯ, ಭಕ್ತಿ ಹಾಗೂ ಸಮಕಾಲೀನ ಸಮಾಜದ ಆಗುಹೋಗುಗಳಿಗೆ ಸ್ಪಂದಿಸಿ ಇಪ್ಪತ್ತನೇ ಶತಮಾನದಲ್ಲೂ ಹರಿದಾಸ ಸಾಹಿತ್ಯವನ್ನು ಪೋಷಿಸಿ ಬೆಳೆಸಿದ ಪ್ರಮುಖ ಯತಿಗಳಲ್ಲಿ ವಿದ್ಯಾಪ್ರಸನ್ನ ತೀರ್ಥರ ಪಾತ್ರ ಉಲ್ಲೇಖನೀಯವಾದದ್ದು.

ಈವರೆಗೆ ಹರಿದಾಸ ಸಾಹಿತ್ಯದ ಪ್ರಮುಖ ಯತಿಗಳ ಕೃತಿಗಳಲ್ಲಿ ಕಂಡುಬರುವ ಸಾಹಿತ್ಯದ ವೈಶಿಷ್ಟ್ಯಗಳನ್ನು ಬೇರೆ-ಬೇರೆ ನೆಲೆಯಲ್ಲಿ ವಿಶ್ಲೇಷಿಸಲಾಯಿತು. ದಾಸ ಸಾಹಿತ್ಯವು ಅಷ್ಟಾದಶ

ವರ್ಣನೆಯ ಕಟ್ಟುಪಾಡಿಗಾಗಲಿ, ಇಂಥದ್ದೇ ಛಂದಸ್ಸು ಬಳಕೆಯಾಗಬೇಕೆಂಬ ರಗಳೆಗಾಗಲೀ ಸಿಲುಕಿದ್ದಲ್ಲ. ಅವು ನಿರಾಯಾಸವಾಗಿ ಆ ಕ್ಷಣದ ಸಂದರ್ಭಕ್ಕೆ ಸ್ಪಂದಿಸಿದ, ಸ್ವಚ್ಛಂದವಾಗಿ ಹೊರಹೊಮ್ಮಿದ ಅಭಿಪ್ರಾಯಗಳು, ಆದರೂ ಅದರಲ್ಲಿ ಹರಿದಾಸರು ಬಳಸಿರುವ ಉಪಮೆ, ರೂಪಕಾಲಂಕಾರಗಳು, ಭಕ್ತಿರಸಕ್ಕೆ ಪೂರಕವಾಗಿ ಬರುವ ಭಾವಾನುಭವಗಳು, ಅನುಕರಣಾವ್ಯಯಗಳು, ಅಲ್ಲಿ ಬಳಕೆಯಾಗಿರುವ ಪೌರಾಣಿಕ ಪ್ರಸಂಗಗಳೂ, ಪ್ರಾಸಗಳ ಬಳಕೆಯ ಶಬ್ಧ ಸೌಂದರ್ಯ ಈ ಎಲ್ಲಾ ವಿಶೇಷತೆಗಳನ್ನು ಆಯಾ ಯತಿಗಳ ಮನೋಧರ್ಮಕ್ಕೆ ತಕ್ಕಂತೆ ಹೇಗೆ ವೈಶಿಷ್ಟ್ಯ ಪೂರ್ಣವಾಗಿದೆಯೆಂದು ಈಗಾಗಲೇ ಪ್ರಾಸಂಗಿಕವಾಗಿ ಹೇಳಲಾಗಿದೆಯಾದರೂ ಸಾಹಿತ್ಯ ವಿಶ್ಲೇಷಣೆಯ ಸಾರವನ್ನು ಹೀಗೆ ಹೇಳಬಹುದು.

ಯತಿಗಳಾದ ಶ್ರೀಪಾದರಾಜರಿಂದ ಕನ್ನಡ ಭಾಷೆಯಲ್ಲಿ ಪ್ರಯೋಗವಾದ ಕೀರ್ತನೆ, ಸುಳಾದಿ, ಉಗಾಭೋಗ, ವೃತ್ತನಾಮ ಮತ್ತು ದಂಡಕಗಳು ಕನ್ನಡ ಸಾಹಿತ್ಯಕ್ಕೆ ಒಂದು ಹೊಸ ಆಯಾಮವನ್ನು ನೀಡಿತು. ಶ್ರೀಪಾದರಾಜರ ಶಿಷ್ಯರಾದ ವ್ಯಾಸರಾಯರು ವ್ಯಾಸಕೂಟದಿಂದ ವಿದ್ವಾಂಸ ಯತಿಗಳನ್ನು ಬೆಳೆಸಿದಂತೆ ಪುರಂದರ, ಕನಕದಾಸರಂತ ದೀಕ್ಷಾ ಬದ್ಧ ದಾಸರ ಗುಂಪನ್ನು ಸಂಘಟಿಸಿ ಕರ್ನಾಟಕ ಸಂಗೀತಕ್ಕೆ ಹೊಸ ಆಯಾಮ ನೀಡಿದರು. ವಾದಿರಾಜರು ಕೀರ್ತನೆ, ಸುಳಾದಿ, ಉಗಾಭೋಗಗಳ ಜೊತೆಗೆ ತ್ರಿಪದಿ ಸಾಂಗತ್ಯಗಳ ಮೂಲಕ ಮಧ್ವಾಚಾರ್ಯರ ಸಿದ್ಧಾಂತಗಳನ್ನು ಪ್ರತಿಪಾದಿಸಿದರು. ವೈಕುಂಠವರ್ಣನೆ, ಹರಿಸರ್ವೋತ್ತಮ ಸಾರದಂತಹ ದೀರ್ಘಕೃತಿಗಳನ್ನು ರಚಿಸಿ ಹರಿದಾಸ ಸಾಹಿತ್ಯ ಕೇವಲ ಆನಂದಾನುಭವಕ್ಕೆ ಮಾತ್ರವಲ್ಲ ಶಾಸ್ತ್ರ ನಿರೂಪಣೆಯೂ ಸಾಧ್ಯ ಎಂಬುದನ್ನು ಮೊದಲಿಗೆ ತೋರಿಸಿಕೊಟ್ಟರು. ಹೀಗೆ ಶ್ರೀಪಾದರಾಜರು, ವ್ಯಾಸರಾಯರು ಹಾಗೂ ವಾದಿರಾಜರು ಈ ಮೂರು ಜನ ಯತಿಗಳು ವ್ಯಾಸ ಮತ್ತು ದಾಸಕೂಟಗಳಿಗೆ ಸೇತುವೆಯಾಗಿ ಎರಡೂ ಕೂಟಗಳನ್ನು ಸಮಾನವಾಗಿ ಪೋಷಿಸಿ ಬೆಳೆಸಿದರು.

ಈಗಾಗಲೇ ಚರ್ಚಿಸಿದಂತೆ ಹರಿದಾಸ ಸಾಹಿತ್ಯವು ಉದ್ದೇಶಪೂರ್ವಕವಾಗಿ ರಚನೆಯಾದದ್ದಲ್ಲ. ಹಾಗಾಗಿ ಶುದ್ಧ ಸಾಹಿತ್ಯದ ಮಾನದಂಡದಿಂದ ಅದನ್ನು ತೂಗಲು ಸಾಧ್ಯವಿಲ್ಲ. ಅದರಲ್ಲೂ ವಿಶೇಷವಾಗಿ ಯತಿಗಳಿಗೆ ಸಾಕಷ್ಟು ಧಾರ್ಮಿಕ ಕಟ್ಟುಪಾಡುಗಳನ್ನು ಅನುಸರಿಸಬೇಕಿತ್ತು. ತೆರೆದ ಕಣ್ಣಿನಿಂದ ಸಮಾಜವನ್ನು ನೋಡಲು ಅವರಿಗೆ ಸಾಧ್ಯವಾಗುತ್ತಿರಲಿಲ್ಲ. ವಸ್ತುವಿನ ಆಯ್ಕೆಗೆ ಸ್ವಾತಂತ್ರವಿರಲಿಲ್ಲ, ಅಲ್ಲದೆ ಮತ ಪ್ರಸಾರದ ಹೊಣೆಗಾರಿಕೆಯೂ ಅವರ ಮೇಲಿತ್ತು. ಈ ಎಲ್ಲಾ ಕಾರಣಗಳಿಂದ ಅವರ ಕೃತಿಗಳಲ್ಲಿ ತತ್ವಗಳ ಪುನರಾವೃತ್ತಿ, ನೇರವಾದ ನೀತಿ ಬೋಧೆಗಳು ಚರ್ವಿತ ಚರ್ವಣವೆನಿಸಿ ಬೇಸರತರಬಹುದು. ಆದರೂ ಅವರು ತಮ್ಮದೇ ಮಿತಿಯಲ್ಲಿ ನಿರೂಪಿಸಿರುವ ಲೋಕಾನುಭವದ ನುಡಿಗಳಲ್ಲಿ, ಅವರ ನಿರೂಪಣೆಯ ತಂತ್ರದ ನೈಪುಣ್ಯತೆಯಲ್ಲಿ ಕಾವ್ಯದ ಹೊಳಪುಗಳನ್ನು ಕಾಣಬಹುದು.

## ಅಧ್ಯಾಯ ೮ ಅಡಿಟಿಪ್ಪಣಿಗಳು

೧. ರಂ.ಶ್ರೀ ಮುಗುಳಿ, 'ಕನ್ನಡ ಸಾಹಿತ್ಯ ಚರಿತ್ರೆ', ಪು–೨೭೮

೨. ಶ್ರೀ ಶ್ರೀಪಾದರಾಜರ ಮತ್ತು ಶ್ರೀವ್ಯಾಸರಾಯರ ಕೀರ್ತನೆಗಳು, ಸಮಗ್ರ ದಾಸ ಸಾಹಿತ್ಯ ಸಂಪುಟ ೧, ಪು–೩

೩. ಡಾ. ಟಿ.ಎನ್. ನಾಗರತ್ನ, 'ಶ್ರೀಪಾದರಾಜರ ಜೀವನ ಮತ್ತು ಕೃತಿಗಳು, ಪು–೩೧

೪. 'ಶ್ರೀ ಶ್ರೀಪಾದರಾಜರ ಮತ್ತು ಶ್ರೀವ್ಯಾಸರಾಯರ ಕೀರ್ತನೆಗಳು', ಸಮಗ್ರ ದಾಸ ಸಾಹಿತ್ಯ ಸಂಪುಟ ೧, ಪು–೨೭

೫. ಡಾ. ಟಿ.ಎನ್. ನಾಗರತ್ನ, 'ಶ್ರೀಪಾದರಾಜರು ಜೀವನ ಮತ್ತು ಕೃತಿಗಳು' ಪು–೩೩

೬. ಅದೇ, ಪ–೮೭

೭. ಅದೇ, ಪು–೪೫

೮. ಡಾ. ವರದರಾಜರಾವ್, 'ಶ್ರೀಪಾದರಾಜರ ಕೃತಿಗಳು', ಪು–೧೮೩

೯. 'ಶ್ರೀ ಶ್ರೀಪಾದರಾಜರ ಮತ್ತು ಶ್ರೀವ್ಯಾಸರಾಯರ ಕೀರ್ತನೆಗಳು', ಸಮಗ್ರ ದಾಸ ಸಾಹಿತ್ಯ ಸಂಪುಟ ೧, ಪು–೧೧೬

೧೦. ಅದೇ, ಪು–೬೪

೧೧. ಅದೇ, ಪು–೭೬

೧೨. ಅದೇ, ಪು–೧೨೫

೧೩. ಅದೇ, ಪು–೮

೧೪. ಅದೇ, ಪು–೬೩

೧೫. ಅದೇ, ಪು–೮೫

೧೬. ಅದೇ, ಪು–೮೮

೧೭. ಅದೇ, ಪು–೫೭

೧೮. ಅದೇ, ಪು–೮೧

೧೯. ಅದೇ, ಪು–೮೫

೨೦. ಅದೇ, ಪು–೮೭

೨೧. ಅದೇ, ಪು–೩೩

೨೨. ಅದೇ, ಪು–೧೭೩

೨೩. ಅದೇ, ಪು–೧೮೧

೨೪. ಅದೇ, ಪು–೧೭೨

೨೫. ಅದೇ, ಪು–೧೭೮

೨೬. ಅದೇ, ಪು–೧೭೫

೨೭. ಅದೇ, ಪು–೧೫೯

೨೮. ಅದೇ, ಪು–೧೭೪

೨೯. ಅದೇ, ಪು–೧೪೯

೩೦. ಅದೇ, ಪು–೧೪೭

೩೧. ಅದೇ, ಪು–೧೫೦

೩೨. ಅದೇ, ಪು–೧೩೨

೩೩. ಅದೇ, ಪು–೧೬೧

೩೪. ಅದೇ, ಪು–೧೮೬

೩೫. ಅದೇ, ಪು–೧೪೦

೩೬. ಅದೇ, ಪು–೨೧೯

೩೭. ಅದೇ, ಪು–೨೩೨

೩೮. ಅದೇ, ಪು–೨೫೦

೩೯. ಅದೇ, ಪು–೧೪೩

೪೦. ಅದೇ, ಪು–೨೪೬

೪೧. ಅದೇ, ಪು–೨೩೭

೪೨. ಅದೇ, ಪು–೨೨೦

೪೩. ಅದೇ, ಪು–೨೪೪

೪೪. ಅದೇ, ಪು–೨೫೯

೪೫. ಅದೇ, ಪು–೨೩೫

೪೬. ಅದೇ, ಪು–೨೪೨

೪೭. ಅದೇ, ಪು–೧೮೦

೪೮. ಅದೇ, ಪು–೨೨೦

೪೯. ಅದೇ, ಪು–೨೪೧

೫೦. ಅದೇ, ಪು–೨೩೫

೫೧. ಅದೇ, ಪು–೨೩೫

೫೨. ಅದೇ, ಪು–೨೨೦

೫೩. ಡಾ. ಟಿ.ಎನ್. ನಾಗರತ್ನ, 'ಶ್ರೀವ್ಯಾಸರಾಯ ಕೃತಿಗಳು', ಪು–XXIX

೫೪. ಡಾ. ಟಿ.ಎನ್. ನಾಗರತ್ನ, 'ಶ್ರೀವಾದಿರಾಜರ ಕೀರ್ತನೆಗಳು', ಪು–೧೬೪

೫೫. ಅದೇ, ಪು–೧೯೫

೫೬. ಅದೇ, ಪು–೮

೫೭. ಅದೇ, ಪು–೭೩

೫೮. ಅದೇ, ಪು–೨೩೩

೫೯. ಅದೇ, ಪು–೨೩೦

೬೦. ಅದೇ, ಪು–೪೩

೬೧. ಅದೇ, ಪು–೧೬೦

೬೨. ಅದೇ, ಪು–೨೩೧

೬೩. ಅದೇ, ಪು–೪೩

೬೪. ಅದೇ, ಪು–೪೩

೬೫. ಅದೇ, ಪು–೨೩೩

೬೬. ಅದೇ, ಪು–೨೩೩

೬೭. ಅದೇ, ಪು–೧೫೬

೬೮. ಅದೇ, ಪು–೧೫೬

೬೯. 'ಶ್ರೀವಿದ್ಯಾಪ್ರಸನ್ನತೀರ್ಥರ ಹಾಗೂ ಇತರ ಯತಿಗಳ ಕೀರ್ತನೆಗಳು', ಸಮಗ್ರ ದಾಸ ಸಾಹಿತ್ಯ ಸಂಪುಟ ೨೮, ಪು–೧೫೬

೭೦. ಅದೇ, ಪು–೭೧

೭೧. ಅದೇ, ಪು–೭೨

೭೨. ಅದೇ, ಪು–೭೭

೭೩. ಅದೇ, ಪು–೭೭

೭೪. ಅದೇ, ಪು–೭೩

೭೫. ಅದೇ, ಪು–೫೪

೭೬. ಅದೇ, ಪು–೩೯

೭೭. ಅದೇ, ಪು–೪೩

೭೮. ಅದೇ, ಪು–೨೨

೭೯. ಅದೇ, ಪು–೧೪

೮೦. ಅದೇ, ಪು–೪೦

೮೧. ಅದೇ, ಪು–೯೮

೮೨. ಅದೇ, ಪು–೬೫

೮೩. ಅದೇ, ಪು–೪೩

೮೪. ಅದೇ, ಪು–೪೭

೮೫. ಅದೇ, ಪು–೨೭೮

೮೬. ಅದೇ, ಪು–೧೪೨

೮೭. ಅದೇ, ಪು–೧೪೪

೮೮. ಅದೇ, ಪು–೨೯೨

೮೯. ಅದೇ, ಪು–೩೦೮

೯೦. ಅದೇ, ಪು–೨೯೪

೯೧. ಅದೇ, ಪು–೨೯೫

೯೨. ಅದೇ, ಪು–೩೦೭

೯೩. ಅದೇ, ಪು–೨೮೮

೯೪. ಅದೇ, ಪು–೨೯೩

೯೫. ಅದೇ, ಪು–೩೦೯

೯೬. ಅದೇ, ಪು–೨೭೯

೯೭. ಅದೇ, ಪು–೨೯೬

೯೮. ಅದೇ, ಪು–೩೧೨

೯೯. ಅದೇ, ಪು–೩೦೭

೧೦೦. ಅದೇ, ಪು–೩೨೯

೧೦೧. ಅದೇ, ಪು–೧೪೮

೧೦೨. ಅದೇ, ಪು–೩೨೭

೧೦೩. ಅದೇ, ಪು–೩೨೧

೧೦೪. ಅದೇ, ಪು–೩೩೭

೧೦೫. ಅದೇ, ಪು–೩೧೧

೧೦೬. ಅದೇ, ಪು–೨೯೦

೧೦೭. ಅದೇ, ಪು–೨೮೭

೧೦೮. ಅದೇ, ಪು–೨೮೨

೧೦೯. ಅದೇ, ಪು–೩೦೦

೧೧೦. ಅದೇ, ಪು–೨೮೪

೧೧೧. ಅದೇ, ಪು–೨೯೦

೧೧೨. ಅದೇ, ಪು–೧೮೩

೧೧೩. ಅದೇ, ಪು–೩೧೭

೧೧೪. ಅದೇ, ಪು–೩೧೮

೧೧೫. ಅದೇ, ಪು–೩೨೧

೧೧೬. ಅದೇ, ಪು–೩೧೭

೧೧೭. ಅದೇ, ಪು–೩೧೭

೧೧೮. ಅದೇ, ಪು–೩೨೧

೧೧೯. ಅದೇ, ಪು–೩೩೮

೧೨೦. ಅದೇ, ಪು–೫೫

ಅಧ್ಯಾಯ – 9

# ಪರಿಸಮಾಪ್ತಿ

ಕರ್ನಾಕದ ಹರಿದಾಸ ಸಾಹಿತ್ಯ ಚರಿತ್ರೆಯಲ್ಲಿ ಮಾಧ್ವಯತಿಗಳ ಸ್ಥಾನ ಉನ್ನತವಾದುದು. ಹರಿದಾಸ ಸಾಹಿತ್ಯದ ಪ್ರಾರಂಭದಿಂದ ಇಂದಿನವರೆಗೆ ಅದರ ವಿವಿಧ ಘಟ್ಟಗಳಲ್ಲಿ ಮಾಧ್ವಯತಿಗಳು ನೀಡಿದ ಪ್ರೇರಣೆ ಮತ್ತು ಮಾರ್ಗದರ್ಶನ ಉಲ್ಲೇಖನೀಯವಾಗಿದೆ. ಯತಿಧರ್ಮದ ಪರಿಮಿತಿಯಲ್ಲಿ ಧಾರ್ಮಿಕ ಮತ್ತು ತಾತ್ವಿಕ ಗ್ರಂಥಗಳ ಅಧ್ಯಯನ, ಅಧ್ಯಾಪನ, ಟೀಕೆ, ಟಿಪ್ಪಣಿ ಮೊದಲಾದ ಸಂಸ್ಕೃತ ಶಾಸ್ತ್ರಾಧ್ಯಯನದಲ್ಲಿ ತೊಡಗಿಕೊಂಡಿದ್ದ ಯತಿವರೇಣ್ಯರು ಈ ಎಲ್ಲಾ ಕಟ್ಟುಪಾಡುಗಳ ನಡುವೆ ಸ್ವತಃ ಕನ್ನಡದಲ್ಲಿ ಕೀರ್ತನೆಗಳನ್ನು ರಚಿಸುವುದರೊಂದಿಗೆ ಇತರ ಹರಿದಾಸರಿಗೂ ಕನ್ನಡದಲ್ಲಿ ಕೀರ್ತನೆಗಳನ್ನು ರಚಿಸಲು ಪ್ರೇರಣೆ ಪ್ರೋತ್ಸಾಹ ನೀಡಿದರು. ಆ ಮೂಲಕ ಹರಿದಾಸ ಸಾಹಿತ್ಯವನ್ನು ಮುನ್ನಡೆಸಿಕೊಂಡು ಬಂದರು. ದ್ವೈತ ತತ್ವವನ್ನು ಸಂಸ್ಕೃತ ಬಾರದ ಕನ್ನಡಿಗರಿಗೂ ಸರಳವಾಗಿ ಪರಿಚಯಿಸಿದರು. ಇಂತಹ ಯತಿಗಳ ಕನ್ನಡ ಸೇವೆಯನ್ನು ಮತ್ತು ಅದರ ವೈಶಿಷ್ಟ್ಯಗಳನ್ನು ದಾಖಲಿಸಲಾಗಿದೆ.

**ನಮಃ ಶ್ರೀಪಾದರಾಜಾಯ ನಮಸ್ತೇ ವ್ಯಾಸಯೋಗಿನೇ**
**ನಮಃ ಪುರಂದಾರಾರ್ಯಾಯ ವಿಜಯಾರ್ಯಾಯ ತೇ ನಮಃ**

ಹರಿದಾಸ ಸಾಹಿತ್ಯ ಪ್ರಾರಂಭಗೊಂಡದ್ದೇ ಯತಿಗಳಾದ ಶ್ರೀಪಾದರಾಜರಿಂದ. ದ್ವೈತ ಸಿದ್ಧಾಂತವನ್ನು ಸಂಸ್ಕೃತ ಬಾರದ ಜನಸಾಮಾನ್ಯರಿಗೆ ಅವರ ಮಾತೃಭಾಷೆಯಾದ ಕನ್ನಡದಲ್ಲಿ ತಿಳಿಸುವ ಅಗತ್ಯವನ್ನು ಅರಿತ ಶ್ರೀಪಾದರಾಜರು ಭಗವಂತನಲ್ಲಿ ಆತ್ಮನಿವೇದನೆಗಾಗಿ ಪೂಜಾಕಾಲದಲ್ಲಿ ಕನ್ನಡದಲ್ಲಿ ಕೀರ್ತನೆಗಳನ್ನು ರಚಿಸಿ, ಹಾಡುವ, ಕುಣಿಯುವ ಸಂಪ್ರದಾಯವನ್ನು ಪ್ರಾರಂಭಿಸಿದರು. ಕೀರ್ತನೆಗಳ ಜೊತೆಗೆ ಉಗಾಭೋಗ, ಸುಳಾದಿ, ವೃತ್ತನಾಮ, ದಂಡಕಗಳನ್ನು ರಚಿಸಿ ಹರಿದಾಸ ಸಾಹಿತ್ಯ ಪ್ರವರ್ತಕರೆನಿಸಿಕೊಂಡರು.

ಶ್ರೀಪಾದರಾಜರ ನೆಚ್ಚಿನ ಶಿಷ್ಯರಾದ ವ್ಯಾಸರಾಯರು ಗುರುಗಳಿಂದ 'ಸಾಸಿರ ಜಿಹ್ವೆಗಳುಳ್ಳ ಶೇಷನೇ ಕೊಂಡಾಡಬೇಕು ವ್ಯಾಸಮುನಿರಾಯರ ಸನ್ಯಾಸದಿರವ' ಎಂದು ಮೆಚ್ಚುಗೆ ಪಡೆದರು. ಅಸಂಘಟಿತವಾಗಿದ್ದ ಹಲವಾರು ವರ್ಗದ ಭಕ್ತರಿಗೆ ದಾಸದೀಕ್ಷೆ ನೀಡುವುದರ ಮೂಲಕ ಒಂದು

ಸಂಘಟಿತ ವ್ಯವಸ್ಥೆಗೆ ಅಳವಡಿಸಿ ಅವರಿಗೆ ಪ್ರೋತ್ಸಾಹ ನೀಡಿದರು. ಪುರಂದರದಾಸರು, ಕನಕದಾಸರು, ವಾದಿರಾಜರು, ವಿಜಯೀಂದ್ರತೀರ್ಥರು ಮೊದಲಾದ ಶ್ರೇಷ್ಠ ಶಿಷ್ಯರನ್ನು ಕನ್ನಡಕ್ಕೆ ನೀಡಿದರು. ವ್ಯಾಸಕೂಟ, ದಾಸಕೂಟವನ್ನು ಸಮಾನವಾಗಿ ಕಂಡು ಹರಿದಾಸ ಸಾಹಿತ್ಯಕ್ಕೆ ಮನ್ನಣೆ ದೊರಕಿಸಿಕೊಟ್ಟರು.

ವ್ಯಾಸರಾಯರ ಶಿಷ್ಯರಾದ ವಾದಿರಾಜರು ತಮ್ಮ ಗುರುಗಳ ಹಾದಿಯಲ್ಲೇ ನಡೆದು ಮಧ್ವತತ್ವಗಳನ್ನು ಸರಳ ಕನ್ನಡದಲ್ಲಿ ಪ್ರತಿಪಾದಿಸಿದರು. ಕೀರ್ತನೆ, ಸುಳಾದಿ, ಉಗಾಭೋಗಗಳ ರಚನೆಗಷ್ಟೇ ತೃಪ್ತರಾಗದೆ, ಲಕ್ಷ್ಮಿಶೋಭಾನೆ, ವೈಕುಂಠವರ್ಣನೆ, ಹರಿಸರ್ವೋತ್ತಮಸಾರ, ಗುಂಡಕ್ರಿಯೆ, ಸ್ವಪ್ನಪದ ಮೊದಲಾದ ದೀರ್ಘಕೃತಿಗಳನ್ನು ರಚಿಸಿದರು. ತ್ರಿಪದಿ, ಷಟ್ಪದಿ, ಸಾಂಗತ್ಯ, ಏಳೆ ಮೊದಲಾದ ಜಾನಪದ ಲಯಗಳ ಮೂಲಕ ಹಾಡನ್ನು ಜನರ ಹತ್ತಿರಕ್ಕೆ ತರಲು ಪ್ರಯತ್ನಿಸಿದರು. ಹೀಗೆ ಹಾಡು ಬರಿಯ ರಂಜನೆಯಾಗದೆ ಭೋಧಪ್ರದವೂ ಆಗಲೆಂದು ಹಾಡಿನ ಲಯದಲ್ಲಿ ತತ್ವವನ್ನು ಬೆರೆಸಿ ಕಥನ ಕಲೆಯನ್ನು ಪರಿಚಯಿಸಿದರು. ಸಾಹಿತ್ಯ ಮತ್ತು ಶಾಸ್ತ್ರಗಳೆರಡರಲ್ಲೂ ಸಿದ್ಧ ಹಸ್ತರೆಂಬುದನ್ನು ನಿರೂಪಿಸಿದರು. ವಾದಿರಾಜರ ಇಂತಹ ಪ್ರಯತ್ನಗಳಿಂದ ದಾಸ ಸಾಹಿತ್ಯ ಒಂದು ಹೊಸರೂಪ ಪಡೆದು, ಹರಿದಾಸರಿಗೆ ಮಾದರಿಯಾಯಿತು. ಮುಂದೆ ವಾದಿರಾಜರ ದೀರ್ಘಕೃತಿಗಳಿಂದ ಪ್ರೇರಣೆಗೊಂಡು ವಿಜಯದಾಸರು ಜಗನ್ನಾಥದಾಸರು ಮಧ್ವಸಿದ್ಧಾಂತವನ್ನು ತಮ್ಮ ಕೃತಿಗಳಲ್ಲಿ ನಿರೂಪಿಸಿದರು.

ಶ್ರೀಪಾದರಾಜರು, ವ್ಯಾಸರಾಜರು ಹಾಗೂ ವಾದಿರಾಜರು ಹರಿದಾಸ ಸಾಹಿತ್ಯಕ್ಕೆ ಈ ಮೂವರು ಯತಿತ್ರಯರ ಕೊಡುಗೆ ಸ್ಮರಣೀಯವಾದುದು. ಈ ಮೂವರೂ ಯತಿಗಳು ರಾಜಾಶ್ರಯವನ್ನು ಪಡೆದಿದ್ದು, ಅರಸರಿಗೆ ರಾಜಗುರುಗಳಾಗಿದ್ದವರು. ಅರಸರು ಇವರಿಗೆ ಗೌರವಾರ್ಥವಾಗಿ ಅನೇಕ ದಾನ, ದತ್ತಿಗಳನ್ನು ಬಳುವಳಿಯಾಗಿ ನೀಡಿದರು. ಈ ದಾನ – ದತ್ತಿಗಳನ್ನು ಸಮಾಜಸೇವೆಗಾಗಿ ಬಳಸಿದ ಉದಾರ ಮನೋಭಾವದ ಯತಿಗಳಿವರು. ಧಾರ್ಮಿಕ ಹೊಣೆಗಾರಿಕೆಯೊಂದಿಗೆ ರಾಜಕೀಯ ಹೊಣೆಗಾರಿಕೆಯನ್ನು ಹೊಂದಿದ್ದ ಈ ಯತಿಗಳು ಒಂದು ರೀತಿಯಲ್ಲಿ ದಂಡಾಧಿಕಾರಿಗಳೂ ಆಗಿದ್ದರು. ಶ್ರೀಪಾದರಾಜ, ವಾದಿರಾಜ, ವ್ಯಾಸರಾಜ ಹೀಗೆ ಇವರ ಹೆಸರಿನೊಂದಿಗೆ 'ರಾಜ' ಎಂಬ ಪದ ಸೇರಿಕೊಂಡಿದೆ. ಇವರ ಮಠಗಳನ್ನು ಇಂದಿಗೂ 'ಸಂಸ್ಥಾನ'ವೆಂದು ಕರೆಯುತ್ತಾರೆ. ಹೀಗೆ ಈ ಯತಿತ್ರಯರು ಕೇವಲ ಮಠಾಧಿಪತಿಗಳಾಗಿರದೆ

ಅಂದಿನ ಕಾಲದಲ್ಲಿ ರಾಜಕೀಯ ವರ್ಚಸ್ಸನ್ನು ಹೊಂದಿದ್ದ ವ್ಯಕ್ತಿಗಳಾಗಿದ್ದು, ಇವರ ಜೀವನದಲ್ಲಿ ರಾಜತ್ವದ ಛಾಯೆಯನ್ನು ಗುರುತಿಸಬಹುದಾಗಿದೆ.

ಹರಿದಾಸ ಸಾಹಿತ್ಯ ಪರಂಪರೆಯನ್ನು ಬೆಳೆಸಿ ಪೋಷಿಸಿದ ಪ್ರಮುಖ ಯತಿಗಳಲ್ಲಿ ವಿಜಯೀಂದ್ರತೀರ್ಥರೂ ಒಬ್ಬರು. ಶ್ರೀರಾಘವೇಂದ್ರತೀರ್ಥರು ಕನ್ನಡದಲ್ಲಿ ಬರೆದಿರುವ ಒಂದೇ ಒಂದು ಕೀರ್ತನೆ ಲಭ್ಯವಿದ್ದರೂ, ರಾಘವೇಂದ್ರರನ್ನು ಕುರಿತಂತೆ ಕನ್ನಡದಲ್ಲಿ ಸುಮಾರು ಮುನ್ನೂರಕ್ಕೂ ಹೆಚ್ಚು ಗುರುಸ್ತುತಿಗಳು ದೊರೆಯುತ್ತವೆ. ರಾಘವೇಂದ್ರರ ಪ್ರೇರಣೆಯಿಂದಲೇ ತಟಸ್ಥವಾಗಿದ್ದ ಹರಿದಾಸ ಸಾಹಿತ್ಯ ತುಂಗಾತೀರ ಪ್ರದೇಶದಲ್ಲಿ ಪುನರುಜ್ಜೀವನ ಪಡೆಯಿತು. ಮುಂದೆ ವ್ಯಾಸತತ್ವಜ್ಞರು, ವಿದ್ಯಾರತ್ನಾಕರ ತೀರ್ಥರು, ವಿದ್ಯಾಪ್ರಸನ್ನತೀರ್ಥರು ಸೋದೆ ಮಠದ ವಿಶ್ವೇಂದ್ರತೀರ್ಥರು ಹಾಗೂ ಪ್ರದ್ಯುಮ್ನತೀರ್ಥರು ಸ್ವತಃ ಕನ್ನಡದಲ್ಲಿ ಕೀರ್ತನೆಗಳನ್ನು ರಚಿಸುವುದರ ಜೊತೆಗೆ ಇತರ ಹರಿದಾಸರುಗಳಿಗೂ ಪ್ರೋತ್ಸಾಹ ನೀಡಿದರು. ಹೀಗೆ ಹರಿದಾಸ ಸಾಹಿತ್ಯದ ಪ್ರಾರಂಭವಾದಾಗಿನಿಂದ ಅದರ ವಿವಿಧ ಘಟ್ಟಗಳಲ್ಲಿ ಮಾಧ್ವಯತಿಗಳು ನೀಡಿದ ಪ್ರೇರಣೆ ಮತ್ತು ಮಾರ್ಗದರ್ಶನವು ಉಲ್ಲೇಖನೀಯ. ಅವರ ಸಾಧನೆ ಮತ್ತು ಕೊಡುಗೆಗಳನ್ನು ಈ ನಿಬಂಧದಲ್ಲಿ ಸಕಾರಣವಾಗಿ ದಾಖಲಿಸಲಾಗಿದೆ.

1. ಸಂಸ್ಕೃತದಲ್ಲಿ ಅಪಾರ ಪಾಂಡಿತ್ಯ ಹೊಂದಿದ್ದರೂ, ತತ್ವಗಳನ್ನು ಜನಸಾಮಾನ್ಯರ ಭಾಷೆಯಲ್ಲಿ ತಿಳಿಸಬೇಕೆಂಬ ಅಗತ್ಯವನ್ನು ಮನಗೊಂಡಿದ್ದ ಯತಿಗಳು ಪೂಜಾಕಾಲದಲ್ಲಿ ಹಾಡಲೆಂದು ಸರಳವಾಗಿ ಕನ್ನಡ ಭಾಷೆಯಲ್ಲಿ ತತ್ವಗಳನ್ನು ನಿರೂಪಿಸಿದರು.

2. ಕೀರ್ತನೆ, ಸುಳಾದಿ, ಉಗಾಭೋಗ, ವೃತ್ತನಾಮ, ದಂಡಕ, ದೀರ್ಘಕೃತಿ ಮೊದಲಾದ ಹೊಸ ಪ್ರಕಾರಗಳನ್ನು ಕನ್ನಡಕ್ಕೆ ಪರಿಚಯಿಸಿದರು.

3. ಸ್ವತಃ ತಾವು ಕನ್ನಡದಲ್ಲಿ ಕೀರ್ತನೆಗಳನ್ನು ರಚಿಸಿದ್ದಲ್ಲದೆ ಹರಿದಾಸರಿಗೆ ಕನ್ನಡದಲ್ಲಿ ಕೀರ್ತನೆಗಳನ್ನು ರಚಿಸಲು ಪ್ರೇರಣೆ, ಪ್ರೋತ್ಸಾಹ ನೀಡಿದರು.

4. ಮಠಗಳನ್ನು ಹರಿದಾಸ ಕೇಂದ್ರಗಳನ್ನಾಗಿ ಮಾಡಿ, ದಾಸರಾಗ ಬಯಸಿದವರಿಗೆಲ್ಲ ಅಂಕಿತ ನೀಡಿ ಹರಿದಾಸ ದೀಕ್ಷೆಯನ್ನು ನೀಡಿದರು.

5. ಕೇವಲ ಪಂಡಿತರಿಗಷ್ಟೆ ಸೀಮಿತವಾಗಿದ್ದ ರಾಮಾಯಣ, ಮಹಾಭಾರತ, ಭಾಗವತ, ಪುರಾಣ, ವೇದ, ಉಪನಿಷತ್‌ಗಳಿಂದ ಅಸಂಖ್ಯ ಕಥೆಗಳನ್ನು ಸ್ವೀಕರಿಸಿ, ಅದನ್ನು ದ್ವೈತ ಸಿದ್ಧಾಂತಕ್ಕೆ ತಕ್ಕಂತೆ ಹೊಂದಿಸಿ ತಮ್ಮ ತತ್ವವಾದವನ್ನು ಸರಳ ಕನ್ನಡದಲ್ಲಿ ನಿರೂಪಿಸಿ, ಸಾಮಾನ್ಯರಿಗೆ ತಲುಪಿಸಿದ ಕೀರ್ತಿ ಇವರದು.

6. ಏಳೆ, ತ್ರಿಪದಿ, ಷಟ್ಪದಿ, ಚೌಪದಿ, ಸಾಂಗತ್ಯ ಮೊದಲಾದ ಜಾನಪದ ಲಯಗಳ ಮೂಲಕ ಹಾಡನ್ನು ಜನರ ಹತ್ತಿರ ತರಲು ಪ್ರಯತ್ನಿಸಿದರು. ಹೀಗೆ ಹಾಡು ಬರಿಯ ರಂಜನೆ ಆಗದೆ ಬೋಧಪ್ರದವು ಆಗಲೆಂದು ಹಾಡಿನ ಲಯದಲ್ಲಿ ತತ್ವವನ್ನು ಬೆರೆಸಿದರು. ಕಥನ ಕಲೆಯನ್ನು ಪರಿಚಯಿಸಿದರು. ಸಾಹಿತ್ಯ ಮತ್ತು ಶಾಸ್ತ್ರ ಎರಡರಲ್ಲೂ ತಾವು ಸಿದ್ಧಹಸ್ತರು ಎಂಬುದನ್ನು ನಿರೂಪಿಸಿದರು.

7. ಸಂಸ್ಕೃತದಲ್ಲಿ ಅಪಾರ ಪಾಂಡಿತ್ಯಹೊಂದಿದ್ದ ಅವರು ವ್ಯಾಸಕೂಟಕ್ಕೆ ಕೊಟ್ಟ ಪ್ರಾಮುಖ್ಯತೆಯನ್ನು ದಾಸಕೂಟಕ್ಕೂ ನೀಡಿ, ವ್ಯಾಸಕೂಟ ಮತ್ತು ದಾಸಕೂಟ ಇವೆರಡನ್ನು ಸಮಾನವಾಗಿ ಬೆಳೆಸಿದರು.

8. ಪ್ರಾಮಾಣಿಕ ಭಕ್ತರಾಗಿ ತಮ್ಮ ದೋಷಗಳನ್ನು ನಿಸ್ಸಂಕೋಚವಾಗಿ ಹಳಿದುಕೊಳ್ಳುತ್ತ ತಮ್ಮ ಆತ್ಮಶೋಧನೆ ಮಾಡಿಕೊಂಡು ಭಗವಂತನ ಒಲುಮೆಗಾಗಿ ಹಾತೊರೆದರು. ಕೆಲವೊಮ್ಮೆ ಇದು ಕೇವಲ ಭಕ್ತನ ಹಂಬಲ ಮಾತ್ರವಾಗಿರದೆ ಇಡೀ ಮಾನವ ಸಮುದಾಯದ ಹಂಬಲವಾಗಿ ತೋರಿ ಬರುತ್ತದೆ. ಲೌಕಿಕ ಸಂಗತಿಗಳಿಗೂ ಆಧ್ಯಾತ್ಮಿಕ ಲೇಪನ ನೀಡಿರುವುದು, ಇವರ ಕೃತಿಗಳ ವೈಶಿಷ್ಟ್ಯ.

9. ಯತಿಗಳಾಗಿ ಅನೇಕ ಕಟ್ಟುಪಾಡಿನ ಜೀವನ ನಡೆಸಬೇಕಾಗಿದ್ದ ಇವರಿಗೆ ಸಮಾಜವನ್ನು ತೆರೆದ ಕಣ್ಣಿನಿಂದ ನೋಡಲು ಸಾಧ್ಯವಾಗದೆ ಹೋದರೂ ತಮ್ಮದೇ ಮಿತಿಯಲ್ಲಿ ಸಮಾಜವನ್ನು ಕಂಡಿದ್ದಾರೆ. ಮನುಷ್ಯನ ಹೀನಗುಣಗಳಾದ ದ್ವೇಷ, ಅಸೂಯೆ, ಕೋಪ, ಮೋಸ, ಬೂಟಾಟಿಕೆಗಳಂತಹ ಹೀನ ಗುಣಗಳನ್ನು ಹಳಿಯುತ್ತ ಒಳ್ಳೆಯದು ಯಾವುದು, ಕೆಟ್ಟದ್ದು ಯಾವುದು, ಎಂಬುದನ್ನು ಚರ್ಚಿಸಿ ಸನ್ಮಾರ್ಗದಲ್ಲಿ ನಡೆಯಬೇಕೆಂದು ಅಮೂಲ್ಯ ಸಂದೇಶವನ್ನು ಜನತೆಗೆ ನೀಡಿದ್ದಾರೆ.

ಹೀಗೆ ಹರಿದಾಸ ಸಾಹಿತ್ಯದ ಉಗಮ ಮತ್ತು ಬೆಳವಣಿಗೆಗೆ ಶ್ರಮಿಸುವಲ್ಲಿ ಮಾಧ್ವಯತಿಗಳ ಪಾತ್ರ ಪ್ರಮುಖವಾದುದು. ಹರಿದಾಸ ಸಾಹಿತ್ಯ ಪ್ರಾರಂಭವಾದಂದಿನಿಂದ ಅದರ ವಿವಿಧ ಘಟ್ಟಗಳಲ್ಲಿ ತಾವು ಕನ್ನಡದಲ್ಲಿ ಸ್ವತಃ ಕೀರ್ತನೆಗಳನ್ನು ರಚಿಸುವುದರೊಂದಿಗೆ ಇತರ ದಾಸರಿಗೂ ಹರಿದಾಸ ದೀಕ್ಷೆ ಅಂಕಿತಗಳನ್ನು ನೀಡಿ, ಪ್ರೇರಣೆ, ಪ್ರೋತ್ಸಾಹ ನೀಡಿದರು. ಮಾಧ್ವಯತಿಗಳ ಈ ಕನ್ನಡ ಸೇವೆ ಸ್ಮರಣೀಯವಾಗಿದೆ.

## ಅನುಬಂಧ–೧

### ಶ್ರೀರಾಘವೇಂದ್ರತೀರ್ಥ ವಿರಚಿತ ವಾಯುದೇವರ ಅವತಾರತ್ರಯ ಸುಳಾದಿ

ರಾಜಾ ಎಸ್. ಗುರುರಾಜಾಚಾರ್ಯರು ಮತ್ತು ಡಾ. ಪ್ರಭಂಜನಾಚಾರ್ಯ ಅವರುಗಳು ಈ ಕೃತಿಯನ್ನು ರಾಘವೇಂದ್ರ ತೀರ್ಥರದ್ದೇ ಇರಬಹುದು ಎಂದು ಅಭಿಪ್ರಾಯಪಟ್ಟಿರುತ್ತಾರೆ.*

ತಾಳ – ಧ್ರುವ

ಮರು ನಿನ್ನಯ ಮಹಿಮೆ ಪರಿಪರಿಯಂದ ತಿಳಿದು
ಚರಿಸಿದ ಮನುಜನಿಗೆ ದುರಿತಭಾದೆಗಳ್ಯಾಕೆ।
ಸರಸಿಜಾಸನಸಮ ಸಿರಿದೇವಿ ಗುರುವೆಂದು।
ಪರಿತತ್ತ್ವಹರಿಯೆನುತ ನಿರುತ ವಂದಿಸಿ ಅಖಿಲ।
ಭರಿತನಾಗಿಪ್ಪೆ ಜಗದಿ ಅರಸಿ ಭಾರತಿ ಸಹಿತ।
ಹೊರಗಿದ್ದ ನವಾರ್ಣವದೊಳಗೆ ಜೀವರ ಜೀಜ।
ಸರಿಬಂದ ವ್ಯಾಪಾರದಿ ಆಡಿಸುವೆ ಜಡಜೀವರನು।
ಪುರಹರ ಮೊದಲಾಗಿ ತೃಣಜೀವ ಕಡೆಯಾಗಿ।
ಅರಿಯರು ಒಂದು ಕಾರ್ಯ ಗುರುವೆ ನಿನ್ನ ಹೊರತು।
ಹೊರಗೆ ಗೊಂಬೆಗಳ ತೋರಿ ಒಳಗೆ ಥರಥರದಿ ನೀನು।
ಇರುವೆ ಸರ್ವರಿಗೆ ಆಧಾರರೂಪದಿ ಅತಿ।
ಸ್ಥಿರ ಭಕುತಿಯಿಂದ ಹರಿಯ ಧೇನಿಸುತ।
ಮಿರುಗುವ ಪ್ರಭೆ ನಿನ್ನದು ವದರುವ ಧ್ವನಿ ನಿನ್ನದು।
ಬರುವ ಹೋಗುವ ವ್ಯಾಪಾರ ನಿನ್ನದು ದೇವ।
ಭರದಿ ಶರಧಿಶಯನ ಸಿರಿ ವೇಣುಗೋಪಾಲರೇಯ।
ಪರಮ ಹರುಷದಿ ಲೀಲಾ ತೋರುವ ನಿನ್ನೊಳಗಿದ್ದು॥

ತಾಳ – ಮಠ್ಯ

ಅಖಿಲಾಗಮವೇದ್ಯ ಅಖಿಲಾಗಮಸ್ತುತ್ಯ।
ಅಖಿಲಾಗಮ ನಿಗಮ ವ್ಯಾಪುತ ದೇವನೆ।
ಅಖಿಲರೊಳಗೆ ನಿಂದು ಸಕಲ ಕಾರ್ಯಗಳೆಲ್ಲ।
ಅಕುಟಿಲ ನೀನಾಗಿ ಮಾಡಿಸಿ ಮೋದದಿಂದ।

* 'ರಾಘವೇಂದ್ರ ದರ್ಶನ', ಡಾ. ಪ್ರಭಂಜನಾಚಾರ್ಯ, ವ್ಯಾಸಮಧ್ವ ಸಂಶೋಧನ ಪ್ರತಿಷ್ಠಾನ (ರಿ.), ೬೭, ೫೦ ಅಡಿರಸ್ತೆ, ಹನುಮಂತನಗರ, ಬೆಂಗಳೂರು. ೨೦೦೫ (ನಾಲ್ಕನೇ ಮುದ್ರಣ)

ಯುಕುತಿಯಿಂದ ಜಗವ ಅತಿಶಯವ ತಿಳಿದು ।
ಲಕುಮಿಯನು ನೀನು ಕಾಣುವೆ ಸರ್ವದಾ ।
ಭಕುತರೊಳಗೆ ನಿನ್ನ ತುತಿಸಬಲ್ಲವರಾರು ।
ಭಕುತಿಗಭಿಮಾನಿ ಭಾರತಿಗಳವಲ್ಲ ।
ಭ್ರುಕುಟವಂದಿತ ನೀನು ವೇಣುಗೋಪಾಲನ ।
ಪ್ರಕಟದಿ ಬಲ್ಲದ್ದು ಅರಿಯರು ಉಳಿದದ್ದು ॥

ತಾಳ – ತ್ರಿಪುಟ

ಪೃಥ್ವಿ ಶಬ್ದಾದಿ ಭೂತಮಾತ್ರಾ ಪರಮಾಣುಗಳಲ್ಲಿ ।
ಪ್ರತಿ ಪ್ರತಿ ರೂಪನಾಗಿ ಇರುತಿಪ್ಪೆ ಮಡದಿ ಸಹಿತ ಪ್ರಾ – ।
ಕೃತವಿಡಿದು ಸಕಲವ್ಯಾಪ್ತ ತಾತ್ತ್ವಿಕರಲ್ಲಿ ವ್ಯಾಪಾರ ।
ನಿನ್ನದಯ್ಯ ಲೋಕವಂದಿತ ದೇವ ।
ಶಾತಕುಂಭಾದಿಯಿಂದ ಬೊಮ್ಮಾಂಡ ।
ವು ತಾಳ ನಿನಗೆ ಎಣೆಯೆನುತ ತೋರುವುದಯ್ಯ ಶ್ರೀ– ।
ಕಾಂತನಾವ ಸಿರಿವೇಣುಗೋಪಾಲನು ।
ಪ್ರೀತಿಯಿಂದಲಿ ನಿನಗೆ ಒಲಿದ ಅಧಿಕನಾಗಿ ॥

ತಾಳ – ಅಟ್ಟ

ಇರುತಿ ಜಗದಾಧಾರಕನಾಗಿ ।
ಇರುತಿದ್ದು ಧಾರುಣಿಯೊಳಗೆ ।
ಮೂರು ಅವತಾರಗಳ ಧರಿಸಿ ।
ಕ್ರೂರರ ಸದೆದೆದ್ದು ಮೀರಿದ ಕಾರ್ಯವೆ ।
ಮೇರು ನುಂಗುವನಿಗೆ ಒಂದು ಚೂರು ನುಂಗಲು ।
ಶೂರತನವು ಏನೋ ಆರು ಬಣ್ಣಿಪರೋ ವಿ ।
ಚಾರಿಸಿ ನಿನ್ನನ್ನು ನಾರಾಯಣ ಕೃಷ್ಣವೇಣುಗೋಪಾಲನಾ– ।
ಧಾರದಿಂದಲಿ ಸೇವೆ ಬಾರಿ ಬಾರಿಗೆ ಮಾಳ್ಪೆ ॥

ತಾಳ – ಆದಿ

ಒಂದು ಅವತಾರದಲಿ ಕೊಂದೆ ರಕ್ಕಸರ ಮ– ।
ತ್ತೊಂದು ಅವತಾರದಿ ಅಸುರವೃಂದ ಘಾತಿಸಿದೆ ।
ನಂದತೀರಥ ರೂಪದಿಂದ ಸಕಲರಂದ ವಚನಗಳ ಕಡಿದು ।
ನಂದದಲ್ಲಿ ಮೆರೆದೆ ತಂದೆ ಈ ಕೃತಿಗಳು ನಿನ್ನಿಂ– ।
ದಾದದ್ದು ನೋಡಿ ಮಂದರೋದ್ಧಾರ ಸುಖಿಸುವ ಸಪುತ ದ್ವೀಪ ।
ಸಿಂಧು ಸಪುತ ಏಕದಿಂದ ಹಾರುವನು ।
ಮುಂದಿದ್ದ ಕಾಲುವೆಯ ನಿಂದು ನಿಂದು ತಾ ದಾಟಿದಂತೆ ।

ಮಂದಮತಿಗಳ ಮನಕೆ ಏನೆಂದೆ ಎಲೊ ದೇವ।
ಸುಂದರಾಂಗನೆ ಸುಖದಿಂದ ಪೂರಿತ ವಾಯು–।
ನಂದನ ಹನುಮ ರಾಮನಿಂದಾಲಿಂಗನವ ಪಡೆದೆ।
ಬಂದು ವಂದಿಸಿದೆ ಗೋಪೀಕಂದಗೆ ಭೀಮ।
ನಂದಮೂರುತಿ ವ್ಯಾಸನಿಂದ ತತ್ತ್ವಗಳೆಲ್ಲ।
ಅಂದದಿ ಓದುವ ಅಮರೇಂದ್ರವಂದಿತ ಮಧ್ವ।
ತಂದೆ ಎನ್ನ ಬಿನ್ನಹ ಒಂದು ಲಾಲಿಸುವುದು।
ಪೊಂದಿ ಭೂಪತಿಯ ಮನದಿಚ್ಛೆ ಬೇಡಿದಂತೆ।
ಇಂದು ಬೇಡುವೆ ಮನದಿಂದ ವಂದನೆ ಮಾಡುವೆ।
ಕುಂದದೆ ಎನ್ನೊಳಿಪ್ಪ ಮಂದಮತಿ ಕಳೆವಾದೆಂದು।
ಇಂದೀವರಾಕ್ಷ ಹೃದಯ ಮಂದಿರದೊಳು ನಿನ್ನ।
ಅಂದವಾದ ರೂಪ ಇಂದು ತೋರುವುದೆನಗೆ।
ಸಿಂಧುಶಯನ ಸಿರಿವೇಣುಗೋಪಾಲನು।
ನಿಂದು ನಿನ್ನೊಳು ಲೀಲಾ ಒಂದೊಂದು ಮಾಳ್ಪ ಚಿತ್ರ॥

ತಾಳ – ಜತೆ

ಪವನ ನಿನ್ನಯ ಪಾದ ಪೊಂದಿದ ಮನುಜನು।
ಜನವ ಪುರಕ್ಕೆ ಸಲ್ಲ ವೇಣುಗೋಪಾಲ ಸಲ್ಲ।

## ಅನುಬಂಧ-೨

## ವಾದೀಂದ್ರ ವಿರಚಿತ ಎರಡು ಕೃತಿಗಳು

**ಶ್ರೀವಾದೀಂದ್ರತೀರ್ಥರು (೧೭೨೮-೧೭೫೦)**

ಮಂತ್ರಾಲಯ ರಾಯರ ಮಠದ ಯತಿಗಳಾದ ಶ್ರೀವಾದೀಂದ್ರತೀರ್ಥರು ರಾಘವೇಂದ್ರಗುರುಗಳ ಪೂರ್ವಾಶ್ರಮದ ಮರಿಮಕ್ಕಳು. ಇವರು ಯತ್ಯಾಶ್ರಮ ಸ್ವೀಕರಿಸಿ ಆಡಳಿತ ವಹಿಸಿಕೊಂಡಾಗ ರಾಜಕೀಯ ಅಸ್ಥಿರತೆ ಉಂಟಾಗಿ ಮಠದ ಆಸ್ತಿಗೆ ಧಕ್ಕೆಯುಂಟಾಯಿತು. ಈ ಆಡಳಿತಾತ್ಮಕ ವಿಪತ್ತುಗಳನ್ನು ಜಾಣ್ಮೆಯಿಂದ ವಾದೀಂದ್ರತೀರ್ಥರು ಪರಿಹರಿಸಿದರು. ಸಂಸ್ಕೃತ ಮತ್ತು ಕನ್ನಡದ ಜ್ಞಾನ ಹೊಂದಿದ್ದ ಇವರು 'ತತ್ವ ಪ್ರಕಾಶಿಕಾ' ಮತ್ತು 'ತತ್ವೋದ್ಯೋತ' ಇವುಗಳಿಗೆ ಟಿಪ್ಪಣಿ ರಚಿಸಿದ್ದಾರೆ. ಭೂಗೋಳ, ಖಗೋಳ ವಿಚಾರ ಎಂಬುದು ಇವರ ವಿಶಿಷ್ಟ ಗ್ರಂಥ. ಇವರು ಕನ್ನಡದಲ್ಲಿ ಹಲವು ಕೃತಿಗಳನ್ನು ರಚಿಸಿದ್ದಾರೆಂದು ಡಾ. ಶ್ರೀನಿವಾಸ ಹಾವನೂರ ಅವರು ಅಭಿಪ್ರಾಯ ಪಡುತ್ತಾರೆ. ಆದರೆ ಈಗ ಅವರ ಎರಡು ಕೃತಿಗಳು ಮಾತ್ರ ಲಭ್ಯವಿದೆ.

ವಾದೀಂದ್ರರ ಕೃತಿ – ೧

ಮುನ್ನೇನು ಸುಕೃತವ ಮುದದಿ ರಚಿಸಿದೆನೋ
ನಿನ್ನನರ್ಚಿಸಲಾದೆನೋ ಪ

ಸನ್ನುತ ಶುಭಗುಣಸಂದೋಹ ರಘುಕುಲ
ರನ್ನ ಮಹಿತ ಮೂಲರಾಮಚಂದ್ರನೆ ನಾನು ಅ.ಪ.

ಗಂಗಾದಿ ಶುಭ ತೀರ್ಥಗಳು ಮರತಾರು ತಿಂಗಳು ಧರಿಸಿದೆನೋ
ಮಂಗಳವನು ನಮಗೆ ಮನ್ನಿಸಿಕೊಡುವ ಶ್ರೀರಂಗಾದಿಗಳಲ್ಲಿದ್ದೆನೋ
ಶೃಂಗಾರನಿಧಿಯಾದ ಸಿರಿದೇವಿಯರಸ ನಿಮ್ಮಂಗವ ಭಜಿಸಿದ್ದೆನೋ
ಹಿಂಗದ ಹರಿಗುರು ಹಿರಿಯರ ಪದಾಂಭೋಜ

* 'ಹರಿದಾಸರು ಸ್ತುತಿಸಿದ ಮಂತ್ರಾಲಯ ಮಠದ ಯತಿವರೇಣ್ಯರು' ಸಂ. ಡಾ. ಶ್ರೀನಿವಾಸ ಹಾವನೂರ, ಹಾವನೂರು, ಶ್ರೀವಾದಿರಾಜ ಮೃತ್ತಿಕಾ ಬೃಂದಾವನ ಮಠ ಮತ್ತು ಶ್ರೀಕನಕ ಸಾಹಿತ್ಯ ಪ್ರತಿಷ್ಠಾನ, ಬೆಂಗಳೂರು. ೨೦೦೨

ಸಂಗತಿಯನು ಬಲು ಸಂಪಾದಿಸಿದ್ದೆನೋ ಹ್ಯಾಗೋ

ಪರಿಪರಿಯಲಿ ಬಂದ ಪಾತ್ರರಲ್ಲುಚಿತವ
ನರಿತು ವಾಂಛಿತವಿತ್ತೆನೊ
ಪೆರಿಮೆಯಿಲ್ಲದೆ ವಾಜಪೇಯಾದಿ ಮಖದಿಂದ
ಧರೆಯಲಿ ಯಜಿಸಿದ್ದೆನೋ
ಹರಿಕಥೆಗಳ ಕೇಳಿ ಹಸನಾಗಿ ಮನದಲ್ಲಿ ಧರಿಸಿ ಹರುಷದಲ್ಲಿದ್ದೆನೋ
ವರ ತಪೋವನದಲಿ ವರ್ತಿಸಿ ಹೃದಯದಲಿ
ಚಿರಕಾಲದಿ ನಿನ್ನ ಚಿಂತಿಸಿದ್ದೆನೋ ಹ್ಯಾಗೋ

ಆ ದೇಶಿಕಾಶ್ರಮದಾರ್ಯೋದಿತಮತ ಭೇದವನರಿತಿದ್ದೆನೋ
ವೇದಮೂರುತಿ ರಾಘವೇಂದ್ರದೇಶಿಕರ ಶ್ರೀಪಾದವನ ಪಿಡಿದಿದ್ದೆನೋ
ಉದಾರ ಗುರು ಉಪೇಂದ್ರ ಉತ್ತಮ ಗುಣವುಳ್ಳ
ಮೋದವ ಪಡೆದಿದ್ದೆನೋ
ವಾದೀಂದ್ರ ಯತಿಕುಲವರಿಯನಾಳುವ ನಿಮ್ಮ
ಸಾದರ ಭಜನೆಯ ಸಾಧಿಸಿದ್ದೆನೋ ಹ್ಯಾಗೋ

ಕೀರ್ತನೆ – ೨

ಮೂಲರಾಮನ ದಿವ್ಯಮೂರುತಿ ಅರ್ಚಿಸಲೆನ್ನ
ಮೇಲುಮೇಲೆಂಬೆನಯ್ಯ
ಶೀಲದಿಂದಿಳೆಯಲ್ಲಿ ಶಿವನೆ ಪೂಜಿಸಿಪೂರ್ವ ಶಿಷ್ಟಾರ್ಚನೆಮಾಡುವ
ಚಲುವ ಪ

ಆದಿಯಲಿ ಅಜನಾಜ್ಞೆಯಿಂದ ದೇವರ ಬಡಿಗ್ಯಾ ಅದರದಿನಿರ್ಮಿಸಿದ
ವೇದಗರ್ಭನು ತನ್ನ ಗೇಹದಲ್ಲಿ ಭಕುತಿಯೋಗದಿಂದರ್ಚಿಸಿದ
ಮೋದದಿಂದಿಕ್ಷ್ವಾಕು ರಾಯ ಸಂತೋಷದಿಂ ವಲಿಸಿದ
ಮೇದಿನೀಪತಿಗಳಲ್ಲಮಿತ ವೈಭವದಿಂದ ಮೆರೆದ ಸಂತೋಷದಿಂದ
ಚಲುವ

ದಾಶರಥಿ ಜಾಂಬುವಂತಗೆ ಹರುಷದಿ ಕೊಡಲು। ದಾಸನೆಂದವನ
ಪೊರೆದ
ಕೋಶದೊಳ್ಗಜಪತಿಗಳ ನರಸಿ ನರಹರಿಮುನಿ ಕೊಂಡುಬರಲಂದು
ಮೆರೆದ
ದೇಶಿಕಾನಂದತೀರ್ಥಾರ್ಯರರ್ಚಿಸಿ ತಮ್ಮ ದೇವರೆಂದಾಗ ಕರೆದ
ಈತನೆಂದಿವನ ಕುಲವಂತ (ಕರಿಚಿಸಿಲವರಾ?)

ಛೇಷ್ಟೆಗಳ ತರಿದುಸುರಿದಾ ಚಲುವ

ವನುತ ವಿಬುಧೇಂದ್ರವಂಶಾಬ್ದಿ ಪೂರ್ಣವಿದುಬಿಂಬುನೆನಿಸುತಿರುವ
ಮುನಿಕುಲೋತ್ತಮರಾಘವೇಂದ್ರರಿಷ್ಟಗಳನ್ನು ಮುದದಿಂದ
ವಿರಚಿಸುತಿಹ
ಅನುದಿನವು ಸನ್ನುತೋಪೇಂದ್ರರಾಯರ ಮತವನನುಸರಿಸಿ
ನಡೆಯುತಿರುವ
ಘನ್ನಭಕುತ ವಾದೀಂದ್ರಯತಿ ಮನೋರಥವನ್ನ ಘಟನೆಯನು
ಮಾಡುತಿರುವ ಚೆಲುವ*

## ಅನುಬಂಧ–೩

## ವರದೇಂದ್ರರ ತಂತ್ರಸಾರ

**ಶ್ರೀವರದೇಂದ್ರತೀರ್ಥರು (೧೭೬೧ – ೧೬೮೫)**

ಮಂತ್ರಾಲಯ ರಾಯರ ಮಠದ ಪರಂಪರೆಯಲ್ಲಿ ಯತಿಗಳಾಗಿದ್ದ ಶ್ರೀವರದೇಂದ್ರ ತೀರ್ಥರು ಸ್ವತಃ ಹರಿದಾಸರಾಗಿದ್ದು ಹರಿದಾಸರಿಗೆ ಮತ್ತು ಹರಿದಾಸ ಸಾಹಿತ್ಯಕ್ಕೆ ಪ್ರೋತ್ಸಾಹ ನೀಡಿದರು. ಹರಿದಾಸರಿಗಾಗಿ ವಿಶೇಷ ಸಮಾರಂಭಗಳನ್ನು ಏರ್ಪಡಿಸುವುದರ ಮೂಲಕ ಶ್ರೀಮಠದಲ್ಲಿ ಸಾಂಸ್ಕೃತಿಕ ವಾತಾವರಣವನ್ನು ಉಂಟುಮಾಡಿದರು. ಮಠದ ಸರ್ವಾಂಗೀಣ ಬೆಳವಣಿಗೆಗಾಗಿ ಶ್ರಮಿಸಿದರು. ಸತತ ಪ್ರವಾಸಗಳನ್ನು ಕೈಗೊಂಡು ದ್ವೈತತತ್ವ ಪ್ರಚಾರ ಮಾಡಿದರು. ವರದೇಂದ್ರರನ್ನು ಕುರಿತಂತೆ ಅನೇಕ ಹರಿದಾಸರು ಕನ್ನಡದಲ್ಲಿ ಸುಮಾರು ಮೂವತ್ತೈದಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ. ಸ್ವತಃ ವರದೇಂದ್ರತೀರ್ಥರು ದೇವರ ಪೂಜೆಯ ಪದ್ಧತಿಯನ್ನು ಕುರಿತು ಕನ್ನಡದಲ್ಲಿ 'ತಂತ್ರಸಾರ' ಎಂಬ ಸಣ್ಣ ಕೃತಿಯನ್ನು ರಚಿಸಿದ್ದಾರೆ.*

**ವರದೇಂದ್ರರ ತಂತ್ರಸಾರ**

ಪಾಹಿ ಪಂಕೇರುಹೇಕ್ಷಣ ಸರ್ವಕಾಮದ
ಪಾಹಿ ಪದ್ಮಾಲಯನಿಕೇತನ ಸದಾ ಪ
ಜಯತು ಚತುರಾನನಭವೇಂದ್ರಾದಿ ವಿನುತ
ಜಯತು ಚತುರಾನನ ರಮಾವಲ್ಲಭಾ
ಜಯತು ಸಂಪೂರ್ಣಚಿತ್ಸುಖಮುಖ ಸುಗುಣನಿಲಯ
ಜಯತು ಜನ್ಮಾದಿಕಾರಣ ದೋಷಹಾ

ಕಮಲಾಕ್ಷ ಪರಮ ಸಂಭ್ರಮದಿಂದ ಲಕುಮಿ ಕರಕಮಲದಿಂ
ಸೇವೆಗೊಳುತಿರಲು ಆಗ। ಅಮರನಿಕರಾರಾಧ್ಯ
ಕಮಲಾಸನನು ಬಂದು ನಮಿಸಿ ಬಿನ್ನೈಸಿದನು ತನ್ನ ಪಿತಗೆ

* 'ಹರಿದಾಸರು ಸ್ತುತಿಸಿದ ಮಂತ್ರಾಲಯ ಮಠದ ಯತಿವರೇಣ್ಯರು' ಸಂ. ಡಾ. ಶ್ರೀನಿವಾಸ ಹಾವನೂರ, ಹಾವನೂರು, ಶ್ರೀವಾದಿರಾಜ ಮೃತ್ತಿಕಾ ಬೃಂದಾವನ ಮಠ ಮತ್ತು ಶ್ರೀಕನಕ ಸಾಹಿತ್ಯ ಪ್ರತಿಷ್ಠಾನ, ಬೆಂಗಳೂರು. ೨೦೦೨

ಆವ ದೇವೋತ್ತಮನು ಆವಾವ ಗುಣಗಳಿಹವಾವಾವ ಶಬ್ದವಾಚ್ಯಾವರೀತಿ।
ಈ ವಿಚಾರವನು ಪೇಳೆನಲು ನಸುನಗುತ ರಾಜೀವಸಂಭವಗೆ ಇಂತೆಂದು ನುಡಿದಾ

ವನಜಸಂಭವ ಕೇಳು ನಾನೇ ಸರ್ವೋತ್ತಮನು ಯನಗನಂತಾನಂತ ಮಂಗಳಗುಣ।
ಪ್ರಣವವಾಚ್ಯನು ನಾನು ಅಷ್ಟವರ್ಣೋಪೇತ ಪ್ರಣವನದ ವಿಚಾರವನು ಪೇಳ್ವೆ ನಿನಗೆ

ಸಾದರದಿ ಕೇಳಿನ್ನು ಆಕಾರ ಉಕಾರ ಮಕಾರ ನಾದ ಬಿಂದೂ ಘೋಷ ಶಾಂತಾತಿಶಾಂತ।
ಈ ದಿವ್ಯ ವರ್ಣದಲಿ ವಿಶ್ವತೈಜಸಪ್ರಾಜ್ಞಮೋದಮಯ ತುರ್ಯಾತ್ಮ ಅಂತರಾತ

ಪರಮಾತ್ಮ ಜ್ಞಾನಾತ್ಮನೆಂಬಷ್ಟರೂಪದಿಂದಿರುತಿಹೆನು।
ವೇದಾದಿಯಲಿ ಸರ್ವದಾ ಪರಮ ಋಷಿಗಳು ಈ ಮಹಾಮಂತ್ರ ಜಪಿಸೆನ್ನ ಪುರವನೈದುವರು
ಸತ್ವರದಿಂದಲೀ

ವಾರಿರುಹಸಂಭವನೇ ಕೇಳಕಾರದಲಿ ಹದಿನಾರು ಅಚ್ಚುಗಳು ಜನಿಸಿದವು ಕ್ರಮದಿ
ಚಾರು, ಅಜ, ಆನಂದ ಇಂದ್ರೇಶ ಮೊದಲಾದ ಈರೆಂಟು ಮೂರ್ತಿಗಳು ವಿಶ್ವಜನಿತಾ

ಉಮ ನಾದ ಬಿಂದು ಘೋಷಗಳಿಂದ ಕಚಟತಪ ವಿಮಲವರ್ಗಗಳು
ಪವುಟ್ಟಿದವು ಐದು। ಕಮಲಸಂಭವ ಕೇಳು
ತೈಜಸ ಪ್ರಾಜ್ಞತುರ್ಯಾತ್ಮಾಂತರಾತ್ಮ ಮೂರ್ತಿಗಳಿಂದಲೀ

ಪಂಚವಿಂಶಂತಿರೂಪ ಅಭಿವ್ಯಕ್ತವಾದವು ವಿರಿಂಚಿ ಕೇಳ್
ಶಾಂತದಿಂ ಯರಲವಗಳೂ। ಸಂಚಿಂತಿಸುವುದು ಅತಿ
ಶಾಂತದಿಂ ಶಷಸಹಳ ಪಂಚಾಕ್ಷರಂಗಳು ಜನಿಸಿದವು ಇಲ್ಲಿ

ಪರಮಾತ್ಮ ಜ್ಞಾನಾತ್ಮರೂಪಾದಿಂದೊಭತ್ತು ನಿರುಪಮಸ್ವಮೂರ್ತಿಗಳು ಶೋಭಿಸಿದವು।
ಪರಮೇಷ್ಠಿ ನಾರಾಯಣಾಷ್ಟಾಕ್ಷರಾಮಂತ್ರ ಪೊರೆವೆ ನಿನಗಾನು ಸಾಂಗೋಪಾಂಗದಿಂ

ತಾರಗತ ಅಷ್ಟವರ್ಣಗಳಿಂದ ಓಂ ನಮೋ ನಾರಾಯಣಾಯ ಎಂಬೀ ಮಂತ್ರವು।
ಚಾರು ಅಷ್ಟಾರ್ಣ ತದ್ವಾಚ್ಯ ಮೂರ್ತಿಗಳುಂಟು ಸಾರ ವಿಶ್ವಾದಿ ಪ್ರಣವಸ್ಯ ಭಿನ್ನ

ಓಂ ಭೂಃ ಓಂ ಭುವಃ ಓಂ ಸುವಃ ಓಂ ಎಂಬ ಓಂಭೂರ್ಭುವಸ್ಸುವಃ ಈ ವ್ಯಾಹೃತೀ।
ಅಂಬುಜೋದ್ಭವ ಪ್ರಣವಾದಿ ನಾಲ್ವರ್ಣದಿಂದ ಸಂಭವಿಸಿತೀ ಮಂತ್ರ ಸುಲಭದಿಂದಾ

ತನಯ ಕೇಳೀ ಮಂತ್ರಗತ ನಾಲ್ಕು ರೂಪಗಳು ಅನಿರುದ್ಧ ಪ್ರದ್ಯುಮ್ನ ಸಂಕರ್ಷಣಾ।
ಅನಘ ಶ್ರೀ ವಾಸುದೇವನ ಮೂರ್ತಿಗಳನು ಚಿಂತನೆ ಮಾಡು ಈ ವ್ಯಾಹೃತಿಯಲಿ ಬಿಡದೇ

ನಿಗಮಾದಿ ಮೊದಲು ನಾಲ್ವರ್ಣದಿಂ ಓಂ ನಮೋ ಭಗವತೇ ವಾಸುದೇವಾಯ ಯಂಬ।
ಯುಗಳ ಆರಕ್ಷರಾತ್ಮಕ ಮಂತ್ರಪ್ರತಿಪಾದ್ಯನಾ ಭಗವದ್ರೂಪಗಳ ಪೇಳ್ವೆ ನಾ ನಿನಗೆ॥

ಕೇಶವ ನಾರಾಯಣನು ಮಾಧವನು ಗೋವಿಂದ ಕ್ಲೇಶನಾಶನ ವಿಷ್ಣು ಮಧುಸೂದನಾ।
ಶ್ರೀಶ ತ್ರಿವಿಕ್ರಮನು ವಾಮನ ಶ್ರೀಧರ ಹೃಷಿಕೇಶಾಂಬುರುಹನಾಭ ದಾಮೋದರಾ

ತ್ರಿತಯ ಆವರ್ತಿ ಅಷ್ಟಾರ್ಣದಿಂ ಮೂರು ವ್ಯಾಹೃತಿಯಿಂದ ದ್ವಿಷಡಕ್ಷರೆರಡರಿಂದ।
ಚತುರಾಸ್ಯ ಕೇಳು ಗಾಯತ್ರಿ ಉತ್ಪನ್ನವಾಯಿತು ಕೇಶವಾದಿ ಕೃಷ್ಣಾಂತರೂಪಾ

ವಿತತವಾದುದು ಪುರುಷಸೂಕ್ತ ಗಾಯತ್ರಿಯಿಮದತಿಶಯದಿ ಪುರುಷಸೂಕ್ತದಲಿ ವೇದ।
ತತಿಗಳುದಿಸಿದವು ನಿಗಮಾದಿ ಬ್ರಹ್ಮಸೂತ್ರ ಭಾರತ ಪಂಚರಾತ್ರಾದಿ ಆಗಮಗಳು

ಶತಕೋಟಿ ಮೂಲರಾಮಾಯಣ ಪುರಾಣಗಳು ಸ್ಮೃತಿಸಮೂಹಗಳು – ಪುರಾಣಗಳು।
ಇತರ ವೈದಿಕಸೂಕ್ತ ಶಬ್ದ (ವೇದೋಕ್ತ ಶಬ್ದ) ಜನಿಸಿದವು ಸಂತತವಾಚ್ಯ ನಾನೇ ಸಂದೇಹವಿಲ್ಲ

ಉದಯಿಸುವ ರವಿಯವೋಲ್ಕಾಂತಿ ಜ್ಞಾನಾನಂದ ಮೊದಲಾದ ದಿವ್ಯ ಗುಣಮಯ ಶರೀರಾ।
ಸುದರುಶನದರಗದಾಂಬುಜಗಳಾಯುಧವೆನಗೆ ತ್ರಿದಶಗುಣಮಯನು ಸರ್ವೇಶ ನಾನು

ಈ ದಿಶೆಯನ್ನೆಲ್ಲ ಸೇವಿಪರು ಶ್ರೀ ಭೂದೇವಿ ಕೃದ್ಧೋಲ್ಕ ವಿಶ್ವಕೇಶವ ವಾತ್ಸ್ಯಾದಿ।
ಮದ್ರೂಪಗಣಮಧ್ಯಗನು ನಾನು ಬ್ರಹ್ಮ ಫಣಿಪಾದ್ಯ ರತಿಭಕ್ತಿ ಸೇವ್ಯನು ಸಮರ್ಥ

ಅರಿದರವರಾಭಯಾಂಕಿತ, ಚತುರ್ಭುಜನು ನಾಲ್ಕೆರಡು ರೂಪಂಗಳು ಪ್ರದೀಫವರ್ಣ।
ಸರುವಾಭರಣಭೂಷಿತವಾದ ಮದ್ರೂಪ ನಿರುತಮೇಯವು ಮುಮುಕ್ಷುಗಳಿಂದಲಿ

ತಾರ ನಾರಾಯಣಾಷ್ಟಾಕ್ಷರವು ವ್ಯಾಹೃತಿಯು ಈರಾರುವರ್ಣ ಗಾಯತ್ರಿಮಂತ್ರ।
ಸಾರಮಾತೃ ಪುರುಷಸೂಕ್ತ ವೈಷ್ಣವಗಳಿವು ನೀರಜಾಸನ ಕೇಳು ಮಹಾಮಂತ್ರವು

ಸೀತಾರಮಣ ಮೂಲರಾಮನುತಿಹರುಷದಿ ವಿಧಾತಗುಪ್ರದೇಶಿಸಿದ ಈ ತೆರದಲಿ ।

ಪ್ರೀತಿಯಿಂದಲಿ
ನಿರಂತರದಲಿದ ಪಠಿಸೆ ಶೇಷಾತಪತ್ರನು ಕಾಮಿತಾರ್ಥವೀವ (ಪ್ರೀತಿಯಿಂದಲಿ ದ್ವಾದಶಾವರ್ತಿ ಪಡಿಸಲು ವಿಧಾತಪಿತನು ಕಾಮಿತಾರ್ಥವೀವ)

ಭಾಗ್ಯವಾಟದ ರಂಗನೊಲಿದ ಶ್ರೀನರಸಿಂಹ ಭಾಗವತರಣುಗ ಜಗನ್ನಾಥದಾಸ।
ಬಾಗಿ ವಿಜ್ಞಾಪಿಸಲು ಕೈಕೊಂಡು ಪರಮಾನುರಾಗದಲಿ ಪೇಳಿದವು ತಂತ್ರಸಾರ

ಕರುಣಾಬ್ಧಿ ವಸುಧೇಂದ್ರರಾಯರ ಕೃಪಾಬಲದಿ ವಿರಚಿಸಿದೆವೀ ಗ್ರಂಥ ಪದರೂಪದಿ।
ಅರಸಿಕನು ನಿಂದಿಸಲು ಕುಂದಾವುದಿದಕೆ ಭಾಸ್ಕರನುದಯ ಘೂಕ ದೂಷಿಸಿದ ತೆರದಿ

ಧರ್ಮಾರ್ಥಕಾಮಮೋಕ್ಷಗಳೀವ ಗ್ರಂಥವಿದು ನಿರ್ಮಾಣ ಮಾಡಿಸಿದ ರಾಮಚಂದ್ರ।
ಹೇಮಗರ್ಭಗೆ (ಭರ್ಮಗರ್ಭಗೆ) ಒಲಿದು ಪೇಳಿದ ಮಾಹಮಂತ್ರ ಮರ್ಮಗಳನರಿತು

ಭಜಿಸುವನೆ ಧನ್ಯ

ವರೇಂದ್ರಮುನಿರಚಿತ ಈ ತಂತ್ರಸಾರವನು ಬರೆದೋದಿ ಕೇಳಿ ಮೋದಿಸುವ ಜನರ।
ವರಮೂಲರಾಮವೇದವ್ಯಾಸರಿಹಪರದಿ ಕರುಣಿಪರು ಬೇಡಿದಿಷ್ಟಾರ್ಥಗಳನು

ಮಂಗಳಂ ರಮಾಪತಿಗೆ ಮಂಗಳಂ ದ್ರುಹಿಣಪಿತಗೆ ಮಂಗಳಂ ದಶಪ್ರಮತಿಮುನಿಮಾನ್ಯಗೆ।
ಮಂಗಳಂ ಶಿವೇಂದ್ರಾದಿ ಸುರನಿಕರಪೂಜ್ಯನಿಗೆ ಮಂಗಳಂ ಜಗದ್ವಿಲಕ್ಷಣರೂಪಗೆ

ಇಪ್ಪತ್ತರೊಂಭತ್ತು ಪದಗಳೆಂಬತಿಮಲ ಪುಷ್ಪಮಾಲಿಕೆ ಮೂಲರಾಮನಡಿಗೆ।
ಅರ್ಪಿಸಿದೇವೀ ಸುಮನಧಾಮವನುದಿನದಲ್ಲಿ ವಪ್ಪದಿಹದೇ ಬುಧರ ಮಸ್ತಕದಲಿ

# ಅನುಬಂಧ-೪

## ಸಂಕರ್ಷಣ ವಡೆಯರ ಒಂದು ಟಿಪ್ಪಣಿ

**ಶ್ರೀಸಂಕರ್ಷಣ ವಡೆಯರು (೧೮೧೦ – ೧೮೬೨)**

ಧಾರವಾಡದ ಶ್ರೀಮಂತ ಕುಟುಂಬದಲ್ಲಿ ಜನಿಸಿದ ಸಂಕರ್ಷಣ ವಡೆಯರ ಪೂರ್ವಾಶ್ರಮದ ನಾಮ ತಮಣ್ಣನಾಯಕ. ಇವರು ಮಹಾ ದೈವಭಕ್ತರಾಗಿದ್ದರು. ಸಂಸಾರದಲ್ಲಿ ವೈರಾಗ್ಯಹೊಂದಿ ಉಡುಪಿಗೆ ಬಂದರು. ಅಲ್ಲಿ ಸೋದೆ ಮಠದ ವಿಶ್ವಪ್ರಿಯತೀರ್ಥರಲ್ಲಿ ಶಿಷ್ಯರಾಗಿ, ಮಧ್ವಾಚಾರ್ಯರ ಭಾಷ್ಯಾಧಿ ಮೂಲ ಗ್ರಂಥಗಳನ್ನು ಅಧ್ಯಯನ ಮಾಡಿದರು. ಉತ್ತರಾಧಿ ಮಠದ ಯತಿಗಳಾದ ಸತ್ಯಪರಾಯಣರ ಅಪೇಕ್ಷೆಯಂತೆ ತಮ್ಮ ಅಣ್ಣನಲ್ಲಿ ಉತ್ತರಾಧಿ ಮಠದವರು ವತ್ತೆಯಿಟ್ಟಿದ್ದ ಬಂಗಾರದ ಮಂಟಪ ಮತ್ತು ಗಂಗಾಳವನ್ನು ಮಠಕ್ಕೆ ಅರ್ಪಿಸಿ, ಅವರ ಅನುಗ್ರಹಕ್ಕೆ ಪಾತ್ರರಾದರು. ಮುಂದೆ ಉಡುಪಿಗೆ ಹೋಗಿ ಸನ್ಯಾಸಾಶ್ರಮ ಸ್ವೀಕರಿಸಿದ ಇವರು, ಆನಂತರ ಮತ್ತೆ ಶ್ರೀಸತ್ಯಪರಾಯಣ ಶ್ರೀಪಾದಂಗಳವರಲ್ಲಿಗೆ ಬಂದು ಯತ್ಯಾಶ್ರಮವನ್ನು ಬೇಡಿ 'ಸಂಕರ್ಷಣ ವಡೆಯರು' ಎಂಬ ನಾಮದೇಯದಿಂದ ಆಶ್ರಮವನ್ನು ಸ್ವೀಕರಿಸಿದರು. ತಿರುಪತಿ, ಘಟಿಕಾಚಲ, ರಾಮೇಶ್ವರ, ವೇಲೂರು ಹೀಗೆ ಅನೇಕ ತೀರ್ಥ ಕ್ಷೇತ್ರಗಳನ್ನು ಪ್ರವಾಸ ಮಾಡಿದರು. ಆರಣಿ ಹನುಮಂತರಾಯರು, ಶಾಮರಾಯರು, ಮಧ್ವರಾಯರು, ಆದ್ಯ ಶ್ರೀನಿವಾಸಾಚಾರ್ಯರು ಮೊದಲಾದ ಶಿಷ್ಯರನ್ನು ಹೊಂದಿದ್ದರು. ಹೀಗೆ ವೇದ ಶಾಸ್ತ್ರಗಳ ಅಧ್ಯಯನ, ಸಂಚಾರ, ತತ್ವಪ್ರಚಾರ, ಕೃತಿರಚನೆ, ಶಿಷ್ಯ ಸಂಪಾದನೆ ಈ ವಿಷಯಗಳಲ್ಲಿ ನಿರತರಾಗಿದ್ದರು. ಜಗನ್ನಾಥ ದಾಸರಿಂದ ರಚಿತವಾದ 'ಹರಿಕಥಾಮೃತಸಾರ'ಕ್ಕೆ ಕನ್ನಡದಲ್ಲಿ ವ್ಯಾಖ್ಯಾನ ರಚಿಸಿದರು. ಹರಿಕಥಾಮೃತ ಸಾರಕ್ಕೆ ಅನೇಕರು ವ್ಯಾಖ್ಯಾನ ರಚಿಸಿದ್ದರೂ ಸಂಕರ್ಷಣ ವಡೆಯರು ರಚಿಸಿದ ವ್ಯಾಖ್ಯಾನ ಹೆಚ್ಚು ಮಾನ್ಯವಾಗಿ ಜನಪ್ರಿಯತೆಯನ್ನು ಪಡೆಯಿತು.*

* 'ಪರಮಾರ್ಥ ಚಂದ್ರೋದಯ'

ಅಕ್ಟೋಬರ್ – ೧೯೬೬ರ ಸಂಚಿಕೆ

ಪುಟ – ೮

## ಅನುಬಂಧ–೫

## ವಿದ್ಯಾಕಾಂತರ ಒಂದು ಕೀರ್ತನೆ

**ಶ್ರೀವಿದ್ಯಾಕಾಂತತೀರ್ಥರು (೧೮೨೪)**

ಇವರು ವ್ಯಾಸರಾಜ ಮಠದ ಪರಂಪರೆಯಲ್ಲಿ ಬರುವ ಹದಿನಾರನೆಯ ಯತಿಗಳು. ಸ್ವತಃ ಹರಿದಾಸರಾಗಿದ್ದು, ದಾಸ ಸಾಹಿತ್ಯಕ್ಕೆ ಪ್ರೇರಣೆ ಪ್ರೋತ್ಸಾಹವನ್ನು ನೀಡಿದ ಮಹನೀಯರು. ಇವರು ಕನ್ನಡದಲ್ಲಿ ರಚಿಸಿರುವ ಒಂದೇ ಒಂದು ಕೀರ್ತನೆ ಲಭ್ಯವಿದೆ.*

ಕಾಪಾಡಬೇಕೆಂದು ಗೋಪಾಲ ಕೃಷ್ಣಗೆ
ನೀ ಪೇಳಬಾರದೆ ರುಕುಮಿಣಿ ನೀ ಪೇಳಬಾರದೆ ಸತ್ಯಭಾಮ ಪ

ಪಾಪ ಮಾಡುವನೆಂದು ಕೋಪ ಮಾಡಿದಿರೆಂದು
ನಾ ಪಾದಪದಮ ಶರಣೆಂಬೆ ತಾಯೆ

ನಿಮ್ಮ ನುಡಿಗಳಿಂದ ಸಮ್ಮತಿಸುವ ದೇವ
ಸುಮ್ಮನೆ ತಿಳಿಸೆನ್ನ ಹಡದಮ್ಮ ತಾಯೆ

ಏನೊ ಪೇಳಿದನೆಂದು ನೀನೂಪೇಕ್ಷಿಸದಲೆ
ಜಾನಕಿದೇವಿ ಪೇಳೆ ರಘೂಪತಿಗೆ ತಾಯೆ

ಪಾದ ನಂಬಿದವರಿಗೆ ಮೋದವ ಕೊಡುವಂಥ
ವೇದವ್ಯಾಸಗೆ ರಮೆ ತಿಳಿ ಹೇಳೆ ತಾಯೆ

ವಿದ್ಯಾಕಾಂತನ ಮನವಿದ್ದಂತೆ ಒಲಿಯುವ
ಸದ್ದಯಾನಿಧಿ ನಮ್ಮ ನರಸಿಂಹ ತಾಯೆ

* 'ಶ್ರೀ ವಿದ್ಯಾ ಪ್ರಸನ್ನತೀರ್ಥರು ಹಾಗೂ ಇತರ ಯತಿಗಳ ಕೀರ್ತನೆಗಳು',

ಸಂ. ಡಾ. ಅನಂತಪದ್ಮನಾಭರಾವ್

ಸಮಗ್ರ ದಾಸ ಸಾಹಿತ್ಯ, ಸಂಪುಟ – ೨೮

## ಅನುಬಂಧ–೬

## ಹರಿದಾಸ ಸಾಹಿತ್ಯಕ್ಕೆ ಸೇವೆ ಸಲ್ಲಿಸಿದ ಮಾಧ್ವ ಯತಿಗಳ ಗುರುಪರಂಪರೆ

ಶ್ರೀಪಾದರಾಜರಿಂದಲೇ ಹರಿದಾಸ ಸಾಹಿತ್ಯ ಪ್ರಾರಂಭಗೊಂಡು ನಂತರದಲ್ಲಿ ಶ್ರೀಪಾದರಾಜ ಮಠವೆಂದೇ ಪ್ರಸಿದ್ಧಿ ಪಡೆಯಿತು. ಇಂದಿಗೂ ಶ್ರೀಪಾದರಾಜಮಠ ಹರಿದಾಸ ಸಾಹಿತ್ಯದ ಪ್ರಮುಖ ಕೇಂದ್ರಗಳಲ್ಲಿ ಒಂದಾಗಿದೆ.

ಶ್ರೀಪಾದರಾಜ ಮಠದ ಹಿಂದಿನ ಪರಂಪರೆ

೧. ಶ್ರೀಮಧ್ವಾಚಾರ್ಯರು
ಶ್ರೀ ಪದ್ಮನಾಭತೀರ್ಥರು
೨. ಲಕ್ಷ್ಮೀಧರತೀರ್ಥರು
೩. ಸಂಕರ್ಷಣತೀರ್ಥರು
೪. ಪರಶುರಾಮತೀರ್ಥರು
೫. ಆದಿರಾಜ ತೀರ್ಥರು
೬. ಸತ್ಯವ್ರತತೀರ್ಥರು
೭. ಸ್ವರ್ಣವರ್ಣತೀರ್ಥರು
೮. ಶ್ರೀಪಾದರಾಜರು (೧೫೦೪)

## ಅನುಬಂಧ–೭

## ಶ್ರೀವ್ಯಾಸರಾಜ ಮಠದ ಹಿಂದಿನ ಪರಂಪರೆ

೧. ಶ್ರೀ ಮಧ್ವಾಚಾರ್ಯರು

೨. ಶ್ರೀಪದ್ಮನಾಭತೀರ್ಥರು

೩. ಶ್ರೀನರಹರಿತೀರ್ಥರು

೪. ಶ್ರೀಮಾಧವತೀರ್ಥರು

೫. ಶ್ರೀಅಕ್ಷೋಭ್ಯತೀರ್ಥರು

೬. ಶ್ರೀಜಯತೀರ್ಥರು

೭. ಶ್ರೀರಾಜೇಂದ್ರತೀರ್ಥರು

೮. ಶ್ರೀಜಯಧ್ವಜತೀರ್ಥರು

೯. ಶ್ರೀಪುರುಷೋತ್ತಮತೀರ್ಥರು

೧೦. ಶ್ರೀಬ್ರಹ್ಮಣ್ಯತೀರ್ಥರು

೧೧. **ಶ್ರೀವ್ಯಾಸತೀರ್ಥರು (೧೫೩೯)**

ವ್ಯಾಸರಾಜರ ನಂತರ ಈ ಮಠವು ವ್ಯಾಸರಾಜಮಠವೆಂದು ಪ್ರಸಿದ್ಧಿ ಪಡೆಯಿತು. ಹರಿದಾಸ ಸಾಹಿತ್ಯದ ಪ್ರಮುಖ ಕೇಂದ್ರವಾಯಿತು. ಪುರಂದರದಾಸರು, ಕನಕದಾಸರು, ವಿಜಯೀಂದ್ರತೀರ್ಥರು, ಮೊದಲಾದ ಶ್ರೇಷ್ಠ ಹರಿದಾಸರು, ಹರಿದಾಸ ಯತಿಗಳು ವ್ಯಾಸರಾಯರ ಶಿಷ್ಯತ್ವವನ್ನು ವಹಿಸಿದ್ದರು. ಇದೇ ಮಠದ ಪರಂಪರೆಯಲ್ಲಿ **ವಿದ್ಯಾಕಾಂತತೀರ್ಥರು** (೧೮೨೪), **ವಿದ್ಯಾರತ್ನಾಕರತೀರ್ಥರು** (೧೯೧೫), **ವಿದ್ಯಾಪ್ರಸನ್ನತೀರ್ಥರು** (೧೯೬೯) ಸ್ವತಃ ಹರಿದಾಸರಾಗಿದ್ದು, ದಾಸ ಸಾಹಿತ್ಯಕ್ಕೆ ಪ್ರೇರಣೆ, ಪ್ರೋತ್ಸಾಹ ನೀಡಿದರು.

## ಅನುಬಂಧ–೮

## ಶ್ರೀವಾದಿರಾಜ ಮಠದ ಯತಿ ಪರಂಪರೆ

ಮಧ್ವಾಚಾರ್ಯರ ಪೂರ್ವಾಶ್ರಮದ ತಮ್ಮಂದಿರು ಮತ್ತು ಶಿಷ್ಯರೂ ಆದ ಶ್ರೀ ವಿಷ್ಣುತೀರ್ಥರು ಸೋದೆ ಮಠದ ಮೊದಲ ಯತಿಗಳು. ಇವರಿಂದ ಹತ್ತೊಂಭತ್ತನೆಯವರು ವಾಗೀಶತೀರ್ಥರು. ಇವರ ಶಿಷ್ಯರೇ **ವಾದಿರಾಜರು** (೧೬೦೦) ವಾದಿರಾಜರ ನಂತರ ಸೋದೆ ಮಠವು ವಾದಿರಾಜ ಮಠವೆಂದೇ ಪ್ರಸಿದ್ಧಿ ಪಡೆಯಿತು. ಇದೇ ಮಠದ ಪರಂಪರೆಯಲ್ಲಿ ೩೩ನೆಯ ಯತಿಗಳು ವಿಶ್ವಾದೀಶತೀರ್ಥರು. ಇವರ ಶಿಷ್ಯರೇ **ವಿಶ್ವೇಂದ್ರತೀರ್ಥರು** (೧೯೩೪). ರಾಜೇಶ ಅಂಕಿತದಿಂದ ಕನ್ನಡದಲ್ಲಿ ಕೀರ್ತನೆಗಳನ್ನು ರಚಿಸಿದರು.

## ಅನುಬಂಧ–೯

### ಶ್ರೀರಾಘವೇಂದ್ರ ಮಠದ ಗುರು ಪರಂಪರೆ

೧. ಮಧ್ವಾಚಾರ್ಯರು

೨. ಜಯತೀರ್ಥರು

೩. ವಿದ್ಯಾಧಿರಾಜರು

೪. ಕವೀಂದ್ರತೀರ್ಥರು

೫. ವಾಗೀಶತೀರ್ಥರು

೬. ರಾಮಚಂದ್ರತೀರ್ಥರು

೭. ವಿಭುದೇಂದ್ರತೀರ್ಥರು

೮. ಜಿತಾಮಿತ್ರತೀರ್ಥರು

೯. ರಘುನಂದನತೀರ್ಥರು

೧೦. ಸುರೇಂದ್ರತೀರ್ಥರು

೧೧. **ವಿಜಯೀಂದ್ರತೀರ್ಥರು (೧೬೧೪)**

೧೨. ಸುಧೀಂದ್ರತೀರ್ಥರು

೧೩. **ರಾಘವೇಂದ್ರತೀರ್ಥರು (೧೬೭೧)**

೧೪. ಯೋಗೇಂದ್ರತೀರ್ಥರು

೧೫. ಸೂರೀಂದ್ರತೀರ್ಥರು

೧೬. ಸುಮತೀಂದ್ರತೀರ್ಥರು

೧೭. ಉಪೇಂದ್ರತೀರ್ಥರು

೧೮. **ವಾದೀಂದ್ರತೀರ್ಥರು (೧೭೫೦)**

೧೯. ವಸುದೇಂದ್ರತೀರ್ಥರು

೨೦. **ವರದೇಂದ್ರತೀರ್ಥರು (೧೭೮೫)**

೨೧. ಧೀರೇಂದ್ರತೀರ್ಥರು

೨೨. ಭುವನೇಂದ್ರತೀರ್ಥರು

೨೩. **ವ್ಯಾಸತತ್ವಜ್ಞರು (೧೬೦೦)**

## ಅನುಬಂಧ ೧೦.

## ಪರಾಮರ್ಶನ ಗ್ರಂಥಗಳು


೧. ಅನಂತ ಪದ್ಮನಾಭ ರಾವ್ — 'ಹತ್ತೊಂಬತ್ತನೇ ಶತಮಾನದ ಹರಿದಾಸ ಸಾಹಿತ್ಯ' ಸಿ.ವಿ.ಜಿ. ಪಬ್ಲಿಕೇಶನ್ಸ್, ಬೆಂಗಳೂರು. ಪ್ರ – ೨೦೦೨

೨. – " – — (ಸಂ.) 'ಶ್ರೀವಿದ್ಯಾಪ್ರಸನ್ನತೀರ್ಥರು ಹಾಗೂ ಇತರ ಯತಿಗಳ ಕೀರ್ತನೆಗಳು' ಸಮಗ್ರ ದಾಸ ಸಾಹಿತ್ಯ ಸಂಪುಟ – ೨೮ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು. ಪ್ರ – ೨೦೦೩

೩. ಅನಂತನಾರಾಯಣ ಎಸ್ — 'ಹೊಸಗನ್ನಡದ ಕವಿತೆಯ ಮೇಲೆ ಇಂಗ್ಲೀಷ್ ಕಾವ್ಯದ ಪ್ರಭಾವ' ಗಂಗಾತರಂಗ, ಸರಸ್ವತೀಪುರಂ ಮೈಸೂರು. ಪ್ರ – ೧೯೬೨

೪. ಅನಂತ ಕೃಷ್ಣಾಚಾರ್ಯ ಬಿ. — 'ಶ್ರೀ ವ್ಯಾಸಯೋಗಿ ಚರಿತೆ' ಸುಭೋದ ಪ್ರಕಟನಾಲಯ ಬೆಂಗಳೂರು. ಪ್ರ – ೧೯೩೯

೫. ಅಣ್ಣಿಗೇರಿ ಎಂ. ಎಂ — 'ಹರಿದಾಸ ಬೋಧೆ' ಚಾಲುಕ್ಯ ಪ್ರಕಾಶನ, ಧಾರವಾಡ. ಪ್ರ – ೧೯೫೬

೬. ಅರಳು ಮಲ್ಲಿಗೆ ಪಾರ್ಥಸಾರಥಿ — 'ಶ್ರೀ ಪಾದರಾಜ ಸಂಪುಟ' ರಾಘವೇಂದ್ರ ಪ್ರಕಾಶನ, ಬೆಂಗಳೂರು. ಪ್ರ – ೧೯೮೭

೭. – " – 'ಶ್ರೀ ವ್ಯಾಸರಾಜ ಸಂಪುಟ'
ಹರಿದಾಸ ಅಕಾಡೆಮಿ, ಚಾಮರಾಜಪೇಟೆ,
ಬೆಂಗಳೂರು. ಪ್ರ – ೧೯೯೮

೮. – " – 'ಶ್ರೀ ವಾದಿರಾಜ ಸಂಪುಟ'
ಹರಿದಾಸ ಅಕಾಡೆಮಿ, ಚಾಮರಾಜಪೇಟೆ,
ಬೆಂಗಳೂರು. ಪ್ರ – ೧೯೯೮

೯. ಆಲೂರು ವೆಂಕಟರಾವ್ 'ಶ್ರೀ ಮಧ್ವಾಚಾರ್ಯರ ಮೂಲ ಸಿದ್ಧಾಂತ'
ಜಿಜ್ಞಾಸ ಮಂಡಲದ ಗ್ರಂಥಮಾಲೆ,
ಧಾರವಾಡ. ಪ್ರ – ೧೯೪೬

೧೦. – " – 'ಮಧ್ವಾಚಾರ್ಯರ ಪೂರ್ಣ ಬ್ರಹ್ಮವಾದ'
ಕೃಷ್ಣ. ವೆಂ. ಆಲೂರು ಗೀತಾಭವನ,
ಸಾಧನಕೆರೆ, ಧಾರವಾಡ. ಪ್ರ – ೧೯೬೦

೧೧. – " – 'ಶ್ರೀಮುಖ್ಯಪ್ರಾಣ ಮಹಿಮೆ'
ಧಾರವಾಡ. ಪ್ರ – ೧೯೪೫

೧೨. ಎಚ್ಚೆಸ್ಕೆ (ಸಂ) 'ದಾಸ ಸಾಹಿತ್ಯ ದರ್ಶನ'
ಮಂಗಳ ಭಾರತಿ ಪ್ರಕಾಶನ,
ಮೈಸೂರು. ಪ್ರ – ೧೯೮೪

೧೩. ಕೃಷ್ಣದಾಸ ಮುರಗೋಡ (ಸಂ) 'ಭಜನ ಚಂದ್ರಿಕಾ'
ಕೃಷ್ಣದಾಸ, ಮುರಗೋಡ
ಗಂಗಾವತಿ. ಪ್ರ – ೧೯೪೫

೧೪. ಕಲಮದಾನಿ ಗುರುರಾಯರು 'ಹರಿದಾಸರ ಕಥೆಗಳು'
ಸಿಟಿಬುಕ್‌ಸ್ಟಾಲ್,
ಹುಬ್ಬಳ್ಳಿ. ಪ್ರ – ೧೯೫೯

೧೫. ಕೇಶವದಾಸರು ಬೇಲೂರು — 'ಶ್ರೀ ಹರಿದಾಸ ಸಾಹಿತ್ಯ'
ಗೀತಾ ಬುಕ್ ಹೌಸ್,
ಮೈಸೂರು. ಪ್ರ – ೧೯೬೦

೧೬. ಕೊರಟಿ ಶ್ರೀನಿವಾಸರಾವ್ — 'ದಾಸ ಸಾಹಿತ್ಯ ಪ್ರವರ್ತಕರು'
ಆನಂದ ನಿಲಯ ಪ್ರಕಾಶನ,
ಚಾಮರಾಜಪೇಟೆ,
ಬೆಂಗಳೂರು. ಪ್ರ – ೧೯೮೨

೧೭. – " – — 'ಶ್ರೀ ಶ್ರೀಪಾದರಾಜರು' (ಜೀವನ ಚರಿತ್ರೆ)
ಆನಂದ ನಿಲಯ ಪ್ರಕಾಶನ
ಚಾಮರಾಜಪೇಟೆ,
ಬೆಂಗಳೂರು. ಪ್ರ – ೧೯೮೩

೧೮. – " – — 'ಶ್ರೀ ವಾದಿರಾಜರು' (ಜೀವನ ಚರಿತ್ರೆ),
ಆನಂದ ನಿಲಯ ಪ್ರಕಾಶನ
ಚಾಮರಾಜಪೇಟೆ,
ಬೆಂಗಳೂರು. ಪ್ರ – ೧೯೮೩

೧೯. – " – — ಶ್ರೀ ವ್ಯಾಸರಾಯರು'(ಜೀವನ ಚರಿತ್ರೆ)
ಆನಂದ ನಿಲಯ ಪ್ರಕಾಶನ
ಚಾಮರಾಜಪೇಟೆ,
ಬೆಂಗಳೂರು. ಪ್ರ – ೧೯೮೩

೨೦. – " – — 'ಕರ್ನಾಟಕ ಭಕ್ತ ವಿಜಯ'
ಸುಬೋಧ ಪ್ರಕಟನಾಲಯ,
ಚಾಮರಾಜಪೇಟೆ,
ಬೆಂಗಳೂರು. ಪ್ರ – ೧೯೬೩

೨೧. ಕೃಷ್ಣರಾವ್ ಕೆ.ಎಂ. 'ದಾಸ ಸಾಹಿತ್ಯದಲ್ಲಿ ದ್ವೈತ ಪ್ರಮೇಯಗಳು'
ದ್ವೈತ ವೇದಾಂತ ಮತ್ತು
ಸಂಶೋಧನ ಪ್ರತಿಷ್ಠಾನ, ಕೃಷ್ಣರಾಜೇಂದ್ರ
ರಸ್ತೆ, ಬೆಂಗಳೂರು. ಪ್ರ – ೧೯೮೬

೨೨. – " – 'ಶ್ರೀ ಜಗನ್ನಾಥದಾಸರು'
ಉಷಾ ಸಾಹಿತ್ಯ ಮಾಲೆ,
ಮೈಸೂರು. ಪ್ರ – ೧೯೫೬

೨೩. ಗೋಕುಲನಾಥ ಕೆ. 'ಶ್ರೀ ವಿಜಯದಾಸರು'
ಸಿಂಧುಶಯನ ಪ್ರಕಾಶನ, ಪ್ರ – ೪೬೭,
ಐದನೇ ಬ್ಲಾಕ್, ರಾಜಾಜಿನಗರ,
ಬೆಂಗಳೂರು. ಪ್ರ – ೧೯೭೮

೨೪. – " – 'ಶ್ರೀ ವ್ಯಾಸರಾಯರು'
ಜೀವನ ಮತ್ತು ಕೃತಿಗಳ ಸಮೀಕ್ಷೆ
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ
ಹಂಪಿ. ಪ್ರ – ೨೦೦೨

೨೫. ಗೋಪಾಲ ಕೃಷ್ಣಯ್ಯ ಕೆ. ಎಲ್. 'ಕನ್ನಡ ಸಾಹಿತ್ಯದಲ್ಲಿ ಪುರಾಣಪ್ರಜ್ಞೆ'
ಕನ್ನಡ ಸಾಹಿತ್ಯ ಪರಿಷತ್ತು
ಪಂಪಮಹಾಕವಿ ರಸ್ತೆ,
ಚಾಮರಾಜಪೇಟೆ,
ಬೆಂಗಳೂರು. ಪ್ರ – ೧೯೯೪

೨೬. ಗೀತಾಚಾರ್ಯ 'ಹರಿದಾಸ ಸಾಹಿತ್ಯದ ಮೂರು ದಾರಿಗಳು"
ಪುಸ್ತಕ ಶಕ್ತಿ, ಬಸವನಗುಡಿ
ಬೆಂಗಳೂರು. ಪ್ರ – ೨೦೦೪

೨೭. ಜಯಸಿಂಹ 'ವೇಣಿ ಸೋಮಪುರದ ತಪಸ್ವಿ'
ಪರಿಮಳ ಪ್ರಕಾಶನ, ಶ್ರೀನಗರ
ಬೆಂಗಳೂರು. ಪ್ರ – ೧೯೯೭

೨೮. – " – 'ಶ್ರೀ ಪಾದರಾಜ ಗುರುಸಾರ್ವಭೌಮರು'
ಪರಿಮಳ ಪ್ರಕಾಶನ, ಶ್ರೀನಗರ
ಬೆಂಗಳೂರು. ಪ್ರ – ೨೦೦೫

೨೯. – " – 'ಶ್ರೀ ಬ್ರಹ್ಮಣ್ಯತೀರ್ಥ
ಗುರುಸಾರ್ವಭೌಮರು'
ಪರಿಮಳ ಪ್ರಕಾಶನ, ಶ್ರೀನಗರ
ಬೆಂಗಳೂರು. ಪ್ರ – ೨೦೦೫

೩೦. ಜಯತೀರ್ಥಾಚಾರ್ ಟಿ. ಎನ್. (ಸಂ) 'ಪ್ರಸನ್ನ ಸಾಹಿತ್ಯ ಸೌರಭ'
ಶ್ರೀ ವಿದ್ಯಾಪ್ರಸನ್ನತೀರ್ಥ ಸ್ಮಾರಕ ಸಮಿತಿ,
ಬೆಂಗಳೂರು. ಪ್ರ – ೨೦೦೨

೩೧. ಜಯತೀರ್ಥ ರಾಜಪುರೋಹಿತ 'ವ್ಯಾಸರಾಯರು'
ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ
ಪ್ರ – ೧೯೭೪

೩೨. ಧಾರವಾಡಕರ ರಾ.ಯ. 'ಹೊಸಗನ್ನಡ ಸಾಹಿತ್ಯದ ಉದಯಕಾಲ'
ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಢ. ಪ್ರ – ೧೯೭೫

೩೩. ದೇಶಿಕಾಚಾರ್ಯ ವ್ಹಿ. ಎನ್. 'ವ್ಯಾಸರಾಜ ಚರಿತ್ರೆ ಮತ್ತು ವಿಮರ್ಶೆ'
ಶ್ರೀ ಕುಂದಾಪುರ ವ್ಯಾಸರಾಯಮಠ,
ಹನುಮಂತನಗರ,
ಬೆಂಗಳೂರು. ಪ್ರ – ೧೯೭೧

೩೪. ದಿವಾಣಜಿ ವ.ಅ. — 'ಪ್ರಸಾದ ಯೋಗ'
ಉಷಾಸಾಹಿತ್ಯ ಮಾಲೆ,
ಮೈಸೂರು. ಪ್ರ – ೧೯೭೨

೩೫. ನಾಗರತ್ನ ಟಿ. ಎನ್. — 'ಹರಿದಾಸ ಭಕ್ತಿ ಸ್ವರೂಪ'
ಪ್ರಸಾರಾಂಗ ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು. ಪ್ರ – ೧೯೮೬

೩೬. – " – — (ಸಂ) 'ಶ್ರೀ ವಾದಿರಾಜರ ಧೀರ್ಘ
ಕೃತಿಗಳು'
ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾನಿಲಯ,
ಮೈಸೂರು. ಪ್ರ – ೧೯೮೭

೩೭. – " – — (ಸಂ) 'ಶ್ರೀ ವ್ಯಾಸರಾಯರ ಕೃತಿಗಳು'
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾನಿಲಯ,
ಪ್ರ – ೨೦೦೧

೩೮. – " – — 'ಶ್ರೀಪಾದರಾಜರು' ಜೀವನ ಮತ್ತು
ಕೃತಿಗಳು
ಪ್ರಸಾರಾಂಗ ಕನ್ನಡ ವಿಶ್ವವಿದ್ಯಾನಿಲಯ
ಹಂಪಿ. ಪ್ರ – ೨೦೦೪

೩೯. – " – — (ಸಂ.) 'ಶ್ರೀ ವಾದಿರಾಜರ ಕೀರ್ತನೆಗಳು'
ಸಮಗ್ರ ದಾಸ ಸಾಹಿತ್ಯ ಸಂಪುಟ ೨
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಬೆಂಗಳೂರು. ಪ್ರ – ೨೦೦೩

೪೦. – " – (ಸಂ.) 'ಶ್ರೀ ವಾದಿರಾಜರ ಕೃತಿಗಳು'
ಕನ್ನಡ ಅಧ್ಯಯನ ಸಂಸ್ಥೆ,
ಮೈಸೂರು ವಿಶ್ವವಿದ್ಯಾನಿಲಯ,
ಮೈಸೂರು. ಪ್ರ – ೧೯೮೦

೪೧. – " – (ಸಂ) 'ಹರಿದಾಸ ವಾಙ್ಮಯ'
ಗಾನಭಾರತಿ (ರಿ.), ಕುವೆಂಪುನಗರ
ಮೈಸೂರು. ಪ್ರ – ೧೯೮೫

೪೨. ಪಂಡರೀನಾಥಾಚಾರ್ಯ ಗಲಗಲಿ 'ಮಾಧ್ವ ವಾಙ್ಮಯ ತಪಸ್ವಿಗಳು'
ತತ್ತ್ವವಾದ ಆಫೀಸು,
ಗದಗ. ಪ್ರ – ೧೯೬೯

೪೩. ಪಂಚಮುಖಿ ಆರ್. ಎಸ್. 'ಕರ್ನಾಟಕ ಹರಿದಾಸ ಸಾಹಿತ್ಯ'
ಕನ್ನಡ ಸಾಹಿತ್ಯ ಪರಿಷತ್ತು,
ಬೆಂಗಳೂರು. ಪ್ರ – ೧೯೫೨

೪೪. ಬಾದರಾಯಣ ಮೂರ್ತಿ ವಿ. 'ದಾಸ ಸಾಹಿತ್ಯದಲ್ಲಿ ಸೃಷ್ಟಿ ಪ್ರಕರಣ'
ಪ್ರಕಟಣೆ ಶಾಖೆ,
ತಿರುಮಲ ತಿರುಪತಿ ದೇವಸ್ಥಾನಗಳು,
ತಿರುಪತಿ. ಪ್ರ – ೧೯೮೪

೪೫. –" – 'ದ್ವೈತ ವೇದಾಂತ ಚಂದ್ರಿಕೆ'
ದ್ವೈತ ವೇದಾಂತ ಅಧ್ಯಯನ ಮತ್ತು
ಸಂಶೋಧನಾ ಪ್ರತಿಷ್ಠಾನ,
ಕೃಷ್ಣರಾಜೇಂದ್ರ ರಸ್ತೆ,
ಬೆಂಗಳೂರು. ಪ್ರ – ೧೯೮೬

೪೬. ಭೀಮರಾವ್ ದಾವಣಗೆರೆ 'ವೈಕುಂಠ ವರ್ಣನೆ', ಪ್ರ – ೧೯೭೨

‘ ಗುಂಡಕ್ರಿಯೆ’, ಪ್ರ – ೧೯೭೨

೪೭. – " – ‘ಶ್ರೀ ಹರಿಸರ್ವೋತ್ತಮ ಸಾರ ಮತ್ತು ಸ್ವಪ್ನ ಪದ’ ಗಳ ವ್ಯಾಖ್ಯಾನ
ಶ್ರೀ ಹರಿದಾಸಭಾರತೀ ಗ್ರಂಥರತ್ನಮಾಲೆ
ಪ. ಹರಿದಾಸರತ್ನಂ ಗೋಪಾಲದಾಸರು
೧೪೨, ಗವಿಪುರಂ ಗುಟ್ಟಹಳ್ಳಿ
ಬೆಂಗಳೂರು. ಪ್ರ – ೧೯೭೪

೪೮. – " – ‘ಕೀಚಕವಧೆ’ (ವ್ಯಾಖ್ಯಾನ)
ಸಂಪಾದಕರು ಮತ್ತು ಪ್ರಕಾಶಕರು
ಹರಿದಾಸರತ್ನಂ ಗೋಪಾಲದಾಸರು
೧೪೨, ಗವಿಪುರಂ ಗುಟ್ಟಹಳ್ಳಿ
ಬೆಂಗಳೂರು. ಪ್ರ – ೧೯೭೪

೪೯. ಮುರಳೀಧರ ಎಚ್. ಎನ್. ‘ತಂಬೂರಿ ಮೀಟಿದವ’
ಅಂಕಿತ ಪ್ರಕಾಶನ, ಗಾಂಧಿಬಜಾರ್
ಬೆಂಗಳೂರು. ಪ್ರ – ೨೦೦೫

೫೦. ರಾಮಶೇಷನ್ ಎಂ. ಕೆ. ‘ಹರಿದಾಸ ಆಂದೋಲನ ಒಂದು ಅಧ್ಯಯನ’

೫೧. ರಾಜ ಎಸ್. ಗುರುರಾಜಾಚಾರ್ ‘ಅಜಯ ವಿಜಯೀಂದ್ರರು’

೫೨. ರಾಜಗೋಪಾಲಾಚಾರ್ಯ
ಶ್ರೀನಿವಾಸ ಹಾವನೂರ (ಸಂ.) ‘ಶ್ರೀ ವರಾಹತಿಮ್ಮಪ್ಪ ಹಾಗೂ ಇತರ
ದಕ್ಷಿಣ ಕನ್ನಡದವರ ಕೀರ್ತನೆಗಳು’
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಬೆಂಗಳೂರು. ಪ್ರ. ೨೦೦೩

೫೩. ರಾಮಚಂದ್ರ ರಾವ್ ಸಾ. ಕೃ. — 'ದಾಸ ಸಾಹಿತ್ಯ ಮತ್ತು ಸಂಸ್ಕೃತಿ'
ಕನ್ನಡ ಪುಸ್ತಕ ಪ್ರಾಧಿಕಾರ
ಚಾಮರಾಜಪೇಟೆ,
ಬೆಂಗಳೂರು. ಪ್ರ – ೨೦೦೩

೫೪. ವಸಂತ ಕುಷ್ಟಗಿ — 'ಕರ್ನಾಟಕ ಹರಿದಾಸ ಸಾಹಿತ್ಯ'
ಕನ್ನಡ ಸಾಹಿತ್ಯ ಪರಿಷತ್ತು,
ಬೆಂಗಳೂರು. ಪ್ರ – ೧೯೫೨

೫೫. – " – — 'ದಾಸ ಸಾಹಿತ್ಯದ ಹಾದಿಯಲ್ಲಿ'
ಶ್ರೀ ಬತ್ತೇರೇಶ ಪ್ರಕಾಶನ',
೨೬, ಆದರ್ಶನಗರ,
ಕಲಬುರ್ಗಿ. ಪ್ರ – ೧೯೮೬

೫೬. ವೆಂಕಟಾಚಲಶಾಸ್ತ್ರಿ ಟಿ. ವಿ. — 'ಕನ್ನಡ ಛಂದಃ ಸ್ವರೂಪ'
ಡಿ.ವಿ.ಕೆ. ಮೂರ್ತಿ, ಕೃಷ್ಣಮೂರ್ತಿಪುರಂ
ಮೈಸೂರು. ಪ್ರ – ೧೯೭೮

೫೭. ವೆಂಕಟೇಶಮೂರ್ತಿ ಹೆಚ್. ಎಸ್. — 'ಕೀರ್ತನಕಾರರು' ಪ್ರಸಾರಾಂಗ
ಬೆಂಗಳೂರು ವಿಶ್ವವಿದ್ಯಾನಿಲಯ,
ಬೆಂಗಳೂರು. ಪ್ರ – ೧೯೭೫

೫೮. ವೇದವ್ಯಾಸಾಚಾರ್ ಎಚ್.ಕೆ. — 'ಕರ್ನಾಟಕದ ಹರಿದಾಸರು'
ಶ್ರೀ ಪರಿಮಳ ಸಂಶೋಧನ ಮತ್ತು
ಪ್ರಕಾಶನ ಮಂದಿರ,
ನಂಜನಗೂಡು. ಪ್ರ – ೧೯೬೫

೫೯. ವೇಣುಗೋಪಾಲದಾಸರು ಟಿ. ಕೆ. — 'ಶ್ರೀ ವ್ಯಾಸರಾಜ ಗುರುಸಾರ್ವಭೌಮರು'
ಗುರುರಾಜ ಪ್ರಕಾಶನ, ಚಾಮರಾಜಪೇಟೆ

ಬೆಂಗಳೂರು. ಪ್ರ – ೧೯೮೫

೬೦. ವರದರಾಜರಾವ್ ಜಿ. (ಸಂ.) 'ಶ್ರೀಪಾದರಾಜರ ಕೃತಿಗಳು'
ಕನ್ನಡ ಅಧ್ಯಯನ ಸಂಸ್ಥೆ,
ಮೈಸೂರು ವಿಶ್ವವಿದ್ಯಾನಿಲಯ,
ಮೈಸೂರು. ಪ್ರ – ೧೯೮೭

೬೧. – " – (ಸಂ) 'ಹರಿಭಕ್ತಿ ವಾಹಿನಿ'
ವಿಶ್ವ ಕನ್ನಡ ಸಮ್ಮೇಳನ ಸಾಹಿತ್ಯ ಮಾಲೆ,
ಬೆಂಗಳೂರು. ಪ್ರ – ೧೯೮೩

೬೨. – " – 'ಹರಿದಾಸ ಸಾಹಿತ್ಯ ಸಾರ'
ಕನ್ನಡ ಅಧ್ಯಯನ ಸಂಸ್ಥೆ,
ಮೈಸೂರು ವಿಶ್ವವಿದ್ಯಾನಿಲಯ,
ಮೈಸೂರು. ಪ್ರ – ೧೯೮೭

೬೩. – " – ಕನ್ನಡ ಅಧ್ಯಯನ ಸಂಸ್ಥೆ,
ಮೈಸೂರು ವಿಶ್ವವಿದ್ಯಾನಿಲಯ,
ಮೈಸೂರು. ಪ್ರ – ೧೯೮೦

೬೪. ವ್ಯಾಸನಕೆರೆ ಪ್ರಭಂಜನಾಚಾರ್ಯ 'ರಾಘವೇಂದ್ರ ದರ್ಶನ'
ವ್ಯಾಸ ಮಧ್ವ ಸಂಶೋಧನ ಪ್ರತಿಷ್ಠಾನ(ರಿ.)
೬೭, ೫೦ ಅಡಿರಸ್ತೆ, ಹನುಮಂತನಗರ,
ಬೆಂಗಳೂರು. ೨೦೦೫ (೪ನೇ ಮುದ್ರಣ)

೬೫. ಶೇಷಗಿರಿ ರಾವ್ ಎಲ್.ಎಸ್. 'ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ'
ಸಂಪುಟ ೧೦
ಹೊಸಗನ್ನಡ ಸಾಹಿತ್ಯ,
ಬೆಂಗಳೂರು ವಿಶ್ವವಿದ್ಯಾನಿಲಯ
ಬೆಂಗಳೂರು. ಪ್ರ – ೧೯೭೫

೬೬. ಶಿವರುದ್ರಪ್ಪ ಜಿ. ಎಸ್. (ಸಂ) 'ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ'
ಸಂಪುಟ ೪,
ಬೆಂಗಳೂರು ವಿಶ್ವವಿದ್ಯಾನಿಲಯ
ಬೆಂಗಳೂರು. ಪ್ರ – ೧೯೭೮

೬೭. ಶ್ರೀನಿವಾಸಮೂರ್ತಿ ಹೆಚ್. ಎಸ್. (ಸಂ) 'ಗುರುಸಾರ್ವಭೌಮ ರಾಘವೇಂದ್ರ
ತೀರ್ಥರು'
ಉರಗಾದ್ರಿವಾಸ ವಿಠಲ ಪ್ರಕಾಶನ
೬೧, ೫ನೇ ಅಡ್ಡರಸ್ತೆ,
ನರಸಿಂಹರಾಜಾ ಕಾಲೋನಿ
ಬೆಂಗಳೂರು. ಪ್ರ – ೧೯೮೩

೬೮. ಶ್ರೀನಿವಾಸ ಜಿ. 'ಹರಿದಾಸ ಸಂದೇಶ'
ಹೇಮಂತ ಸಾಹಿತ್ಯ, ಭಾಷ್ಯಂ ರಸ್ತೆ,
ಬೆಂಗಳೂರು. ಪ್ರ – ೧೯೭೪

೬೯. ಶ್ರೀನಿವಾಸ ಹಾವನೂರ 'ಹೊಸಗನ್ನಡದ ಅರುಣೋದಯ'
ಕನ್ನಡ ಅಧ್ಯಯನ ಸಂಸ್ಥೆ,
ಮೈಸೂರು. ಪ್ರ – ೧೯೭೪

೭೦. – " – (ಸಂ) 'ಹರಿದಾಸರು ಹೊಗಳಿ ಹಾಡಿದ
ಶ್ರೀವಾದಿರಾಜರು',
ಶ್ರೀ ಆನಂದತೀರ್ಥ ಪ್ರತಿಷ್ಠಾನ,
(ಪೂರ್ಣಪ್ರಜ್ಞ ವಿದ್ಯಾಪೀಠ, ಬೆಂಗಳೂರು)
ಮತ್ತು ಶ್ರೀವಾದರಾಜ ಮೃತ್ತಿಕಾ
ವೃಂದಾವನ ಮಠ
(ಹಾವನೂರು, ಹಾವೇರಿ ಜಿಲ್ಲೆ)

೭೧. – " – (ಸಂ) 'ಹರಿದಾಸರು ಸ್ತುತಿಸಿದ ಮಂತ್ರಾಲಯ ಮಠದ ಯತಿವರೇಣ್ಯರು' ಶ್ರೀವಾದಿರಾಜ ಮೃತ್ತಿಕಾ ವೃಂದಾವನ ಮಠ ಹಾವನೂರು ಮತ್ತು ಕನಕ ಸಾಹಿತ್ಯ ಪ್ರತಿಷ್ಠಾನ, ಬೆಂಗಳೂರು

೭೨. ಶ್ರೀನಿವಾಸ ಹಾವನೂರ ಅರಳು ಮಲ್ಲಿಗೆ ಪಾರ್ಥಸಾರಥಿ (ಸಂ) 'ಶ್ರೀ ಶ್ರೀಪಾದರಾಜರ ಮತ್ತು ಶ್ರೀ ವ್ಯಾಸರಾಜರ ಕೀರ್ತನೆಗಳು' ಸಮಗ್ರ ದಾಸ ಸಾಹಿತ್ಯ ಸಂಪುಟ – ೧ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರು. ಪ್ರ – ೨೦೦೩

೭೩. ಸೀತಾರಾಮಯ್ಯ ವಿ. ವೆಂಕಟಸುಬ್ಬಯ್ಯ ಜಿ. (ಸಂ) 'ದಾಸ ಸಾಹಿತ್ಯ' ಐ.ಬಿ.ಎಚ್. ಪ್ರಕಾಶನ, ಗಾಂಧೀನಗರ, ಬೆಂಗಳೂರು. ಪ್ರ – ೧೯೬೭

೭೪. ಹರತಿ ಪ್ರಹ್ಲಾದ "ಶ್ರೀ ವಾಸುದೇವ ವಿಠ್ಠಲ ದಾಸರು" ಶ್ರೀ ಸಾರೋದ್ಧಾರ ಪ್ರಕಾಶನ, ಲಗ್ಗೆರೆ, ಬೆಂಗಳೂರು. ಪ್ರ – ೨೦೦೬

೭೫. ಹಯವದನ ಪುರಾಣಿಕ ಕೆ. 'ಲಕ್ಷ್ಮೀ ಶೋಭಾನೆ ಒಂದು ಅಧ್ಯಯನ' ಶ್ರೀ ಮಧ್ವಜಯಂತಿ ಪ್ರತಿಷ್ಠಾನ ಪೂರ್ಣಪ್ರಜ್ಞ ವಿದ್ಯಾಪೀಠ, ಬೆಂಗಳೂರು. ಪ್ರ – ೧೯೯೨.

